

# ವಿವಾಹ ಚಂದ್ರಿಕಾ

ಡಾ|| ವ್ಯಾಸನಕೆರೆ ಪ್ರಭಂಜನಾಚಾರ್ಯ

ಶ್ರೀ ವ್ಯಾಸಮಧ್ವ ಸಂಶೋಧನ ಪ್ರತಿಷ್ಠಾನ (ರಿ.)
ಬೆಂಗಳೂರು

# ಶ್ರೀವ್ಯಾಸಮಧ್ವಸಂಶೋಧನ ಪ್ರತಿಷ್ಠಾನ (ರಿ.)

'ಪಾಜಕ', ಸಂ. ೮೯/೨೪, ೩ನೇ ಅಡ್ಡರಸ್ತೆ, ಮೌಂಟ್ ಜಾಯ್ ರಸ್ತೆ, ಹನುಮಂತನಗರ, ಬೆಂಗಳೂರು - ೫೬೦ ೦೧೯
ದೂರವಾಣಿ ಸಂಖ್ಯೆಗಳು : ೦೮೦-೨೬೬೦೨೮೦೨, ೨೬೬೧೧೧೧೧

## ಸಂಸ್ಥೆಯ ಪ್ರಮುಖ ಯೋಜನೆಗಳು

೧. ಪ್ರಾಚೀನ ಸಂಸ್ಕೃತ ಹಸ್ತಪ್ರತಿಗ್ರಂಥಗಳನ್ನು ಸಂಗ್ರಹಿಸಿ, ವ್ಯವಸ್ಥಿತವಾಗಿ ಸಂರಕ್ಷಿಸುವುದು; ಈಗಾಗಲೇ ೨೦೦೦ಕ್ಕೂ ಹೆಚ್ಚು ಹಸ್ತಪ್ರತಿಗಳನ್ನು ಸಂಗ್ರಹಿಸಿ, ತನ್ನ 'ಶ್ರೀಜಯತೀರ್ಥ ಸಂಸ್ಕೃತ ಹಸ್ತಲಿಖಿತ ಗ್ರಂಥಾಲಯ'ದಲ್ಲಿ ಸಂರಕ್ಷಿಸುತ್ತಿದೆ.

೨. ಶ್ರೀವ್ಯಾಸಮಧ್ವರ ಕೃತಿಗಳ ಅನುವಾದ ಹಾಗೂ ವಿವರಣೆಗಳನ್ನೊಳಗೊಂಡ ಕೃತಿಗಳನ್ನು, ಹರಿದಾಸಸಾಹಿತ್ಯವನ್ನು ಪ್ರಕಾಶನಪಡಿಸುವುದು (ಐತರೇಯಪ್ರಕಾಶನ); ಈಗಾಗಲೇ ೩೦೦೦೦ ಪುಟಗಳಿಗೂ ಮೀರಿದ ಸಾಹಿತ್ಯವನ್ನು ಸಂಸ್ಕೃತ, ಕನ್ನಡ, ಆಂಗ್ಲ ಹಾಗೂ ತೆಲುಗು ಭಾಷೆಗಳಲ್ಲಿ ಪ್ರಕಾಶನ ಪಡಿಸಲಾಗಿದೆ.

೩. 'ಶ್ರೀರಾಘವೇಂದ್ರ ವೇದಾಂತಪಾಠಶಾಲಾ' ಎಂಬ ಸಂಸ್ಥೆಯನ್ನೂ ಪ್ರಾರಂಭಿಸಿ, ಪ್ರತಿನಿತ್ಯ ಸರ್ವ-ಮೂಲಗ್ರಂಥಗಳ ಪಾಠ-ಪ್ರವಚನ, ಸ್ತೋತ್ರಪಾಠ ಇತ್ಯಾದಿಗಳನ್ನು ಅನೇಕ ವರ್ಷಗಳಿಂದ ನಿರಂತರ ನಡೆಸುತ್ತಾ ಬಂದಿದೆ.

೪. 'ಶ್ರೀವ್ಯಾಸಮಧ್ವಸೇವಾಪುರಸ್ಕಾರ ಯೋಜನೆ': ಶ್ರೀವ್ಯಾಸಮಧ್ವರ ಸೇವೆ ಸಲ್ಲಿಸಿದ ವೃದ್ಧ ವಿದ್ವಾಂಸರಿಗೆ ಪ್ರತಿತಿಂಗಳು ಮಾಸಿಕ ಗೌರವಧನವನ್ನು ಆಜೀವ ಸಲ್ಲಿಸುವುದು; ಪ್ರಕೃತ ೨೬ ವಿದ್ವಾಂಸರಿಗೆ ರೂ. ೧೦೦೦/-ಗಳನ್ನು ಸಲ್ಲಿಸುತ್ತಿದೆ.

೫. ಶ್ರೀವ್ಯಾಸಮಧ್ವರ ಕೃತಿಗಳನ್ನು ಅಧ್ಯಯನ ಮಾಡುತ್ತ, ಲೌಕಿಕ ವಿದ್ಯೆಯ ವ್ಯಾಸಂಗ ಮಾಡುತ್ತಿರುವ ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಆರ್ಥಿಕಸಹಾಯ ನೀಡುವುದು.

೬. ಪ್ರತಿವರ್ಷ ಒಬ್ಬ ಶ್ರೇಷ್ಠ ಹಿರಿಯವಿದ್ವಾಂಸರಿಗೆ ರೂ. ೧೨,೦೦೦/-ಗಳ 'ಶ್ರೀವ್ಯಾಸಮಧ್ವಸೇವಾಪ್ರಶಸ್ತಿ'.

೭. ಮಹಾಭಾರತತಾತ್ಪರ್ಯನಿರ್ಣಯವನ್ನು ಪೂರ್ಣಕಂಠಪಾಠ ಒಪ್ಪಿಸುವ ವಿದ್ಯಾರ್ಥಿಗೆ ರೂ.೨೫,೦೦೦/- ಪ್ರಶಸ್ತಿ, ಸುಮಧ್ವವಿಜಯವನ್ನು ಒಪ್ಪಿಸುವ ವಿದ್ಯಾರ್ಥಿಗೆ 'ಶ್ರೀಮಧ್ವಪ್ರಿಯ' ಪ್ರಶಸ್ತಿ, ಹಾಗೂ ಹರಿಕಥಾಮೃತಸಾರವನ್ನು ಒಪ್ಪಿಸುವ ವಿದ್ಯಾರ್ಥಿನಿಗೆ 'ದಾಸಪ್ರಿಯ' ಪ್ರಶಸ್ತಿಪ್ರದಾನ.

೮. ಶ್ರೀವ್ಯಾಸಮಧ್ವರನ್ನು ಹಾಗೂ ಅವರ ಕೃತಿಗಳನ್ನು ಕುರಿತ ಸಂಶೋಧನಕೃತಿಗಳ ಪ್ರಕಾಶನಕ್ಕೆ ಆರ್ಥಿಕ ಸಹಾಯ.

೯. ಯುವಜನತೆಯಲ್ಲಿ ತಾತ್ತ್ವಿಕಜಾಗೃತಿಯನ್ನು ಉಂಟು ಮಾಡಲು ಕಾಲಕಾಲಕ್ಕೆ ಶ್ರೀವ್ಯಾಸಮಧ್ವರ ತತ್ತ್ವಗಳ ಬಗ್ಗೆ ಕಾರ್ಯಾಗಾರಗಳನ್ನು, ವಿಚಾರಸಂಕಿರಣಗಳನ್ನು ಮತ್ತು ವಿದ್ವದ್ಗೋಷ್ಠಿಗಳನ್ನು ಏರ್ಪಡಿಸುವುದು.

ಅಪಾರವೆಚ್ಚದ ಈ ಎಲ್ಲ ಯೋಜನೆಗಳಿಗಾಗಿ ಪ್ರತಿಷ್ಠಾನವು ಯಾವುದೇ ರೀತಿಯ ದೇಣಿಗೆಯನ್ನು ಆಸ್ತಿಕಜನತೆಯಿಂದ ಸ್ವಾಗತಿಸುತ್ತದೆ. ರೂ.೧೫,೦೦೦/- ಹಾಗೂ ಅದಕ್ಕಿಂತ ಹೆಚ್ಚಿನ ಮೊತ್ತದ ದೇಣಿಗೆಯನ್ನು ನೀಡುವವರಿಗೆ ಸರ್ವಮೂಲಗ್ರಂಥಗಳು, ಮಹಾಭಾರತತಾತ್ಪರ್ಯನಿರ್ಣಯ ಹಾಗೂ ಹರಿಕಥಾಮೃತಸಾರಗಳ ಅನುವಾದಗಳು ಸೇರಿದಂತೆ ಪ್ರತಿಷ್ಠಾನದ ಪ್ರಕಾಶನದಲ್ಲಿ ಲಭ್ಯವಿರುವ ಎಲ್ಲಾ ಗ್ರಂಥಗಳನ್ನು ಉಚಿತವಾಗಿ ನೀಡಲಾಗುವುದು.

### ವಿಶೇಷ ಸೂಚನೆ :

೧. ದೇಣಿಗೆಗಳನ್ನು "ಶ್ರೀವ್ಯಾಸಮಧ್ವಸಂಶೋಧನ ಪ್ರತಿಷ್ಠಾನ(ರಿ.)", ಬೆಂಗಳೂರು - ಈ ಹೆಸರಿಗೆ ನಗದು/ಚೆಕ್/ಡ್ರಾಫ್ಟ್ ಮೂಲಕ ಸಲ್ಲಿಸಿ ಅಧಿಕೃತ ರಸೀತಿಯನ್ನು ಪಡೆಯತಕ್ಕದ್ದು.

೨. ನಮ್ಮ ಪ್ರತಿಷ್ಠಾನಕ್ಕೆ ನೀಡುವ ಯಾವುದೇ ಬಗೆಯ ದೇಣಿಗೆಗೆ **80G** ಅನ್ವಯ ಆದಾಯ ತೆರಿಗೆ ವಿನಾಯಿತಿ ಉಂಟು.



# ವಿವಾಹ ಚಂದ್ರಿಕಾ

## (ವಿವಾಹದ ವಿಧಿವಿಧಾನಗಳ ಕೈಪಿಡಿ)


ಲೇಖಕರು :

**ಡಾ॥ ವ್ಯಾಸನಕೆರೆ ಪ್ರಭಂಜನಾಚಾರ್ಯ**



ಪ್ರಕಾಶನ :

**ಐತರೇಯ ಪ್ರಕಾಶನ ವ್ಯಾಸನಕೆರೆ**

ಶ್ರೀವ್ಯಾಸಮಧ್ವಸಂಶೋಧನ ಪ್ರತಿಷ್ಠಾನದ ಪ್ರಕಾಶನ ವಿಭಾಗ

'ಪಾಜಕ', ೮೯/೨೪, ೩ನೇ ಮುಖ್ಯರಸ್ತೆ, ಮೌಂಟ್‌ಜಾಯ್ ಎಕ್ಸ್‌ಟೆನ್ಷನ್,

ಹನುಮಂತನಗರ, ಬೆಂಗಳೂರು - ೫೬೦ ೦೧೯.

**Vivāhachandrikā (A handbook of marriage)** : by Vidyāvācaspati, Darśanaratnam, Pravacanācārya, Sacchāstra-vicakṣaṇaratnam, Śāstra-pravacanakesari, Madhvamatavardhana, Vidvaccūḍāmaṇi, Vedavidyā-vicakṣaṇa, Paṇḍita-ratnam, Vidyāvāridhi, Sacchāstra-pravacanapravīṇa, Gītāratnākara, Tattvavācaspati, Jnānaratnākara (and Recipient of Karnataka State Sanskrit Award-1999 & **Karnataka Rajyotsava Award-2002**, **Śrī Vidyāmānya Mahāpraśasti** of Śrī Pejavar Math, Udupi and **Rashtrapati Award - 2005**) **Dr.Vyasanakere Prabhanjanacharya**, M.A., Ph.D., D.Litt., F.I.B.R., F.U.W.A., Principal (Rtd.), Govt. First Grade College, K.R.Puram, Bangalore and Published by **Aitareya Prakāśana Vyasanakere**, Publication wing of **Śrī VyāsaMadhva Samśodhana Pratiṣṭhāna** Pājakâ, No.89/24, Third Cross, Mount Joy Extension, Hanumanthanagar, Bangalore - 560019. Pages: (152+16)

VIVAHA CHANDRIKA
**ISBN No.978-93-81826-07-2**

Phone : 26602802; 26611011.

Internet : www.vyasamadhwa.org

E-mail : info@vyasamadhwa.org



First Edition : 2012

Price : **Rs. 60/-**

Typeset by :

**Śrī Vyāsa Madhva Samśodhana Pratiṣṭhāna**

Printed at :
**Vāgartha,** N.R. Colony, Bangalore, Ph: 22427677.

# ಅನುಗ್ರಹವಚನ - ೧

## ಶ್ರೀಶ್ರೀಸತ್ಯಾತ್ಮತೀರ್ಥಶ್ರೀಪಾದರು,

### ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನ,ಶ್ರೀಮದುತ್ತರಾದಿಮಠ

ಮನುಷ್ಯನ ಜೀವನದಲ್ಲಿ ಅತಿಮುಖ್ಯವಾದ ಘಟ್ಟ ವಿವಾಹ. ಈ ವಿವಾಹದ ಮಹತ್ವ ಹಾಗೂ ವಿಧಿನಿಷೇಧಗಳನ್ನು ಚೆನ್ನಾಗಿ ತಿಳಿಯದೇ ಇವತ್ತಿನ ಅನೇಕ ಯುವಕ-ಯುವತಿಯರು ಹಾಗೂ ಹಿರಿಯರು ತಪ್ಪು ದಾರಿಯನ್ನು ತುಳಿಯುತ್ತಿದ್ದಾರೆ. ಯಾವುದೇ ಸಂಸ್ಕಾರಗಳಲ್ಲಿ ಲೋಪವಾದರೂ ಸಾಧಕನಿಗೆ ಅದು ದೊಡ್ಡ ಹಾನಿಯೇ. ಅದರಲ್ಲೂ ವಿವಾಹದಂತಹ ಮುಖ್ಯ ಸಂಸ್ಕಾರದಲ್ಲಿ ಲೋಪದೋಷಗಳಾದರೆ ಇಡೀ ಜೀವನವೇ ದುಃಖಮಯವಾಗುವ ಪ್ರಸಂಗವಿದೆ. ಸವರ್ಣೀಯರಲ್ಲಿಯೇ ವಿವಾಹ ನಡೆಯಬೇಕು. ಸಮಾನ ಗೋತ್ರಪ್ರವರಗಳು ಇರಬಾರದು. ವಿವಾಹಕಾಲದಲ್ಲಿ ನಡೆಯಬೇಕಾದ ವಿಧಿ-ವಿಧಾನಗಳು ಚೆನ್ನಾಗಿ ನಡೆಯಬೇಕು. ವಿವಾಹದ ನಂತರ ಇಬ್ಬರೂ ತಾಳ್ಮೆಯಿಂದ ಪ್ರೇಮದಿಂದ ಬಾಳಬೇಕು. ತಾಳ್ಮೆಗೆಟ್ಟು ಜಗಳವಾಡಿ ವಿಚ್ಛೇದನದ ಹಂತವನ್ನು ತಲುಪಬಾರದು. ಗೃಹಸ್ಥರಾಗಿ ಮಾಡಬೇಕಾದ ಕರ್ತವ್ಯವನ್ನು ಇಬ್ಬರೂ ಚೆನ್ನಾಗಿ ತಿಳಿದು ಧಾರ್ಮಿಕವಾದ ಜೀವನವನ್ನು ನಡೆಸಬೇಕು. ಮಕ್ಕಳಿಗೆ ಉತ್ತಮವಾದ ಸಂಸ್ಕಾರಗಳನ್ನು ನೀಡಬೇಕು. ಈ ಎಲ್ಲ ವಿಷಯಗಳನ್ನು ತಿಳಿಸುವ ಸಣ್ಣದಾದ ಸುಂದರವಾದ ಪುಸ್ತಕದ ಆವಶ್ಯಕತೆ ಇತ್ತು. ನಮ್ಮ ಗುರುಗಳಾದ ಶ್ರೀ೧೦೦೮ ಶ್ರೀಶ್ರೀಮತ್‌ಸತ್ಯಪ್ರಮೋದತೀರ್ಥ ಶ್ರೀಪಾದಂಗಳವರ ಪರಮಪ್ರಿಯ ಶಿಷ್ಯರಾದ ಪಂ.ಡಾ॥ಪ್ರಭಂಜನಾಚಾರ್ಯ ವ್ಯಾಸನಕೆರೆ ಇವರು ಸಮಾಜದಲ್ಲಿ ಇಂತಹ ಪುಸ್ತಕದ ಆವಶ್ಯಕತೆಯನ್ನು ಅರಿತು ''ವಿವಾಹಚಂದ್ರಿಕಾ'' ಎಂಬ ಸುಂದರವಾದ ಅತ್ಯುಪಯುಕ್ತವಾದ ಕೃತಿಯನ್ನು ರಚಿಸಿದ್ದಾರೆ. ಸಮಕಾಲದಲ್ಲಿ ಕಾಡುವ ಸಮಸ್ಯೆಗಳಿಗೆ ತಕ್ಕ ಪರಿಹಾರ ಸೂಚಿಸಿ, ಮಾರ್ಗದರ್ಶನ ಮಾಡುವ ಕೃತಿಗಳನ್ನು ರಚಿಸುವ ಅಭಿನಂದನೀಯ ಗುಣ ನಮ್ಮ ಪಂ.ಡಾ॥ಪ್ರಭಂಜನಾಚಾರ್ಯರದ್ದು. ಈ ಕೃತಿಯಲ್ಲಿ ಮೇಲೆ ಸೂಚಿಸಿದ ಎಲ್ಲ ವಿಷಯಗಳ ಹಾಗೂ ವಿವಾಹ ಸಂಸ್ಕಾರದಲ್ಲಿ ಬರುವ ಪ್ರತಿಯೊಂದು ಘಟ್ಟಗಳ ವಿವರಣೆ ಅದರ ಮಹತ್ವ ಎಲ್ಲವನ್ನು ಸಪ್ರಮಾಣವಾಗಿ ಮನಮುಟ್ಟುವ ಭಾಷೆಯಲ್ಲಿ ನಿರೂಪಣೆ ಮಾಡಿದ್ದಾರೆ. ಶಾಸ್ತ್ರೀಯ ಹಾಗೂ ವೈಜ್ಞಾನಿಕ ಕಾರಣಗಳನ್ನು ನೀಡಿ ಸಮರ್ಥನೆ ಮಾಡಿದ್ದಾರೆ. ಇದರಿಂದ ನಿಶ್ಚಿತವಾಗಿಯೂ ನಮ್ಮ ಅನೇಕ ಯುವಕ-ಯುವತಿಯರಲ್ಲಿ ಪರಿವರ್ತನೆ ಆಗಬಹುದೆಂದು ನಾವು ಭಾವಿಸಿದ್ದೇವೆ. ಇಂತಹ ಉತ್ತಮವಾದ, ಸ್ತುತ್ಯವಾದ, ಆವಶ್ಯಕವಾದ ಕೃತಿಯನ್ನು ರಚಿಸಿ ಪ್ರಕಾಶನ ಮಾಡುತ್ತಿರುವ ನಮ್ಮ ಮಠದ ಶಿಷ್ಯರಾದ ಪಂ.ಡಾ॥ಪ್ರಭಂಜನಾಚಾರ್ಯ ವ್ಯಾಸನಕೆರೆ ಇವರಿಗೆ ನಮ್ಮ ಉಪಾಸ್ಯಮೂರ್ತಿಗಳಾದ ಸೀತಾಸಮೇತಶ್ರೀಮೂಲರಾಮ ದಿಗ್ವಿಜಯ-ರಾಮ ವೇದವ್ಯಾಸದೇವರು ಮುಖ್ಯವಾಗಿ ಜ್ಞಾನಭಕ್ತಿ ವೈರಾಗ್ಯಗಳನ್ನು ನೀಡಿ ಆಯುರಾ-ರೋಗ್ಯಗಳನ್ನೂ ದಯಪಾಲಿಸಿ, ಇಂತಹ ವ್ಯಾಸಮಧ್ವಸೇವೆಯನ್ನು ನಿರಂತರವಾಗಿ ಮಾಡಿಸಲಿ ಎಂದು ಪ್ರಾರ್ಥಿಸುತ್ತೇವೆ.

ಬೆಂಗಳೂರು (೧೭-೦೮-೨೦೧೨) ಶ್ರೀಶ್ರೀಸತ್ಯಾತ್ಮತೀರ್ಥಶ್ರೀಪಾದರು

# ಅನುಗ್ರಹವಚನ - ೨

## ಶ್ರೀಶ್ರೀವಿದ್ಯಾಧೀಶತೀರ್ಥಶ್ರೀಪಾದರು,

### ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನ,ಶ್ರೀಪಲಿಮಾರುಮಠ

ಸಪ್ರೇಮ ನಾರಾಯಣ ಸ್ಮರಣೆಗಳು

ಮದುವೆಯನ್ನು ವಿವಾಹ, ಪಾಣಿಗ್ರಹಣ, ಕಲ್ಯಾಣ ಮುಂತಾದ ಹೆಸರುಗಳಿಂದ ಪ್ರಾಚೀನರು ಕರೆದಿದ್ದರು. ಕಲ್ಯಾಣ ಎಂಬ ಶಬ್ದವೇ ಮಂಗಲಕರ ಎಂಬ ಅರ್ಥವನ್ನು ತಿಳಿಸುತ್ತದೆ. ಯಾಕೆಂದರೆ ಪ್ರಾಚೀನರು ವಿವಾಹವನ್ನು ಮಂಗಲಕರವಾದದ್ದು ಎಂದೇ ತಿಳಿದಿದ್ದರು. ಹಾಗಾಗಿ ವಿವಾಹದಿಂದ ಹಾಳಾಯಿತು, ತೊಂದರೆಯಾಯಿತು ಎನ್ನಲು ಸಾಧ್ಯವೇ ಇಲ್ಲ. ಆದರೆ ಇಂದಿನ ಪಾಶ್ಚಾತ್ತೀಕರಣದ ಭರದಲ್ಲಿ ವಿವಾಹ ತನ್ನ ಅರ್ಥವನ್ನೇ ಕಳೆದುಕೊಂಡಿದೆ. ಇಂದು ವಿವಾಹವೇ ವಿವಾದವಾಗಿ ಪರಿಣಮಿಸಿದೆ. ವಿವಾಹದಿಂದಲೇ ತೊಂದರೆಗಳು ಪ್ರಾರಂಭವಾಗುತ್ತಿವೆ.

ಹಿಂದೆ ಒಂದು ವಿವಾಹ ನಡೆದರೆ ಎರಡು ಮನೆತನಗಳು ಮಾತ್ರ ಸಂಭ್ರಮಿಸುತ್ತಿರಲಿಲ್ಲ; ಇಡೀ ಸಮಾಜವೇ ಸಂಭ್ರಮಿಸುತ್ತಿತ್ತು. ಯಾಕೆಂದರೆ ವಿವಾಹವಾದ ಉತ್ತಮ ಗೃಹಸ್ಥನನ್ನು ಇತರ ಮೂರು ಆಶ್ರಮಗಳೂ ಆಶ್ರಯಿಸುತ್ತವೆ. ಹಾಗಾಗಿಯೇ 'ಧನ್ಯೋ ಗೃಹಸ್ಥಾಶ್ರಮಃ' ಎಂದಿದ್ದಾರೆ. ಉತ್ತಮ ಸಂಸ್ಕಾರದ ಗೃಹಸ್ಥನಿಂದಾಗಿ ಗತಿಸಿದ ಹಿಂದಿನ ಪಿತೃಗಳೂ ಸಂಭ್ರಮಿಸುತ್ತಿದ್ದರು. ಉತ್ತಮಗೃಹಸ್ಥನ ಸತ್ಕರ್ಮಗಳಿಂದ ತಮಗೆ ಮುಕ್ತಿ ಸಿಗುತ್ತದೆ ಎಂಬ ಕಾರಣಕ್ಕಾಗಿಯೇ ಅವರ ಸಂಭ್ರಮ. ಹಾಗೆಯೇ ಮುಂದಿನ ಪರಂಪರೆಯೂ ಉತ್ತಮ ಸಂಸ್ಕಾರ ಉಳ್ಳದ್ದಾಗಿ ಸಮಾಜಕ್ಕೆ ಆದರ್ಶಪ್ರಾಯವಾಗುವುದು. ಆದ್ದರಿಂದ ವಿವಾಹ-ವೆನ್ನುವುದು ಹಿಂದಿನ ಹಾಗೂ ಮುಂದಿನ ಪೀಳಿಗೆಗೆ ಒಂದು ಕೊಂಡಿಯಾಗಿರುತ್ತಿತ್ತು.

ವಿವಾಹದಲ್ಲಿ ಅಗ್ನಿಸಾಕ್ಷಿಯಾಗಿ ಪಾಣಿಗ್ರಹಣ ಮಾಡುತ್ತಾರೆ. ವರನಿಂದ 'ಧರ್ಮೇ ಚ ಅರ್ಥೇ ಚ ಕಾಮೇ ಚ ನಾತಿಚರಾಮಿ' ಎಂದು ಹೇಳಿಸುತ್ತಾರೆ. ಧರ್ಮಾರ್ಥಕಾಮಗಳಲ್ಲಿ ನಾನು ಈಕೆಯನ್ನು ಅತಿಕ್ರಮಿಸುವುದಿಲ್ಲ ಎಂಬ ಪ್ರತಿಜ್ಞೆಯನ್ನು ಮಾಡಿಸುತ್ತಾರೆ. ಈ ಪ್ರತಿಜ್ಞೆ ಇಂದು ಯಾಂತ್ರಿಕವಾಗಿದೆ. ಕಾಯೇನ ಮನಸಾ ವಾಚಾ ಮಾಡಿದ್ದರಿಂದಲೇ ಇಂದಿನ ವಿವಾಹಾಭಾಸಗಳು ಹಿಂದೆ ನಡೆಯುತ್ತಿರಲಿಲ್ಲ. ಇಂದಿನ ವಿವಾಹೋತ್ತರ ವಿಚ್ಛೇದನ ಮುಂತಾದವು ನಡೆಯದಿರಬೇಕಾದರೆ ಈ ಮಂತ್ರದ ಅರ್ಥವನ್ನು ಸರಿಯಾಗಿ ತಿಳಿದುಕೊಂಡಿರಬೇಕು. ಅದನ್ನು ಪಠಿಸುವ ವರನು ಅದನ್ನು ಸರಿಯಾಗಿ ಅರ್ಥೈಸಿ-ಕೊಂಡಿರಬೇಕು. ವಧು ಅದಕ್ಕೆ ಅನುಗುಣವಾಗಿರಬೇಕು. ಆದರೆ ಇಂದು ವಿವಾಹದಲ್ಲಿ ಮಂತ್ರಗಳ ತಂತ್ರಗಳ ಪ್ರಕ್ರಿಯೆಗಳು ಅರ್ಥವನ್ನೇ ಕಳೆದುಕೊಂಡಿರುವುದರಿಂದ ಈ ಎಲ್ಲಾ ಆಭಾಸಗಳು ನಡೆಯುತ್ತಿವೆ. ವಿವಾಹದ ಎಲ್ಲಾ ಪ್ರಕ್ರಿಯೆಗಳಿಗೆ ವಧು ಮತ್ತು ವರರು ಎಂದೆಂದಿಗೂ ಬದ್ಧರಾಗಿರಬೇಕು. ಆಗ ಮಾತ್ರ ಉತ್ತಮಸಮಾಜ ನಿರ್ಮಾಣ ಸಾಧ್ಯ.

ಇಂದಿನ ನೋಂದಣಿ ವಿವಾಹಗಳು ಅಥವಾ ಹಿರಿಯರ ಒಪ್ಪಿಗೆ ಇಲ್ಲದೆ ನಡೆಯುವ ಅಂತರ್ಜಾತಿ ವಿವಾಹಗಳು ಅರ್ಥಶೂನ್ಯ. ವಿವಾಹದ ನೋಂದಣಿ ಸರಕಾರದ ಸವಲತ್ತುಗಳಿಗೆ ಬೇಕಾದರೂ ಇಂತಹ ವಿವಾಹಗಳಂತೂ ದುರಂತವೇ ಸರಿ. ಇದು ಕೇವಲ ದೈಹಿಕ ಕಾಮನೆಗಾಗಿ ನಡೆಯುವಂತಹದ್ದು. ವಿವಾಹಮಂತ್ರಗಳು ಎಂದಿಗೂ ಅರ್ಥ-ಶೂನ್ಯವಲ್ಲ. ವಿವಾಹವೆನ್ನುವುದು ಮುಖ್ಯವಾಗಿ ಗೋತ್ರಪರಿವರ್ತನೆ ಮಾಡಿಸುವ ಕ್ರಮ. ಈ ಗೋತ್ರಪರಿವರ್ತನೆಯು ವಿಪ್ರಸದಸ್ಸಿನ ಮಂತ್ರಗಳಿಂದಾಗಿಯೇ ಆಗಬೇಕು. ಇಲ್ಲದಿದ್ದರೆ ಶೌಚಾಶೌಚಗಳ ಪ್ರಕ್ರಿಯೆಯೇ ಅರ್ಥಶೂನ್ಯವಾಗುತ್ತದೆ. ಮದುವೆಯ ನಂತರ ಹುಡುಗಿಗೆ ತಂದೆಯ ಕಡೆಯ ಯಾವುದೇ ಅಶೌಚಗಳು ಬಾಧಿಸುವುದಿಲ್ಲ, ಗಂಡನ ಕಡೆಯ ಅಶೌಚಗಳು ಮಾತ್ರ ಇರುತ್ತವೆ. ಸರಿಯಾದ ಕ್ರಮದಲ್ಲಿ ಗೋತ್ರಪರಿವರ್ತನೆ ಆಗದಿದ್ದರೆ ಆ ಹುಡುಗಿಯ ಆಚರಣೆ ಹೇಗೆ ನಡೆಯಬೇಕು? ಎಂಬ ಪ್ರಶ್ನೆ ಸಹಜ. ಈ ಎಲ್ಲಾ ಕಾರಣಗಳಿಂದಾಗಿ ವಿವಾಹವು ಎರಡೂ ಮನೆಯ ಹೆಂಗಸರ ಕಾರ್ಯಕ್ರಮ ಮಾತ್ರವಲ್ಲದೆ ವಿಪ್ರರ ಮಂತ್ರಗಳಿಂದಲೂ ತುಂಬಿರಬೇಕು. ಅಂದಿನ ಪ್ರಕ್ರಿಯೆಗಳು ಪ್ರತಿಯೊಂದೂ ಸರಿಯಾಗಿ ನಡೆಯಬೇಕು.

ಈ ಎಲ್ಲಾ ಸೂಕ್ಷ್ಮಮಾಹಿತಿಗಳುಳ್ಳ ಈ 'ವಿವಾಹಚಂದ್ರಿಕಾ' ಎಂಬ ಕೃತಿಯನ್ನು ವಿಸ್ತೃತವಾಗಿ ರಚಿಸಿ ಸಮಾಜಕ್ಕೆ ನೀಡಿರುವ ವಿದ್ವಾನ್ ಶ್ರೀಪ್ರಭಂಜನಾಚಾರ್ಯರವರ ಕಾರ್ಯ ಸ್ತುತ್ಯರ್ಹ. ನಿರಂತರ ಪಾಠಪ್ರವಚನಕ್ಕಾಗಿಯೇ ತಮ್ಮನ್ನು ಸಮರ್ಪಿಸಿಕೊಂಡಿರುವ ಆಚಾರ್ಯರು, ಸಮಾಜದ ಏಳಿಗೆಗಾಗಿ ಇಂತಹ ಉಪಯುಕ್ತ ಕೃತಿಗಳನ್ನು ನೀಡುತ್ತಿದ್ದಾರೆ. ಈ ಕೃತಿಯನ್ನು ವಿವಾಹಿತರು ಹಿರಿಯರು ಓದಿ ತಮ್ಮ ಮನೆಮಕ್ಕಳ ವಿವಾಹಗಳನ್ನು ಅರ್ಥಪೂರ್ಣಗೊಳಿಸಬೇಕು. ಅವಿವಾಹಿತ ಯುವಕರು ಓದಿ ತಾವು ಮುಂದೆ ವಿವಾಹದಲ್ಲಿ ನಡೆಯುವ ಕ್ರಮಗಳ ಅರ್ಥದ ಅನುಸಂಧಾನವನ್ನು ತಿಳಿದುಕೊಂಡು ತಾವು ಭಾಗವಹಿಸಬೇಕು. ಇದನ್ನು ಓದಿದಾಗ ಮಾತ್ರ ಅವರಿಗೆ ತಮ್ಮ ವಿವಾಹಸಂಸ್ಕಾರಗಳಲ್ಲಿ ಸ್ವತಃ ಶ್ರದ್ಧೆಯಿಂದ ಭಾಗವಹಿಸಲು ಸಾಧ್ಯವಾಗುತ್ತದೆ. ಇಲ್ಲವಾದರೆ ವಿವಾಹ ಗಳು ಆಡಂಬರ ಸಂಕೇತವಾಗಿರುತ್ತವೆಯೇ ಹೊರತು ಅದು ಸಂಸ್ಕಾರಯುತವಾಗುವುದಿಲ್ಲ.

ವಿವಾಹ ಎಂಬುದು ಸಂಸ್ಕಾರಯುತವಾಗಿ ನಡೆಯಬೇಕಾದರೆ ಈ ಕೃತಿಯು ಅತಿ ಅಗತ್ಯ. ಈ ನಿಟ್ಟಿನಲ್ಲಿ ಆಚಾರ್ಯರು ಮಾಡಿದ ಕೆಲಸ ಸ್ತುತ್ಯರ್ಹ. ಇದನ್ನು ವಧೂವರರು ಇಬ್ಬರೂ ತಮ್ಮಲ್ಲಿ ಅಳವಡಿಸಿಕೊಂಡಾಗ ಮಾತ್ರ ಶ್ರೀಪ್ರಭಂಜನಾಚಾರ್ಯರ ಈ ಶ್ರಮ ಸಾರ್ಥಕ. ಆಚಾರ್ಯರಿಂದ ಇನ್ನೂ ಇಂತಹ ಯುವಸಮಾಜಕ್ಕೆ ಉಪಯುಕ್ತವಾಗುವಂತಹ ಕೃತಿಗಳು ನಿರಂತರವಾಗಿ ಬರುತ್ತಿರಲಿ ಎಂದು ಹರಿಗುರುಗಳಲ್ಲಿ ವಿಶೇಷವಾಗಿ ಪ್ರಾರ್ಥಿಸುತ್ತೇವೆ. ಈ ಕೃತಿಯನ್ನು ಓದಿ ಇದನ್ನು ಅರ್ಥಾನುಸಂಧಾನ ಮಾಡಿಕೊಂಡು ತಮ್ಮ ಜೀವನದಲ್ಲಿ ಅಳವಡಿಸಿಕೊಳ್ಳುವಂತಹ ಎಲ್ಲಾ ವಧೂವರರಿಗೆ ಹಾಗೂ ಇದನ್ನು ಓದುವ ಎಲ್ಲಾ ಜಿಜ್ಞಾಸುಗಳಿಗೆ ನಮ್ಮ ಉಪಾಸ್ಯಮೂರ್ತಿ ಶ್ರೀರಾಮಕೃಷ್ಣದೇವರ ವಿಶೇಷ ಅನುಗ್ರಹವನ್ನು ಪ್ರಾರ್ಥಿಸುತ್ತೇವೆ.

ಇತ್ಯನೇಕ ನಾರಾಯಣಸ್ಮರಣೆಗಳು

ಮುಂಬಯಿ (೨೫.೦೮.೧೨) ಶ್ರೀಶ್ರೀವಿದ್ಯಾಧೀಶತೀರ್ಥರು,

# ಅನುಗ್ರಹವಚನ - ೩

## ಶ್ರೀಶ್ರೀವಿದ್ಯೇಶತೀರ್ಥಶ್ರೀಪಾದರು,

### ಶ್ರೀಸತ್ಯತೀರ್ಥ ಮಹಾಸಂಸ್ಥಾನ, ಶ್ರೀಭಂಡಾರಕೇರಿಮಠ

ಡಾ|| ವಿದ್ವಾನ್ ಶ್ರೀಪ್ರಭಂಜನಾಚಾರ್ಯರಿಂದ ವಿರಚಿತವಾದ ಈ ವಿವಾಹಚಂದ್ರಿಕಾ ಕೃತಿಯು ಅತ್ಯಂತ ಉಪಯುಕ್ತ ಮಾಹಿತಿಯನ್ನೊಳಗೊಂಡಿದ್ದು ಈಗ ಅತ್ಯಂತ ಪ್ರಸ್ತುತವೆನಿಸಿದೆ. ಇದು ಪುರೋಹಿತರಿಗೂ ಸಂಗ್ರಾಹ್ಯವಾಗಿದೆ.

ಆಧುನಿಕ ವಿಕೃತ ವಿವಾಹಗಳ ಬಗ್ಗೆ ಕ್ಷಕಿರಣವನ್ನು ಬೀರುವ ಈ ಕೃತಿಯು ಅವುಗಳಿಂದ ದೂರವಾಗಲು ಎಚ್ಚರಿಕೆಯನ್ನು ನೀಡುತ್ತದೆ. ಕನ್ಯೆಯರಿಗೆ ವಿವಾಹವು ಅನಿವಾರ್ಯ-ವೆಂಬುದನ್ನು ಮಹಾಭಾರತದ ವೃದ್ಧಕನ್ಯಾಚರಿತ್ರೆಯನ್ನುದಾಹರಿಸಿ ಈ ಕೃತಿಯಲ್ಲಿ ಸಮರ್ಥಿಸಲಾಗಿದೆ.

ವಿವಾಹವೈವಿಧ್ಯ, ಬ್ರಾಹ್ಮವಿವಾಹದ ವೈಶಿಷ್ಟ್ಯ, ನಿಷಿದ್ಧ ವಿವಾಹ, ಕನ್ಯೆಯ ಅರ್ಹತೆ, ವರನ ಅರ್ಹತೆ, ಕನ್ಯಾದಾನದ ಫಲ, ಕನ್ಯಾದಾನಕ್ಕೆ ಅರ್ಹತೆ, ವರದಕ್ಷಿಣೆ, ವರದಕ್ಷಿಣೆ ಪಿಡುಗಾಗಬಾರದೆಂಬ ಎಚ್ಚರಿಕೆಯ ಸಾಧಾರ ಮಾತು, ವಿವಾಹಕ್ಕೆ ಅವಶ್ಯವೆನಿಸಿದ ಜಾತಕ-ಮುಹೂರ್ತಗಳ ಆನುಕೂಲ್ಯ, ವಿವಾಹಾಂಗಗಳಾದ ವಾಗ್ದಾನ, ಕಾಶೀಯಾತ್ರೆ, ಅಂತಃಪಟಧಾರಣೆ, ಕನ್ಯಾದಾನಸಂಕಲ್ಪ, ಕಂಕಣಬಂಧನ, ಪಾಣಿಗ್ರಹಣ, ಔಪಾಸನ, ಶಿರೋಧಾರೆ, ಗೃಹಪ್ರವೇಶನೀಯ ವಧೂಪ್ರವೇಶಕಾಲ, ತ್ರಿರಾತ್ರವ್ರತ ಮೊದಲಾದ ವಿಷಯಗಳ ಬಗ್ಗೆ ಸಾಧಾರ ಮಾಹಿತಿಗಳು ಈ ಕೃತಿಯಲ್ಲಿ ಲಭ್ಯವಾಗುತ್ತವೆ.

ಪರಿಶಿಷ್ಟದಲ್ಲಿ ವಿವಿಧ ಮಂಗಳಾಷ್ಟಕಗಳ ಉಲ್ಲೇಖ ವಿವಾಹದಲ್ಲಿ ಅವಶ್ಯ ಪಠಿಸಬೇಕಾದ ಸೂರ್ಯಾಸೂಕ್ತಗಳ ಉಲ್ಲೇಖ ಹಾಗೂ ಸತಿ-ಪತಿಯರಿಗೆ ಹರಿದಾಸರ ಹಿತೋಪದೇಶಗಳ ಉಲ್ಲೇಖ ಈ ಕೃತಿಯ ಮಹತ್ತ್ವವನ್ನು ಹೆಚ್ಚಿಸಿದೆ.

ಒಟ್ಟಿನಲ್ಲಿ ಡಾಕ್ಟರೇಟ್ ಪದವಿಯ ಅಭ್ಯರ್ಥಿಗಳಿಗೆ ಪ್ರಬಂಧ ಮಂಡಿಸಲು ಅತ್ಯುಪ-ಯುಕ್ತವಾದ ಮಾಹಿತಿಯನ್ನೊದಗಿಸುವ ಈ ಕೃತಿ 'ಡಾಕ್ಟರೇಟ್‌ಮಿತ್ರ' ಎಂದರೂ ಅತಿಶಯೋಕ್ತಿವೆನಿಸಲಾರದು. ಇಂಥ ಕೃತಿಯನ್ನು ತಮ್ಮ ಸುಪುತ್ರನಾದ ಜಯಂತನ ವಿವಾಹೋತ್ಸವದ ಅಂಗವಾಗಿ ರಚಿಸಿ ಪ್ರಕಟಿಸಿ ಶ್ರೀಮಧ್ವಾಂತರ್ಗತ ಶ್ರೀಕೃಷ್ಣನಿಗೆ ಅರ್ಪಿಸಿದ ಈ ಸಂಸ್ಥಾನದ ಮುಖ್ಯ ಅಭಿಮಾನಿಗಳಾದ ವಿದ್ವಾನ್ ಡಾ||ಶ್ರೀಪ್ರಭಂಜನಾಚಾರ್ಯರನ್ನು ಅಭಿನಂದಿಸಿ, ಅವರಿಗೆ ಹರಿಗುರುಗಳಲ್ಲಿ ಜ್ಞಾನ-ಭಕ್ತಿ, ಆಯುರಾರೋಗ್ಯಾದಿ ಸಂಪತ್ತನ್ನು ಪ್ರಾರ್ಥಿಸುತ್ತೇವೆ. ಈ ಕೃತಿಯ ಮಹತ್ತ್ವನ್ನು ಅರಿತು ಜಿಜ್ಞಾಸುಗಳು ಈ ಕೃತಿಯ ಸದುಪಯೋಗವನ್ನು ಮಾಡಿಕೊಳ್ಳಬೇಕೆಂದು ಹಾರೈಸುತ್ತೇವೆ.

ಇತಿ ನಾರಾಯಣಸ್ಮರಣೆಗಳು

(೨೫.೦೮.೧೨)ಗುಲ್ಬರ್ಗಾ ಶ್ರೀಶ್ರೀವಿದ್ಯೇಶತೀರ್ಥಶ್ರೀಪಾದರು

# ವಿಷಯಾನುಕ್ರಮಣಿಕೆ

*****

## ಪರಿಶಿಷ್ಟಗಳು



*****

# ಮುನ್ನುಡಿ

ವಿವಾಹಸಂಸ್ಕಾರವು ಷೋಡಶಸಂಸ್ಕಾರಗಳಲ್ಲಿಯೇ ಅತ್ಯಂತ ಮಹತ್ವಪೂರ್ಣವಾದ ಸಂಸ್ಕಾರ. ಬ್ರಹ್ಮಚಾರಿ ಮೊದಲಾದ ಇತರರಿಗೆ ಆಶ್ರಯನೀಡುವ ಗೃಹಸ್ಥಾಶ್ರಮಕ್ಕೆ ಈ ಸಂಸ್ಕಾರವೇ ಕಾರಣ. ಇತರ ಸಂಸ್ಕಾರಗಳಿಗಿಂತ ಇದು ಭಿನ್ನವಾಗಿ ಕಾಣಲು ಅನೇಕ ಕಾರಣಗಳಿವೆ. ಸತ್ಸಂತತಿಯನ್ನು ಪಡೆಯುವ ಮೂಲಕ ವಂಶಾಭಿವೃದ್ಧಿಯಂತಹ ಅತ್ಯಂತ ಮುಖ್ಯವಾಗಿರುವ ಸಾಧನೆ ಇದರಿಂದ ಮಾತ್ರವೇ ನಡೆಯಲು ಸಾಧ್ಯ. ಎಂದರೆ, ಇತರ ಆಶ್ರಮಗಳು ಒಂದರ್ಥದಲ್ಲಿ ಸೀಮಿತವೆನ್ನಿಸಿದರೆ ವಿವಾಹವು ಈ ಅರ್ಥದಲ್ಲಿ ಅತ್ಯಂತ ವಿಶಿಷ್ಟವಾದ ಸ್ಥಾನವನ್ನು ಹೊಂದುವುದು. ಈ ಸಂಸ್ಕಾರವಿಲ್ಲದೆ ಬೆಳೆಯುವ ವಂಶಕ್ಕೆ ಸಮಾಜದ ಅಧಿಕೃತತೆಯ ಮನ್ನಣೆ ಲಭಿಸಲಾರದು. ಸಂತತಿಯ ಅಭಿವೃದ್ಧಿಗೆ ಮಾತ್ರವಲ್ಲದೆ, ಸಾಂಸ್ಕೃತಿಕವಾಗಿ ಒಂದು ವಂಶವು ಬೆಳೆಯಲು ಸಹ ವಿವಾಹದ ಪಾತ್ರ ಹಿರಿದು. ಮಾತೃಭಾಷೆ ಎಂಬ ಮಾತಿನಲ್ಲಿ ಮಗುವಿನ ಮೇಲೆ ಬೀಳುವ ತಾಯಿಯ ಸಂಸ್ಕಾರದ ಪ್ರಭಾವ ಎದ್ದು ಕಾಣುತ್ತದೆ.

ಇಂದು ಸಾಮಾನ್ಯವಾಗಿ ಹೆಚ್ಚಿನ ಸಂಸ್ಕಾರಗಳು ಲೋಪವಾಗಿದ್ದರೆ, ಉಳಿದ ಸಂಸ್ಕಾರಗಳು ವಿಕೃತಗೊಂಡಿವೆ. ಉಪನಯನ ಸಂಸ್ಕಾರದ ಬಗ್ಗೆ ಕಾಲದ ಪರಿವೆಯೇ ಇಲ್ಲದ ಜನರಿಂದಾಗಿ ಮಗನಿಗೆ ೨೦/೩೦ ವರ್ಷಗಳು ಪೂರೈಸಿದ್ದರೂ ಉಪನಯನ ಮಾಡದ ಅನೇಕ ತಂದೆತಾಯಿಗಳನ್ನು ಕಾಣಬಹುದು. ವಿವಾಹದ ವಿಕೃತಿ ಮತ್ತೊಂದು ಬಗೆಯದು.

ವಧೂವರರ ಆಯ್ಕೆಯಿಂದ ಮೊದಲ್ಗೊಂಡು ವಿವಾಹ ನಡೆಯುವ ಸ್ಥಳ, ಜಾತಕಗಳ ಹೊಂದಾಣಿಕೆ, ವಾಙ್ನಿಶ್ಚಯ, ವಿವಾಹದ ಪೂರ್ವಭಾವಿ ಕಾರ್ಯಗಳಾದ ಗೌರೀಹರಪೂಜೆ, ಕಾಶೀಯಾತ್ರೆ, ನಿರೀಕ್ಷಣ, ಮಾಂಗಲ್ಯಧಾರಣ, ಸಪ್ತಪದಿ, ಧ್ರುವಾರುಂಧತೀದರ್ಶನ, ಆರತಕ್ಷತೆ ಮೊದಲಾದ ಪ್ರತಿಹಂತದಲ್ಲೂ ಈ ಸಂಸ್ಕಾರ ನಿರೀಕ್ಷೆಗೆ ಮೀರಿ, ವಿಕೃತಗೊಂಡಿದೆ ಎಂಬುದು ವಿಷಾದದ ಸಂಗತಿ.

ವಿವಾಹದ ಪರಿಕಲ್ಪನೆಯೇ ಇಲ್ಲದ ಜನ ಒಂದೆಡೆಯಾದರೆ, ಮತ್ತೊಂದೆಡೆ ತೋಚಿದಂತೆ ವಿವಾಹವಾಗುವ ಪರಿಕಲ್ಪನೆಯ ಜನ ಮತ್ತೊಂದೆಡೆ; ಸಗೋತ್ರವಿವಾಹ, ಸಪ್ರವರಗಳವಿವಾಹ ಒಂದೆಡೆಯಾದರೆ, ಜಾತ್ಯಂತರವಿವಾಹ ಮತ್ತೊಂದು ಬಗೆಯದು. ವಾಗ್ದಾನವಾಗುತ್ತಲೇ ಗಂಡಹೆಂಡಿರಂತೆ ಜೊತೆಯಾಗಿ ಓಡಾಡುವ ಜನ ಒಂದು ಗುಂಪಿನವರಾದರೆ, ವಾಗ್ದಾನವಾದ ಕೆಲವೇ ದಿನಗಳಲ್ಲಿ ವಿವಾಹ ಮುರಿದುಕೊಳ್ಳುವ ಮತ್ತೊಂದು ಗುಂಪಿನವರು. ನಡೆಯುವ ಭಾರೀವೆಚ್ಚದ ಮದುವೆಗಳಲ್ಲಿ ಹೆಚ್ಚಿನವು ವಿಧಿವಿಧಾನಗಳನ್ನು ಅಳವಡಿಸಿಕೊಳ್ಳದಿರುವಂತಹವುಗಳು. ಗುರುಹಿರಿಯರ ಆಶೀರ್ವಾದದ

ಬಗ್ಗೆ ಪರಿಗಣನೆ ಇಲ್ಲದ ವಿವಾಹಗಳೇ ಹೆಚ್ಚು. ಚಾತುರ್ಮಾಸ್ಯ, ಅಧಿಕಮಾಸದಂತಹ ನಿಷಿದ್ಧಮಾಸಗಳಲ್ಲಿ, ಏಕಾದಶೀ, ಅಮಾವಾಸ್ಯೆಯಂತಹ ನಿಷಿದ್ಧ ತಿಥಿಗಳಲ್ಲಿ ವೈಷ್ಣವರೂ ಸಹ ವಿವಾಹಗಳನ್ನು ನಡೆಸುತ್ತಿರುವುದು ಎಂತಹ ವೈಪರೀತ್ಯ ! ವಿವಾಹ ಸಂಸ್ಕಾರದ ಪ್ರಮುಖ ಭಾಗಗಳಾದ ಸಮಾವರ್ತನ, ಕಾಶೀಯಾತ್ರೆ, ನಿರೀಕ್ಷಣ, ಮಾಂಗಲ್ಯಧಾರಣ, ಸಪ್ತಪದೀ, ಧ್ರುವಾರುಂಧತೀದರ್ಶನ ಮೊದಲಾದ ಅನೇಕ ಕಾರ್ಯಗಳಿಗೆ ಇಂದು ನಡೆಯುವ ವಿವಾಹಗಳಲ್ಲಿ ಪ್ರಾಧಾನ್ಯ ಲಭಿಸದಂತಾಗಿದೆ. ಸಾಮಾನ್ಯವಾಗಿ ಐದು ದಿವಸಗಳ ವಿವಾಹಕಾರ್ಯ ಇಂದು ಒಂದು ದಿನದಲ್ಲಿ ಎಂಬಂತೆ ಕೆಲವೊಮ್ಮೆಯಂತೂ ಕೇವಲ ಮಧ್ಯಾಹ್ನದವರೆಗೆ ಮಾತ್ರ ಎಂಬಂತೆ ನಡೆಯುವಂತಾಗಿದೆ. ಧ್ರುವಾರುಂಧತೀ-ದರ್ಶನ ಕಾರ್ಯವನ್ನಂತೂ ಮಟಮಟ ಮಧ್ಯಾಹ್ನದಂದೇ ನಡೆಸಿ ಪೂರೈಸುವ ಪುರೋಹಿತಭೂಪರ ಸಂಖ್ಯೆಯೂ ಅಗಾಧವಾಗಿಯೇ ಇದೆ. ವಧೂವರರ ಕಡೆಯ ಎಷ್ಟೋ ಹಿರಿಯರಿಗೆ ಗೋತ್ರ, ಪ್ರವರಗಳ ಪರಿಜ್ಞಾನವೂ ಇಲ್ಲದಂತಾಗಿದೆ. ಗುರು-ಹಿರಿಯರ ಸಮ್ಮತಿ ಹಾಗೂ ಉಪಸ್ಥಿತಿಗಳೊಂದಿಗೆ ನಡೆಯುವ ವಿವಾಹಗಳಂತೂ ವಿರಳವೆನ್ನಿಸತೊಡಗಿದೆ.

ವಿವಾಹದ ರೀತಿ ಹೀಗಿದ್ದರೆ, ನಡೆಯುವ ವಿವಾಹಗಳ ಪರಿಣಾಮವಂತೂ ಊಹಿಸಲೂ ಅಸಾಧ್ಯ ಎಂಬಂತಾಗಿದೆ. ಇಂದು ನಡೆಯುವ ಬಹುತೇಕ ವಿವಾಹಗಳು ಕೆಲವೇ ವರ್ಷಗಳಲ್ಲಿ ಕೆಲವೊಮ್ಮೆ ಕೆಲವೇ ತಿಂಗಳುಗಳಲ್ಲಿ ವಿಚ್ಛೇದನದಲ್ಲಿ ಪರ್ಯ-ವಸಾನಗೊಳ್ಳುತ್ತಿರುವುದು ಹೆಚ್ಚುತ್ತಿದೆ. ಮುದ್ರಿತ ಆಹ್ವಾನಪತ್ರಿಕೆ ಮತ್ತೊಮ್ಮೆ ಮುದ್ರಿತ-ವಾಗಿ ಅದರಲ್ಲಿನ ವಧೂ ಅಥವಾ ವರನ ಹೆಸರು ಬದಲಾಗುವ ಸನ್ನಿವೇಶಗಳೂ ಬಹಳಷ್ಟು ಕಾಣುತ್ತಿವೆ. ಎಂದರೆ ಆ ಹಂತದಲ್ಲಿಯೇ ನಿಶ್ಚಿತ ವಿವಾಹ ಮುರಿದುಬಿದ್ದಿದೆ ಎಂದರ್ಥವಾಗುವುದು. ವಿವಾಹದ ಕೆಲವೇ ದಿನಗಳಲ್ಲಿ ಮುರಿದುಬೀಳುವ ವಿವಾಹಗಳು ಒಂದು ಬಗೆಯವದಾದರೆ, ಒಂದೆರಡು ಮಕ್ಕಳಾದ ಬಳಿಕವೂ ಸಹ ಗಂಡ ಅಥವಾ ಹೆಂಡತಿ ವಿಚ್ಛೇದನ ಪಡೆದು ತಮ್ಮ ಸಹೋದ್ಯೋಗಿ ಮೊದಲಾದವರೊಂದಿಗೆ ಹೊಸ ಸಂಸಾರ ಆರಂಭಿಸುವ ಅನೇಕ ಪ್ರಸಂಗಗಳು ವರದಿಯಾಗುತ್ತಿವೆ. ಇತ್ತೀಚಿನ ವಿವಾಹ ವಿಚ್ಛೇದನಗಳಲ್ಲಿ ಎದ್ದುಕಾಣುವ ಮತ್ತೊಂದು ಅಂಶವೆಂದರೆ, ಇದರಲ್ಲಿ ಪ್ರಧಾನಪಾತ್ರ ಹಿಂದಿನ ಕಾಲದಲ್ಲಿದ್ದಂತೆ ಗಂಡಿನದಾಗಿರದೆ, ಹೆಣ್ಣಿನದಾಗಿರುವುದು. ವಿವಾಹಮಂಟಪ-ದಲ್ಲಿಯೋ ವಿವಾಹವಾದ ಕೆಲವೇ ದಿನಗಳ ಬಳಿಕವೋ ಹೆಚ್ಚಿನ ವಧುಗಳು ತಾವು ಬೇರೆಯವರೊಂದಿಗೆ ಸಂಬಂಧ ಬೆಳೆಸಿರುವುದಾಗಿ ತಿಳಿಸಿ, ವಿವಾಹಿತ ಪತಿಯಿಂದ ದೂರಾಗುವ ಪ್ರಸಂಗಗಳು ಕಾಣಸಿಗುತ್ತವೆ. ವಿಚ್ಛೇದನಗೊಳ್ಳದ ಅನೇಕ ಸಂಸಾರಗಳಲ್ಲಿ ಸಹ ಹೊಂದಾಣಿಕೆಯ ಅಭಾವದಿಂದಾಗಿ ಮನೆಯಲ್ಲಿ ನಿತ್ಯಕಲಹ ನಡೆಯುತ್ತಾ ಮಕ್ಕಳು ಮರಿಗಳ ಸ್ಥಿತಿ ಅತಂತ್ರವೆನ್ನಿಸತೊಡಗಿದೆ. ಅವಿಭಕ್ತ ಕುಟುಂಬದಲ್ಲಿ ನೆಲೆಸಲು,

ನಿರಾಕರಿಸುವ ಹೆಣ್ಣುಗಳ ಕಾಲವೊಂದಿತ್ತು. ಆದರೆ ಈಗ ಗಂಡನ ತಂದೆ ಅಥವಾ ತಾಯಿ ಸಹ ತಮ್ಮೊಂದಿಗೆ ಇರುವಂತಿಲ್ಲ ಎಂಬ ಬಯಕೆ ಹೊತ್ತ ಹೆಣ್ಣುಗಳ ಸಂಖ್ಯೆ ಮಿತಿಮೀರುತ್ತಿದೆ. ವಿವಾಹಕ್ಕೆ ಮುನ್ನವೇ ಅಂತಹ ನಿರ್ಬಂಧವನ್ನು ಹೇರಿ, ವಿವಾಹವಾಗುವ ಕನ್ಯೆಯರೂ ಇರುವರು. ಅತ್ತೆಮಾವಂದಿರು ಅಥವಾ ಅವರಿಬ್ಬರಲ್ಲಿ ಒಬ್ಬರು ಜೀವಿಸಿರದ ವರಗಳಿಗೆ ಆದ್ಯತೆ ಎಂಬ ಮನೋಭಾವ ಹೆಚ್ಚಿನವರದು. ಸಂಪ್ರದಾಯಸ್ಥ ಕುಟುಂಬಗಳ ಸ್ಥಿತಿಯಂತೂ ಇನ್ನೂ ಶೋಚನೀಯ. ಧರ್ಮದ ಬಗ್ಗೆ ಒಲವಿರುವ ಸಮಾನ ಮನಸ್ಸಿನ ವಧೂವರರನ್ನು ಕಾಣುವುದು ಅಪರೂಪ. ಹೆಚ್ಚಿನ ಪ್ರಸಂಗಗಳಲ್ಲಿ ಇಬ್ಬರದೂ ಧರ್ಮದ ಬಗ್ಗೆ ತಿರಸ್ಕಾರಭಾವದ ಧೋರಣೆಯಾದರೆ, ಇಬ್ಬರಲ್ಲಿ ಒಬ್ಬರಿಗೆ ಆದರಲ್ಲೂ ಹೆಚ್ಚಾಗಿ, ಕನ್ಯೆಯರಲ್ಲಿ ಇಂತಹ ಧರ್ಮಪ್ರತಿಗಾಮಿ-ಮನೋಭಾವ ಹೆಚ್ಚುತ್ತಿದೆ. ಸಾಮಾನ್ಯವಾದ ಮಡಿ-ಮೈಲಿಗೆ ವಾತಾವರಣವನ್ನೂ ಸಹ ಸಹಿಸಲಾಗದ ಪ್ರವೃತ್ತಿಯ ಯುವವರ್ಗದಲ್ಲಿ ಯುವತಿಯರದೇ ಸಿಂಹಪಾಲು ಎಂಬಂತಾಗಿದೆ.

ಇದರಿಂದಾಗಿ, ವಿವಾಹವೆಂದರೆ ಇಂದಿನ ದಿನಗಳಲ್ಲಿ ಸಂಭ್ರಮದ ಸಂಗತಿ ಎಂಬ ಭಾವ ಕಡಿಮೆಯಾಗುತ್ತಿದ್ದು, ಯುವಜನತೆಯು ಆದರ ಬಗ್ಗೆ ನಂಬಿಕೆಯನ್ನೇ ಕಳೆದು-ಕೊಳ್ಳುವಂತಾಗಿದೆ. ಕೂಡಿಬಾಳಿದರೆ ಸಾಕು ಎಂಬ ಮನೋಭಾವ ಯುವಜನರಲ್ಲಿ ಮೂಡತೊಡಗಿದೆ. ವಿಹಿತ ಮಂತ್ರಗಳ ಪಠನೆ, ಮಂಗಳಾಷ್ಟಕದ ಘೋಷ, ಮಂಗಲ-ಕರವಾದ ವಾದ್ಯಗೋಷ್ಠಿ ಮಂಟಪವನ್ನು ಅಲಂಕರಿಸುವ ಸದಾಚಾರಿಗಳಾದ ಗುರು-ಹಿರಿಯರ ವೃಂದ - ಇಂದು ವಿವಾಹದಂತಹ ಪ್ರಮುಖ ಸಂಸ್ಕಾರದಲ್ಲಿ ವಿರಳ-ವೆನ್ನಿಸತೊಡಗಿದೆ.

ವಿವಾಹ ಸಂಸ್ಕಾರವು ಹೀಗೆ ಅರ್ಥಹೀನ ಎನ್ನುವ ಹಂತ ತಲುಪಲು ಅದಕ್ಕಿರುವ ಪಾವಿತ್ರ್ಯದ ಪರಿಕಲ್ಪನೆಯ ಪರಿಜ್ಞಾನದ ಅಭಾವ ಒಂದು ಮುಖ್ಯಕಾರಣ ಎನ್ನಬಹುದು. ಜೀವನದ ಅಳಿವು-ಉಳಿವಿನ ಪ್ರಶ್ನೆ ಎನ್ನಿಸುವ ಈ ಸಂಸ್ಕಾರವು ಜೀವನಪೂರ್ತಿ ಮಾತ್ರವಲ್ಲದೆ, ಜನ್ಮಾಂತರದಲ್ಲೂ ಉಳಿಯುವ ಪವಿತ್ರ ಬಂಧ ಎಂಬ ಶಾಸ್ತ್ರೀಯ ಪರಿಕಲ್ಪನೆಯಲ್ಲಿ ಇದರ ಮಹತ್ವ ಪರಿಣಾಮಕಾರಿಯಾಗಿ ಬಿಂಬಿತವಾಗಿದೆ. ಸಪ್ತಪದಿಯ ಬಳಿಕ ಸತಿಪತಿಯರು ಎನ್ನಿಸುವ ದಂಪತಿಗಳು ಜೀವನಪೂರ್ತಿ ಎಂತಹ ವಿಷಮ ಪ್ರಸಂಗಗಳಲ್ಲೂ ಪರಸ್ಪರರ ಮೇಲಿನ ನಂಬಿಕೆ ಕಳೆದುಕೊಳ್ಳದೆ ಬದ್ಧತೆಯಿಂದ ಬಾಳುವ ನಿಯಮದ ಪರಿವೆ ಜನರಿಗೆ ಇಲ್ಲವಾಗುತ್ತಿದೆ. ಆದನ್ನು ತಿಳಿಯುವ ಅವಕಾಶವಾಗಲಿ, ತಿಳಿಸುವ ಜನರಾಗಲಿ, ಎರಡಕ್ಕೂ ಸೂಕ್ತವಾದ ವೇದಿಕೆಯಾಗಲಿ, ಇಂದು ಕಾಣುತ್ತಿಲ್ಲ.

ವಿವಾಹಸಂಸ್ಕಾರದ ಮಹತ್ವವನ್ನು ಅರಿಯದಿರುವುದೇ ಇಂತಹ ಸಕಲ ವಿಷಮತೆಗೂ ಮೂಲಕಾರಣ. ಆದರ ಸಮಗ್ರ ಪರಿಚಯವನ್ನು ಸೂಕ್ತರೀತಿಯಲ್ಲಿ ಪಡೆದುಕೊಂಡಾಗ

ಬಗ್ಗೆ ಪರಿಗಣನೆ ಇಲ್ಲದ ವಿವಾಹಗಳೇ ಹೆಚ್ಚು. ಚಾತುರ್ಮಾಸ್ಯ, ಅಧಿಕಮಾಸದಂತಹ ನಿಷಿದ್ಧಮಾಸಗಳಲ್ಲಿ, ಏಕಾದಶೀ, ಅಮಾವಾಸ್ಯೆಯಂತಹ ನಿಷಿದ್ಧ ತಿಥಿಗಳಲ್ಲಿ ವೈಷ್ಣವರೂ ಸಹ ವಿವಾಹಗಳನ್ನು ನಡೆಸುತ್ತಿರುವುದು ಎಂತಹ ವೈಪರೀತ್ಯ ! ವಿವಾಹ ಸಂಸ್ಕಾರದ ಪ್ರಮುಖ ಭಾಗಗಳಾದ ಸಮಾವರ್ತನ, ಕಾಶೀಯಾತ್ರೆ, ನಿರೀಕ್ಷಣ, ಮಾಂಗಲ್ಯಧಾರಣ, ಸಪ್ತಪದೀ, ಧ್ರುವಾರುಂಧತೀದರ್ಶನ ಮೊದಲಾದ ಅನೇಕ ಕಾರ್ಯಗಳಿಗೆ ಇಂದು ನಡೆಯುವ ವಿವಾಹಗಳಲ್ಲಿ ಪ್ರಾಧಾನ್ಯ ಲಭಿಸದಂತಾಗಿದೆ. ಸಾಮಾನ್ಯವಾಗಿ ಐದು ದಿವಸಗಳ ವಿವಾಹಕಾರ್ಯ ಇಂದು ಒಂದು ದಿನದಲ್ಲಿ ಎಂಬಂತೆ ಕೆಲವೊಮ್ಮೆಯಂತೂ ಕೇವಲ ಮಧ್ಯಾಹ್ನದವರೆಗೆ ಮಾತ್ರ ಎಂಬಂತೆ ನಡೆಯುವಂತಾಗಿದೆ. ಧ್ರುವಾರುಂಧತೀ-ದರ್ಶನ ಕಾರ್ಯವನ್ನಂತೂ ಮಟಮಟ ಮಧ್ಯಾಹ್ನದಂದೇ ನಡೆಸಿ ಪೂರೈಸುವ ಪುರೋಹಿತಭೂಪರ ಸಂಖ್ಯೆಯೂ ಅಗಾಧವಾಗಿಯೇ ಇದೆ. ವಧೂವರರ ಕಡೆಯ ಎಷ್ಟೋ ಹಿರಿಯರಿಗೆ ಗೋತ್ರ, ಪ್ರವರಗಳ ಪರಿಜ್ಞಾನವೂ ಇಲ್ಲದಂತಾಗಿದೆ. ಗುರು-ಹಿರಿಯರ ಸಮ್ಮತಿ ಹಾಗೂ ಉಪಸ್ಥಿತಿಗಳೊಂದಿಗೆ ನಡೆಯುವ ವಿವಾಹಗಳಂತೂ ವಿರಳವೆನ್ನಿಸತೊಡಗಿದೆ.

ವಿವಾಹದ ರೀತಿ ಹೀಗಿದ್ದರೆ, ನಡೆಯುವ ವಿವಾಹಗಳ ಪರಿಣಾಮವಂತೂ ಊಹಿಸಲೂ ಅಸಾಧ್ಯ ಎಂಬಂತಾಗಿದೆ. ಇಂದು ನಡೆಯುವ ಬಹುತೇಕ ವಿವಾಹಗಳು ಕೆಲವೇ ವರ್ಷಗಳಲ್ಲಿ ಕೆಲವೊಮ್ಮೆ ಕೆಲವೇ ತಿಂಗಳುಗಳಲ್ಲಿ ವಿಚ್ಛೇದನದಲ್ಲಿ ಪರ್ಯ-ವಸಾನಗೊಳ್ಳುತ್ತಿರುವುದು ಹೆಚ್ಚುತ್ತಿದೆ. ಮುದ್ರಿತ ಆಹ್ವಾನಪತ್ರಿಕೆ ಮತ್ತೊಮ್ಮೆ ಮುದ್ರಿತ-ವಾಗಿ ಅದರಲ್ಲಿನ ವಧೂ ಅಥವಾ ವರನ ಹೆಸರು ಬದಲಾಗುವ ಸನ್ನಿವೇಶಗಳೂ ಬಹಳಷ್ಟು ಕಾಣುತ್ತಿವೆ. ಎಂದರೆ ಆ ಹಂತದಲ್ಲಿಯೇ ನಿಶ್ಚಿತ ವಿವಾಹ ಮುರಿದುಬಿದ್ದಿದೆ ಎಂದರ್ಥವಾಗುವುದು. ವಿವಾಹದ ಕೆಲವೇ ದಿನಗಳಲ್ಲಿ ಮುರಿದುಬೀಳುವ ವಿವಾಹಗಳು ಒಂದು ಬಗೆಯವದಾದರೆ, ಒಂದೆರಡು ಮಕ್ಕಳಾದ ಬಳಿಕವೂ ಸಹ ಗಂಡ ಅಥವಾ ಹೆಂಡತಿ ವಿಚ್ಛೇದನ ಪಡೆದು ತಮ್ಮ ಸಹೋದ್ಯೋಗಿ ಮೊದಲಾದವರೊಂದಿಗೆ ಹೊಸ ಸಂಸಾರ ಆರಂಭಿಸುವ ಅನೇಕ ಪ್ರಸಂಗಗಳು ವರದಿಯಾಗುತ್ತಿವೆ. ಇತ್ತೀಚಿನ ವಿವಾಹ ವಿಚ್ಛೇದನಗಳಲ್ಲಿ ಎದ್ದುಕಾಣುವ ಮತ್ತೊಂದು ಅಂಶವೆಂದರೆ, ಇದರಲ್ಲಿ ಪ್ರಧಾನಪಾತ್ರ ಹಿಂದಿನ ಕಾಲದಲ್ಲಿದ್ದಂತೆ ಗಂಡಿನದಾಗಿರದೆ, ಹೆಣ್ಣಿನದಾಗಿರುವುದು. ವಿವಾಹಮಂಟಪ-ದಲ್ಲಿಯೋ ವಿವಾಹವಾದ ಕೆಲವೇ ದಿನಗಳ ಬಳಿಕವೋ ಹೆಚ್ಚಿನ ವಧುಗಳು ತಾವು ಬೇರೆಯವರೊಂದಿಗೆ ಸಂಬಂಧ ಬೆಳೆಸಿರುವುದಾಗಿ ತಿಳಿಸಿ, ವಿವಾಹಿತ ಪತಿಯಿಂದ ದೂರಾಗುವ ಪ್ರಸಂಗಗಳು ಕಾಣಸಿಗುತ್ತವೆ. ವಿಚ್ಛೇದನಗೊಳ್ಳದ ಅನೇಕ ಸಂಸಾರಗಳಲ್ಲಿ ಸಹ ಹೊಂದಾಣಿಕೆಯ ಅಭಾವದಿಂದಾಗಿ ಮನೆಯಲ್ಲಿ ನಿತ್ಯಕಲಹ ನಡೆಯುತ್ತಾ ಮಕ್ಕಳು ಮರಿಗಳ ಸ್ಥಿತಿ ಅತಂತ್ರವೆನ್ನಿಸತೊಡಗಿದೆ. ಅವಿಭಕ್ತ ಕುಟುಂಬದಲ್ಲಿ ನೆಲೆಸಲು,

ನಿರಾಕರಿಸುವ ಹೆಣ್ಣುಗಳ ಕಾಲವೊಂದಿತ್ತು. ಆದರೆ ಈಗ ಗಂಡನ ತಂದೆ ಅಥವಾ ತಾಯಿ ಸಹ ತಮ್ಮೊಂದಿಗೆ ಇರುವಂತಿಲ್ಲ ಎಂಬ ಬಯಕೆ ಹೊತ್ತ ಹೆಣ್ಣುಗಳ ಸಂಖ್ಯೆ ಮಿತಿಮೀರುತ್ತಿದೆ. ವಿವಾಹಕ್ಕೆ ಮುನ್ನವೇ ಅಂತಹ ನಿರ್ಬಂಧವನ್ನು ಹೇರಿ, ವಿವಾಹವಾಗುವ ಕನ್ಯೆಯರೂ ಇರುವರು. ಅತ್ತೆಮಾವಂದಿರು ಅಥವಾ ಅವರಿಬ್ಬರಲ್ಲಿ ಒಬ್ಬರು ಜೀವಿಸಿರದ ವರಗಳಿಗೆ ಆದ್ಯತೆ ಎಂಬ ಮನೋಭಾವ ಹೆಚ್ಚಿನವರದು. ಸಂಪ್ರದಾಯಸ್ಥ ಕುಟುಂಬಗಳ ಸ್ಥಿತಿಯಂತೂ ಇನ್ನೂ ಶೋಚನೀಯ. ಧರ್ಮದ ಬಗ್ಗೆ ಒಲವಿರುವ ಸಮಾನ ಮನಸ್ಸಿನ ವಧೂವರರನ್ನು ಕಾಣುವುದು ಅಪರೂಪ. ಹೆಚ್ಚಿನ ಪ್ರಸಂಗಗಳಲ್ಲಿ ಇಬ್ಬರದೂ ಧರ್ಮದ ಬಗ್ಗೆ ತಿರಸ್ಕಾರಭಾವದ ಧೋರಣೆಯಾದರೆ, ಇಬ್ಬರಲ್ಲಿ ಒಬ್ಬರಿಗೆ ಅದರಲ್ಲೂ ಹೆಚ್ಚಾಗಿ, ಕನ್ಯೆಯರಲ್ಲಿ ಇಂತಹ ಧರ್ಮಪ್ರತಿಗಾಮಿ-ಮನೋಭಾವ ಹೆಚ್ಚುತ್ತಿದೆ. ಸಾಮಾನ್ಯವಾದ ಮಡಿ-ಮೈಲಿಗೆ ವಾತಾವರಣವನ್ನೂ ಸಹ ಸಹಿಸಲಾಗದ ಪ್ರವೃತ್ತಿಯ ಯುವವರ್ಗದಲ್ಲಿ ಯುವತಿಯರದೇ ಸಿಂಹಪಾಲು ಎಂಬಂತಾಗಿದೆ.

ಇದರಿಂದಾಗಿ, ವಿವಾಹವೆಂದರೆ ಇಂದಿನ ದಿನಗಳಲ್ಲಿ ಸಂಭ್ರಮದ ಸಂಗತಿ ಎಂಬ ಭಾವ ಕಡಿಮೆಯಾಗುತ್ತಿದ್ದು, ಯುವಜನತೆಯು ಅದರ ಬಗ್ಗೆ ನಂಬಿಕೆಯನ್ನೇ ಕಳೆದು-ಕೊಳ್ಳುವಂತಾಗಿದೆ. ಕೂಡಿಬಾಳಿದರೆ ಸಾಕು ಎಂಬ ಮನೋಭಾವ ಯುವಜನರಲ್ಲಿ ಮೂಡತೊಡಗಿದೆ. ವಿಹಿತ ಮಂತ್ರಗಳ ಪಠನೆ, ಮಂಗಳಾಷ್ಟಕದ ಘೋಷ, ಮಂಗಲ-ಕರವಾದ ವಾದ್ಯಗೋಷ್ಠಿ ಮಂಟಪವನ್ನು ಅಲಂಕರಿಸುವ ಸದಾಚಾರಿಗಳಾದ ಗುರು-ಹಿರಿಯರ ವೃಂದ - ಇಂದು ವಿವಾಹದಂತಹ ಪ್ರಮುಖ ಸಂಸ್ಕಾರದಲ್ಲಿ ವಿರಳ-ವೆನ್ನಿಸತೊಡಗಿದೆ.

ವಿವಾಹ ಸಂಸ್ಕಾರವು ಹೀಗೆ ಅರ್ಥಹೀನ ಎನ್ನುವ ಹಂತ ತಲುಪಲು ಅದಕ್ಕಿರುವ ಪಾವಿತ್ರ್ಯದ ಪರಿಕಲ್ಪನೆಯ ಪರಿಜ್ಞಾನದ ಅಭಾವ ಒಂದು ಮುಖ್ಯಕಾರಣ ಎನ್ನಬಹುದು. ಜೀವನದ ಅಳಿವು-ಉಳಿವಿನ ಪ್ರಶ್ನೆ ಎನ್ನಿಸುವ ಈ ಸಂಸ್ಕಾರವು ಜೀವನಪೂರ್ತಿ ಮಾತ್ರವಲ್ಲದೆ, ಜನ್ಮಾಂತರದಲ್ಲೂ ಉಳಿಯುವ ಪವಿತ್ರ ಬಂಧ ಎಂಬ ಶಾಸ್ತ್ರೀಯ ಪರಿಕಲ್ಪನೆಯಲ್ಲಿ ಇದರ ಮಹತ್ವ ಪರಿಣಾಮಕಾರಿಯಾಗಿ ಬಿಂಬಿತವಾಗಿದೆ. ಸಪ್ತಪದಿಯ ಬಳಿಕ ಸತಿಪತಿಯರು ಎನ್ನಿಸುವ ದಂಪತಿಗಳು ಜೀವನಪೂರ್ತಿ ಎಂತಹ ವಿಷಮ ಪ್ರಸಂಗಗಳಲ್ಲೂ ಪರಸ್ಪರರ ಮೇಲಿನ ನಂಬಿಕೆ ಕಳೆದುಕೊಳ್ಳದೆ ಬದ್ಧತೆಯಿಂದ ಬಾಳುವ ನಿಯಮದ ಪರಿವೆ ಜನರಿಗೆ ಇಲ್ಲವಾಗುತ್ತಿದೆ. ಅದನ್ನು ತಿಳಿಯುವ ಅವಕಾಶವಾಗಲಿ, ತಿಳಿಸುವ ಜನರಾಗಲಿ, ಎರಡಕ್ಕೂ ಸೂಕ್ತವಾದ ವೇದಿಕೆಯಾಗಲಿ, ಇಂದು ಕಾಣುತ್ತಿಲ್ಲ.

ವಿವಾಹಸಂಸ್ಕಾರದ ಮಹತ್ವವನ್ನು ಅರಿಯದಿರುವುದೇ ಇಂತಹ ಸಕಲ ವಿಷಮತೆಗೂ ಮೂಲಕಾರಣ. ಅದರ ಸಮಗ್ರ ಪರಿಚಯವನ್ನು ಸೂಕ್ತರೀತಿಯಲ್ಲಿ ಪಡೆದುಕೊಂಡಾಗ

ಆದರ ಮಹತ್ತ್ವದ ಬಗ್ಗೆ ಸ್ಪಷ್ಟಕಲ್ಪನೆ ಬಂದು, ಆದರ ಪಾವಿತ್ರ್ಯದ ಪರಿಕಲ್ಪನೆ ಮನಸ್ಸಿನಲ್ಲಿ ಮೂಡುವಂತಾಗಿ ದಂಪತಿಗಳು ಜೀವನಪೂರ್ತಿ ಹೊಂದಾಣಿಕೆಯಿಂದ ಬಾಳಲು ಸಾಧ್ಯ.

ವಾಸ್ತವವಾಗಿ ವಿದ್ಯೆ, ಹೃದಯವೈಶಾಲ್ಯ ಮೊದಲಾದವು ಲಭಿಸಿರುವ ಈ ಮುಂದುವರೆದಿರುವ ಕಾಲದಲ್ಲಿ ವಿವಾಹ ಬಾಂಧವ್ಯವು ಇನ್ನೂ ಹೆಚ್ಚು ಸ್ಫುಟವಾಗಿ ಜನತೆಯ ಹೃದಯದಲ್ಲಿ ಮೂಡುವುದು ಸೂಕ್ತವೆನ್ನಿಸುತ್ತಿತ್ತು. ವಿದ್ಯೆಯೊಂದಿಗೆ ವಿವೇಕ ಹೆಚ್ಚುವುದು ಸಹಜ, ಆದರೆ ಇಂದಿನ ವಿದ್ಯಾಭ್ಯಾಸದ ರೀತಿ ಒಂದು ಬಗೆಯದಾದರೆ ಅನಂತರದ ಉದ್ಯೋಗದ ಪ್ರಕ್ರಿಯೆ ಮತ್ತೊಂದು ಬಗೆಯದು. ಎಂದರೆ ಮೌಲ್ಯಾಧಾರಿತವಾದ ಜೀವನದ ಬಗ್ಗೆ ಆಸ್ಥೆ ಮೂಡದೆ, ಕೇವಲ ಭೌತಿಕ ಸುಖಲೋಲುಪತೆಯು ಅಗಾಧಪ್ರಮಾಣದಲ್ಲಿ ಬೇರೂರತೊಡಗಿದೆ. ಆದರಿಂದಾಗಿ, ಸುವ್ಯವಸ್ಥಿತವಾಗಬಹುದಾಗಿದ್ದ ಬದುಕು ಅವ್ಯವಸ್ಥಿತವಾಗಿ, ನಮ್ಮ ಸನಾತನ ವಿವಾಹ ಬಾಂಧವ್ಯದ ಪರಿಕಲ್ಪನೆಗೆ ಕೊಡಲಿಪೆಟ್ಟು ಬಿದ್ದಂತಾಗಿದೆ.

ಇಂದಿನ ರಾಜಕೀಯ ಪರಿಸರವು ಸಂಸ್ಕಾರಗಳ ಪಾವಿತ್ರ್ಯದ ಬಗ್ಗೆ ಗಮನಕೊಡುವ ಸ್ಥಿತಿಯಲ್ಲಿ ಇಲ್ಲ. ಆದಕ್ಕೆ ಪೂರಕವೆಂಬಂತೆ ಹೆಚ್ಚಿನ ಮಠಮಾನ್ಯಗಳೂ ಸಹ ಸನಾತನ ಧರ್ಮರಕ್ಷಣೆಯನ್ನು ಹೊರತುಪಡಿಸಿದ, ಪ್ರಗತಿಯ ಚಿಂತನೆಯಲ್ಲಿ ತೊಡಗಿದ್ದು ಅವು ಮೇಲ್ನೋಟಕ್ಕೇ ಕಾಣುವಂತೆ ಹಣಕಾಸುಗಳನ್ನು ಕ್ರೋಢೀಕರಿಸುವ ವಿಚಿತ್ರ ಹವ್ಯಾಸಕ್ಕೆ ಬಲಿಯಾಗುತ್ತಿವೆ. ಸಮಾಜದ ನಿಜವಾದ ಸಂಪನ್ಮೂಲ ಸನಾತನವಾದ ಧರ್ಮಶ್ರದ್ಧೆ ಎಂಬುದನ್ನು ಇಂದಿನ ಆಸ್ತಿಕ ಸಂಸ್ಥೆಗಳೂ ಸಹ ಚಿಂತಿಸುತ್ತಿಲ್ಲ ಎಂಬುದು ಗಣನೀಯವಾದ ಲೋಪವೆನ್ನಿಸಿದೆ.

ನಮ್ಮ ಪರಂಪರೆ ವಿಧಿಸಿರುವುದು ಅರಿತು ನಡೆಯುವುದನ್ನು, ಆದರೆ ಇಂದಿನ ಯಾವುದೇ ಸನಾತನ ಸಂಸ್ಕಾರವೂ ಸಹ ಅರಿವಿನ ಬೆಳಕಿನಲ್ಲಿ ನಡೆಯದೆ, ಯಾಂತ್ರಿಕ ಆಚರಣೆಯ ಮಟ್ಟಿಗೆ ಸೀಮಿತಗೊಂಡಿದೆ. ಎಂದರೆ ವಿವಾಹ, ಉಪನಯನಾದಿ ಸಂಸ್ಕಾರಗಳು ಹೋಮಹವನಾದಿ ಪುಣ್ಯಕಾರ್ಯಗಳು, ಮೊದಲಾಗಿ ಪ್ರತಿಯೊಂದು ಧಾರ್ಮಿಕ ಕಾರ್ಯದಲ್ಲೂ ಸಹ ಅರ್ಥವಂತಿಕೆಗಿಂತ ತೋರಿಕೆಯೇ ಮೇಲುಗೈ ಸಾಧಿಸಿ, ವಿಚಾರಶೀಲರಿಗೆ ಆ ಬಗ್ಗೆ ಆದರವು ಹುಟ್ಟದಂತಾಗಿದೆ. ಮಾತ್ರವಲ್ಲದೆ, ತಿರಸ್ಕಾರಭಾವ ಮೂಡುವಂತಾಗಿದೆ. ತಿಳಿಸುವ ಆಸಕ್ತಿ ಇರದ ಹಿರಿಯರು, ಯುವಜನತೆಯು ತಿಳಿಯುವ ಆಸಕ್ತಿಗೆ ತಣ್ಣೀರೆರೆಚುವ ಮೂಲಕ ಸನಾತನಧರ್ಮದ ಜಿಜ್ಞಾಸೆ ಮರೀಚಿಕೆ ಎನ್ನಿಸತೊಡಗಿದೆ.

ಹಿಂದಿನ ಶತಕಗಳಲ್ಲಿ ವಿಧರ್ಮೀಯರ ಹಾವಳಿಯಿಂದ ನಲುಗಿದ್ದ ಹಿಂದೂಸಂಸ್ಕೃತಿ ಸಂಸ್ಕಾರಗಳ ಬಗೆಗಿನ ಸ್ಪಷ್ಟ ತಿಳುವಳಿಕೆಯಿಂದಾಗಿ ಮತ್ತೊಮ್ಮೆ ಚೇತರಿಸಿಕೊಂಡು ನೆಲೆಕಂಡುಕೊಳ್ಳುವಂತಾಗಿತ್ತು. ಆದರೆ ಸ್ವಾತಂತ್ರ್ಯೋತ್ತರ ಕಾಲದಲ್ಲಿನ ಬದಲಾದ

ಪರಿಸ್ಥಿತಿಯಲ್ಲಿ ಸನಾತನ ಪರಂಪರೆ ಅನೇಕ ಕಾರಣಗಳಿಂದ ಅವನತಿಯತ್ತ ಸಾಗುತ್ತಿದ್ದು ವಿಧರ್ಮೀಯರ ಮೇಲುಗೈ ಸಂಖ್ಯೆ ಮೊದಲಾಗಿ, ಪ್ರತಿಯೊಂದು ಹಂತದಲ್ಲೂ ವಿಜೃಂಭಿಸತೊಡಗಿದೆ. ಹೆಚ್ಚಿನ ಕುಟುಂಬಗಳಲ್ಲಿ ಸಂತತಿಯ ಸಂಖ್ಯೆ ಇಳಿದಿರುವುದು ಒಂದು ಬಗೆಯ ಅನಾಹುತವಾದರೆ, ಸಂಸ್ಕೃತಿಯ ಪರಿಜ್ಞಾನದ ಅಭಾವದಿಂದಾಗಿ, ವಿಧರ್ಮೀಯರತ್ತ ಆಕರ್ಷಿತವಾಗಿರುವ ಅನುಪಾತದಲ್ಲಿ ಕುಸಿದಿರುವ ಕೆಲವು ಕನ್ಯೆ-ಯರಿಂದಾಗಿ ಅವರ ಸಂಖ್ಯೆ ಮತ್ತಷ್ಟು ಕ್ಷೀಣಿಸತೊಡಗಿದೆ. ಇವೆಲ್ಲದರ ಪರಿಣಾಮವನ್ನು ಎದುರಿಸಲು ಇರುವ ಒಂದು ಸಮರ್ಥಮಾರ್ಗವೆಂದರೆ ಶಾಸ್ತ್ರೋಕ್ತವಿವಾಹದ ಸ್ಪಷ್ಟ ಪರಿಕಲ್ಪನೆ ಮಾತ್ರ. ಅದನ್ನು ಮರಳಿ ಪಡೆದಲ್ಲಿ ಸೀಮಿತವಾದರೂ, ಸದೃಢವೆನ್ನಿಸುವ ಸತ್ತ್ವಪೂರ್ಣವಾದ ಸಂತತಿಯನ್ನು ಸನಾತನ ಸಂಸ್ಕೃತಿ ಕಾಣಲು ಸಾಧ್ಯವಾಗುವುದು. ಈ ನಿಟ್ಟಿನಲ್ಲಿ ನಮ್ಮ ಹಿಂದಿನವರ ಸಾಧನೆ ಗಣನೀಯವಾದುದು.

ಇನ್ನು ಸದಾಚಾರಿಗಳಾಗಿದ್ದು ವೈದಿಕವೃತ್ತಿಯಲ್ಲಿರುವವರಿಗೆ ಹೆಣ್ಣು ಸಿಗುವುದಂತೂ ದುಸ್ತರವೆನ್ನಿಸತೊಡಗಿದೆ. ವಿದ್ವಾಂಸರು, ಪುರೋಹಿತರು, ಅರ್ಚಕರು ಮೊದಲಾ-ದವರಿಗೆ ಕನ್ಯೆ ಕೊಡಲು ಮುಂದೆ ಬರುವ ಜನಗಳ ಸಂಖ್ಯೆ ನಗಣ್ಯವೆನ್ನಿಸತೊಡಗಿದೆ. ಇವರು ಆರ್ಥಿಕವಾಗಿ ಎಷ್ಟೇ ಸುಭದ್ರವಾಗಿದ್ದರೂ ಸಹ ವೈದಿಕಸಂಸ್ಕೃತಿಯ ಬಗೆಗಿನ ಅವಜ್ಞೆ ಇದಕ್ಕೆ ಮುಖ್ಯ ಕಾರಣ. ತಮ್ಮ ಧಾರ್ಮಿಕಕಾರ್ಯಗಳಿಗೆ ಅನಿವಾರ್ಯವೆಂಬಂತೆ ಇವರನ್ನು ಅವಲಂಬಿಸುವ ಜನ ಅವರ ಬಗ್ಗೆ ಇಂತಹ ಅವಜ್ಞತಾಭಾವವನ್ನು ತಳೆಯುವುದು ಮೆಚ್ಚಲಾಗದ ಸಂಗತಿ. ಇದಕ್ಕೆ ಅಪವಾದವಿರುವಿದು ನಿಜವಾದರೂ ಅದು ಗಮನಾರ್ಹ ಸಂಖ್ಯೆಯಲ್ಲಿಲ್ಲ ಎಂಬುದು ಸತ್ಯ. ನಾನು ಕಂಡಿರುವಂತೆ ಅನೇಕ ಮನೆಗಳಲ್ಲಿ ಒಬ್ಬ ಗಂಡಸಿಗೂ ಮದುವೆಯಾಗದಿರುವ ಪ್ರಸಂಗಗಳು ಉಂಟು. ಇಷ್ಟು ಮಾತ್ರವಲ್ಲದೇ ಐಟಿ-ಬಿಟಿ ಉದ್ಯೋಗಿಗಳಾಗಿದ್ದರೂ, ಸದಾಚಾರದ ಬಗ್ಗೆ ಒಲವನ್ನು ಹೊಂದಿರುವ ವರಗಳ ಪಾಡೂ ಸಹ ಇದಕ್ಕಿಂತ ಹೆಚ್ಚು ಭಿನ್ನವೇನಲ್ಲ. ಸಾಮಾನ್ಯ ಸದಾಚಾರದ ಒಲವನ್ನೂ ಸಹಿಸಲಾಗದ ಕನ್ಯೆಯರು ಕನ್ಯಾಪಿತೃಗಳು ಇವರ ಹತ್ತಿರ ಸುಳಿಯಲೂ ಸಹ ಸಿದ್ಧರಿಲ್ಲ. ಎಷ್ಟೋ ಕಡೆಗಳಲ್ಲಿ ಕೆಲವು ಸಂಘ-ಸಂಸ್ಥೆಗಳು ಕನ್ಯಾ-ವರರ ಸಮಾವೇಶವನ್ನು ನಡೆಸಿದಾಗ ಹಾಜರಾದವರ ಸಂಖ್ಯೆ ನೂರುಗಟ್ಟಲೆ ಇದ್ದರೂ ಅದರಲ್ಲಿನ ಕನ್ಯೆಯರ ಸಂಖ್ಯೆ ಮಾತ್ರ ಕೇವಲ ಬೆರಳೆಣಿಕೆಯಷ್ಟು ಎಂಬ ವರದಿಯನ್ನು ನಾನು ಹತ್ತಾರು ಕಡೆ ಪ್ರವಚನಗಳಿಗೆ ಹೋದಾಗ ಕೇಳಿಸಿಕೊಂಡಿದ್ದೇನೆ. ಅದೇರೀತಿ ಮೈಲಿಗೆ ಬೆರಸದಿರುವಂತಹ ಸಾಮಾನ್ಯ ಕಟ್ಟಳೆಯನ್ನೂ ಸಹ ಪಾಲಿಸುವ ಮನೋಭಾವವನ್ನು ಕೆಲವು ವೈದಿಕಮನೆತನದ ಕನ್ಯೆಯರೇ ಹೊಂದಿಲ್ಲ ಎಂಬುದು ಅಚ್ಚರಿ ಹುಟ್ಟಿಸುವ ಸಂಗತಿ. ನಾನೇ ಕಂಡಿರುವಂತೆ ಉನ್ನತ ಉದ್ಯೋಗದಲ್ಲಿದ್ದು ಎಲ್ಲ ವಿಧವಾದ ಸಾಮಾಜಿಕ ಮನ್ನಣೆ ಸಂಸ್ಕೃತಿಗಳನ್ನು ಹೊಂದಿರುವ ಅನೇಕ ಆಸ್ತಿಕ

ಯುವಕರು ವಿವಾಹದ ಆಶೆಯನ್ನೇ ತೊರೆದಿರುವುದು ಸರ್ವಥಾ ಶೋಭಿಸುವ ಸಂಗತಿಯಲ್ಲ ; ಇದಕ್ಕೆಲ್ಲಾ ದಾನಕ್ಕೆ ಅರ್ಹವಾದ ಸತ್ಪಾತ್ರತೆಯ ಪರಿಕಲ್ಪನೆಯ ಅಭಾವವೇ ಕಾರಣ.

ಈ ಹಿನ್ನೆಲೆಯಲ್ಲಿ ವಿವಾಹಸಂಸ್ಕಾರದ ಸ್ಥೂಲಪರಿಚಯಕ್ಕಾಗಿ ಪ್ರಸ್ತುತ ಕೃತಿ 'ವಿವಾಹಚಂದ್ರಿಕಾ' ಸಿದ್ಧವಾಗಿದೆ. ನನ್ನ ಗಮನಕ್ಕೆ ಬಂದಂತೆ ಕನ್ನಡದಲ್ಲಿ ಈ ಬಗೆಯ ಕೃತಿಗಳು ತುಂಬಾ ವಿರಳ. ಸಾಮಾನ್ಯ ವಿವಾಹಸಂಸ್ಕಾರದ ಪ್ರಯೋಗದ ಮಟ್ಟಿಗೆ ಮಾತ್ರ ಕೆಲವು ಕೃತಿಗಳು ಅಲ್ಲಲ್ಲಿ ಕಂಡುಬರುವವಾದರೂ, ಒಟ್ಟಾಗಿ ಅದರ ಚಿತ್ರವನ್ನು ಸಮಗ್ರವೆಂಬಂತೆ ನೀಡುವ ಕೃತಿಗಳು ನಮ್ಮ ಸಂಸ್ಕಾರಗಳ ಬಗ್ಗೆ ಅಷ್ಟಾಗಿ ಕಂಡು-ಬರುವುದಿಲ್ಲ. ಈ ಕೊರತೆಯನ್ನು ನೀಗಿಸುವ ಒಂದು ಪ್ರಯತ್ನವಾಗಿ, ಈ ಕೃತಿ ರಚಿತ-ವಾಗಿದೆ. ವಿವಾಹದ ಬಗೆಗೆ ಸೂಕ್ತ ಪರಿಜ್ಞಾನವಿಲ್ಲದೆ, ತಪ್ಪು ದಾರಿ ಹಿಡಿಯುವ ಒಂದು ವರ್ಗಕ್ಕೆ ಇಂತಹ ಕೃತಿಯಿಂದ ಪ್ರಯೋಜನ ದೊರೆಯುವುದು ನಿಶ್ಚಿತ. ವಧೂವರರಲ್ಲಿ ವಿವಾಹದ ಬಗ್ಗೆ ಸೂಕ್ತ ಅರಿವು ಮೂಡಿದಲ್ಲಿ ಅಂತಹ ವಿವಾಹವು ಅರ್ಥವತ್ತಾಗಿ, ಯೋಗ್ಯವಾದ ಸಂತತಿ ಉಳಿದುಕೊಂಡು ಸಂಸ್ಕೃತಿಯ ಉಳಿವು ಸಾಧ್ಯವೆನ್ನಿಸುತ್ತದೆ.

ಪ್ರಸ್ತುತ ಕೃತಿಯನ್ನು ಸಿದ್ಧಪಡಿಸುವ ಯೋಜನೆ ಮನಸ್ಸಿನಲ್ಲಿ ಮೂಡಿದ್ದು ನನ್ನ ಸುಪುತ್ರ ಚಿ.ಜಯಂತನ ವಿವಾಹ ಸಂದರ್ಭದಲ್ಲಿ, ಅದಕ್ಕಾಗಿ ಅಧಿಕೃತವೆನ್ನಿಸುವ ನಿಬಂಧಗ್ರಂಥಗಳನ್ನು ಆಳವಾಗಿ ಪರಿಶೀಲಿಸುವ ಅವಕಾಶ ಲಭಿಸಿತು. ಪ್ರಧಾನ ಸ್ಮೃತಿ-ಗ್ರಂಥಗಳನ್ನು, ಧರ್ಮಸಿಂಧು ಮೊದಲಾದ ನಿಬಂಧಗ್ರಂಥಗಳನ್ನೂ ಹತ್ತಾರು ಬಾರಿ ಅವಲೋಕಿಸಿ, ವಿವಾಹಸಂಸ್ಕಾರದ ಒಂದು ಸ್ಪಷ್ಟ ಚಿತ್ರವನ್ನು ಕೊಡುವಂತೆ ಈ ಕೃತಿ ರಚಿತವಾಗಿದೆ. ಧರ್ಮಸಿಂಧು, ನಿರ್ಣಯಸಿಂಧು, ಸ್ಮೃತಿಚಂದ್ರಿಕಾ, ಸ್ಮೃತಿಕೌಸ್ತುಭ, ಸಂಸ್ಕಾರಪದ್ಧತಿ, ಸಂಸ್ಕಾರಧಾರಾ, ಜಯಸಿಂಹಕಲ್ಪದ್ರುಮ, ಪುರುಷಾರ್ಥಚಿಂತಾಮಣಿ, ಚತುರ್ವರ್ಗಚಿಂತಾಮಣಿ ಮೊದಲಾದ ನಿಬಂಧಗ್ರಂಥಗಳೊಂದಿಗೆ ವಿಶಿಷ್ಟ ವೈಷ್ಣವ-ನಿಬಂಧಗ್ರಂಥಗಳಾದ ಕೃಷ್ಣಾಚಾರ್ಯರ ಸ್ಮೃತಿಮುಕ್ತಾವಲೀ, ಶ್ರೀಛಲಾರೀ ನರಸಿಂಹಾಚಾರ್ಯರ ಸ್ಮೃತ್ಯರ್ಥಸಾಗರ, ಶ್ರೀಛಲಾರೀ ಶೇಷಾಚಾರ್ಯರ ನಿರ್ಣಯ-ರತ್ನ ಹಾಗೂ ಶ್ರೀತಿರುಮಲಾಚಾರ್ಯರ ನಿಬಂಧಚೂಡಾಮಣಿಯನ್ನು ಆಧರಿಸಿ ಈ ಕೃತಿ ಸಿದ್ಧವಾಗಿದೆ.

ವಿವಾಹಿತರಾಗುವ ವಧೂವರರಿಗೆ ಮಾತ್ರವಲ್ಲದೆ, ವಿವಾಹ ಮಾಡಿಸುವ ಪುರೋಹಿತರಿಗೂ ಸಹ ಮಾರ್ಗದರ್ಶಕವಾಗುವ ರೀತಿಯಲ್ಲಿ ಈ ಕೃತಿ ಸಿದ್ಧವಾಗಿದೆ. ಸಾಮಾನ್ಯ ವಿವಾಹಗಳಲ್ಲಿ ಮಂಗಲಾಷ್ಟಕದ ಪಠನೆಯೂ ಸಹ ಕಾಣದಾಗಿರುವ ದಿನಗಳಿವು. ಅದಕ್ಕಾಗಿ ವೈಷ್ಣವ ಪರಂಪರೆಯ ಮಂಗಲಾಷ್ಟಕಗಳನ್ನು ಪರಿಶಿಷ್ಟದಲ್ಲಿ ಕೊಡಲಾಗಿದೆ. ಋಗ್ವೇದದ ಸೂರ್ಯಾವರ್ಗವು ವಿವಾಹಸಂಸ್ಕಾರದ ಅನೇಕ

ಮುಖಗಳ ಬಗ್ಗೆ ಬೆಳಕು ಚೆಲ್ಲುವ ಅಪೂರ್ವಭಾಗ. ಅದನ್ನು ಅಳವಡಿಸಿಕೊಳ್ಳದ ವೈದಿಕವಿವಾಹದ ಕ್ರಮ ಅರ್ಥಹೀನವೆನ್ನಿಸುವುದು ನಿಶ್ಚಿತ. ಇಂದು ನಡೆಯುವ ವಿವಾಹಗಳಲ್ಲಿ ಸೂರ್ಯಾಸೂಕ್ತದ ಪಠನೆ ತೀರ ಅಪರೂಪವೆನ್ನಿಸಿದೆ. ಅದಕ್ಕಾಗಿ ಸಮಗ್ರವಾಗಿ ಅದನ್ನು ಪರಿಶಿಷ್ಟ-೨ರಲ್ಲಿ ಕೊಡಲಾಗಿದೆ. ಸಮಾಜವನ್ನು ಭಗವನ್ಮುಖಿ-ಯಾಗಿಸುವಲ್ಲಿ ಹರಿದಾಸಸಾಹಿತ್ಯದ ಕೊಡುಗೆ ಅಪಾರವಾದುದು. ಆ ಸಾಹಿತ್ಯದಲ್ಲಿ ದಂಪತಿಗಳಿಗೆ ವಿಶೇಷವಾಗಿ ನವವಧುವಿಗೆ ಉಪಯುಕ್ತವೆನ್ನಿಸುವ ಉಪದೇಶ ವಿಶೇಷವಾಗಿ ಕಂಡುಬರುತ್ತವೆ. ಅವುಗಳ ಸಾಮಾನ್ಯ ಪಠನೆಯೂ ಸಹ ಉತ್ತಮ ದಾಂಪತ್ಯ ಜೀವನಕ್ಕೆ ಅಪಾರ ನೆರವನ್ನು ನೀಡಬಲ್ಲದು. ಈ ಕಾರಣಕ್ಕಾಗಿ ಅಂತಹ ಕೆಲವು ದಾಸಸಾಹಿತ್ಯದ ಕೃತಿಗಳನ್ನು ಪರಿಶಿಷ್ಟ-೩ರಲ್ಲಿ ಕೊಡಲಾಗಿದೆ.

ಈ ಕೃತಿಯನ್ನು ಸಮಗ್ರವಾಗಿ ಅವಲೋಕಿಸಿ ಅನುಗ್ರಹವಚನಗಳನ್ನು ನೀಡಿರುವ ಪರಮಪೂಜ್ಯರಾದ ಶ್ರೀಮದುತ್ತರಾದಿಮಠಾಧೀಶರಾದ ಶ್ರೀಸತ್ಯಾತ್ಮತೀರ್ಥಶ್ರೀಪಾದರಿಗೂ, ಫಲಿಮಾರುಮಠಾಧೀಶರಾದ ಶ್ರೀವಿದ್ಯಾಧೀಶತೀರ್ಥಶ್ರೀಪಾದರಿಗೂ ಹಾಗೂ ಶ್ರೀಭಂಡಾರಕೇರಿಮಠಾಧೀಶರಾದ ಶ್ರೀವಿದ್ಯೇಶತೀರ್ಥಶ್ರೀಪಾದರಿಗೂ ನನ್ನ ಭಕ್ತಿ-ಪೂರ್ವಕ ಪ್ರಣಾಮಗಳನ್ನು ಸಮರ್ಪಿಸುತ್ತೇನೆ. ಚಾತುರ್ಮಾಸ್ಯದ ಎಡೆಬಿಡದ ಕಾರ್ಯಕ್ರಮಗಳ ಮಧ್ಯೆಯೂ ಪರಮಪೂಜ್ಯ ಶ್ರೀಪಾದರು ಇದನ್ನು ಅವಲೋಕಿಸುವ ಕೃಪೆ ತೋರಿರುವುದು ನನ್ನ ಪರಮಭಾಗ್ಯವೆಂದು ಭಾವಿಸುವೆ.

ಈ ಕೃತಿಯ ಪ್ರಕಾಶನಕ್ಕೆ ಪ್ರಾಯೋಜಕರು ಗುಲ್ಬರ್ಗಾದ **ಶ್ರೀಮತಿ ವಾಣಿ ಕುಲಕರ್ಣಿ ಹಾಗೂ ಡಾ||ವಿ.ಎಚ್.ಕುಲಕರ್ಣಿ** ದಂಪತಿಗಳು ; ಅವರು ಅನೇಕ ದಶಕಗಳಿಂದ ಪ್ರತಿವರ್ಷವೂ ಸಹ ಗುಲ್ಬರ್ಗಾದಲ್ಲಿ ನನ್ನ ಪ್ರವಚನವನ್ನು ಏರ್ಪಡಿಸುತ್ತಾ ವಿಶೇಷ ರೀತಿಯಲ್ಲಿ ಜ್ಞಾನಪ್ರಸಾರಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವ ಆಸ್ತಿಕರು, ಶ್ರೀಹರಿಗುರುಗಳ ವಿಶೇಷಭಕ್ತರು. ಶ್ರೀಮತಿ ವಾಣಿ ಕುಲಕರ್ಣಿಯವರು ತಮ್ಮ ತಂದೆ **ದಿ.ಭೀಮರಾವ್ ರಂಗನಾಥರಾವ್ ಬೆಳ್ಳಿಗುಂಡು ಹಾಗೂ ತಾಯಿ ದಿ.ಸರೋಜಾಬಾಯಿ** (ತುಂಗಕ್ಕ) ಭೀಮರಾವ್ ಬೆಳ್ಳಿಗುಂಡು (ತಂದೆ ಸಿರಿವಿಠಲ ಎಂಬ ಅಂಕಿತದಿಂದ ಅನೇಕ ಕೀರ್ತನೆಗಳನ್ನು ರಚಿಸಿದವರು) ಇವರಿಬ್ಬರ ಸ್ಮರಣಾರ್ಥ ಈ ಕೃತಿಯ ಪ್ರಕಾಶನಕ್ಕೆ ಸಹಕರಿಸಿರುವರು. ಇದಕ್ಕಾಗಿ ಅವರಿಬ್ಬರನ್ನೂ ವಿಶೇಷವಾಗಿ ಅಭಿನಂದಿಸುತ್ತೇನೆ. ಡಿ.ಟಿ.ಪಿ. ಕಾರ್ಯ ಶಶಿಕಲಾ.ಬಿ.ಎನ್ ಹಾಗೂ ಭಾಗ್ಯಲಕ್ಷ್ಮೀ.ಕೆ.ಆರ್ ಅವರದು. ಸಹಕಾರ ಆರ್. ಆನಂದಪದ್ಮನಾಭ, ಎಂ.ಯಾದವ್ ಹಾಗೂ ನನ್ನ ಪುತ್ರ ಟಿ.ಜಯಂತ ಅವರದು. ಮುದ್ರಣ ವಾಗರ್ಥ ಅವರದು. ಈ ಎಲ್ಲರಿಗೂ ನಮ್ಮ ಪ್ರತಿಷ್ಠಾನವು ಋಣಿ.

ಬೆಂಗಳೂರು (೨೭.೦೮.೨೦೧೨) **ವ್ಯಾಸನಕೆರೆ ಪ್ರಭಂಜನಾಚಾರ್ಯ**
ಶ್ರೀನಂದನ - ಅಧಿಕ ಭಾದ್ರಪದ ಶುಕ್ಲ ಏಕಾದಶೀ

|| ಶ್ರೀಃ ||

ಅಥೋ ಕರಾಭ್ಯಾಂ ಪ್ರತಿಗೃಹ್ಯ ಮಾಲಾ-
ಮಮ್ಲಾನಪದ್ಮಾಂ ಜಲಜಾಯತಾಕ್ಷೀ ।
ಉಪೇತ್ಯ ಮಂದಂ ಲಲಿತೈಃ ಪದೈಸ್ತಾಂ
ತದಂಸ ಆಸಜ್ಯ ಚ ಪಾರ್ಶ್ವತೋಽಭವತ್ ॥ -ಮ.ಭಾ.ತಾ.ನಿ.(೪/೨೮)

ಜನಾರ್ದನಶ್ಚ ರುಗ್ಮಿಣೀಕರಂ ಶುಭೇ ದಿನೇಽಗ್ರಹೀತ್ ।
ಮಹೋತ್ಸವಸ್ತದಾಽಭವತ್ ಕುಶಸ್ಥಲೀನಿವಾಸಿನಾಮ್ ॥ -ಮ.ಭಾ.ತಾ.ನಿ.(೧೭/೧೭೬)

ರಮೈವ ಸಾ ಹಿ ಭೂರಿತಿ ದ್ವಿತೀಯಮೂರ್ತಿರುತ್ತಮಾ ।
ಬಭೂವ ಸತ್ರಜಿತ್ಸುತಾ ಸಮಸ್ತಲೋಕಸುಂದರೀ ॥ -ಮ.ಭಾ.ತಾ.ನಿ.(೧೭/೨೧೮)

ಪಾಂಚಾಲಕೇಷು ಚ ಮಹೋತ್ಸವ ಆಸ ರಾಜಾ
ತುಷ್ಟೋಽಭವತ್ ಸಹ ಸುತೈಶ್ಚ ನಿಜೈಶ್ಚ ಸರ್ವೈಃ ।
ಪೌರೈಶ್ಚ ಜಾನಪದಿಕೈಶ್ಚ ಯಥೈವ ರಾಮೇ
ದತ್ತ್ವಾ ಸುತಾಂ ಜನಕ ಆಪ ಮುದಂ ತತೋಽನು ॥ -ಮ.ಭಾ.ತಾ.ನಿ.(೧೯/೧೫೯)

ಅರ್ಥಂ ಕಮಪ್ಯನವಮಂ ಪುರುಷಾರ್ಥಹೇತುಂ
ಪುಂಸಾಂ ಪ್ರದಾತುಮುಚಿತಾಮುಚಿತಸ್ವರೂಪಾಮ್ ।
ಕನ್ಯಾಂ ಸುವರ್ಣಲಸಿತಾಮಿವ ವೇದವಿದ್ಯಾಂ
ಜಗ್ರಾಹ ವಿಪ್ರವೃಷಭಪ್ರತಿಪಾದಿತಾಂ ಸಃ ॥ -ಸುಮಧ್ವವಿಜಯ (೨/೧೨)

★★★★★

ಶೋಭನವೆನ್ನಿರೆ ಸುರರೊಳು ಸುಭಗನಿಗೆ ಶೋಭನವೆನ್ನಿ ಸುಗುಣನಿಗೆ ।
ಶೋಭನವೆನ್ನಿ ತ್ರಿವಿಕ್ರಮರಾಯಗೆ ಶೋಭನವೆನ್ನಿ ಸುರಪ್ರಿಯಗೆ ॥

ಲಕ್ಷ್ಮೀ ನಾರಾಯಣರ ಚರಣಕ್ಕೆ ಶರಣೆಂಬೆ ಪಕ್ಷಿವಾಹನ್ನಗೆರಗುವೆ ।
ಪಕ್ಷಿವಾಹನ್ನಗೆರಗುವೆ ಅನುದಿನ ರಕ್ಷಿಸಲಿ ನಮ್ಮ ವಧುವರರ ॥

ಈ ತರದ ಸುರರ ಸುತ್ತ ನೋಡುತ ಲಕ್ಷ್ಮಿ ಚಿತ್ತವ ಕೊಡದೆ ನಸುನಗುತ ।
ಚಿತ್ತವ ಕೊಡದೆ ನಸುನಗುತ್ತ ಬಂದು ಪುರುಷೋತ್ತಮನ ಕಂಡು ನಮಿಸಿದಳು ॥

ನಾನಾ ಕುಸುಮಗಳಿಂದ ಮಾಡಿದ ಮಾಲೆಯ ಶ್ರೀನಾರಿ ತನ್ನ ಕರದಲ್ಲಿ ।
ಪೀನಕಂಧರರದ ತ್ರಿವಿಕ್ರಮರಾಯನ ಕೊರಳಿನ ಮೇಲಿಟ್ಟು ನಮಿಸಿದಳು ॥

ಉಟ್ಟ ಪೊಂಬಟ್ಟೆಯು ತೊಟ್ಟ ಭೂಷಣಗಳು ಇಟ್ಟ ನವರತ್ನದ ಮುಕುಟವು ।
ದುಷ್ಟಮರ್ದನನೆಂಬ ಕಡೆಯ ಪೆಂಡೆಯಗಳ ಇಟ್ಟದ್ದ ಹರಿಗೆ ವಧುವಾದಳು ॥

-ಶ್ರೀವಾದಿರಾಜಸ್ವಾಮಿಗಳ ಲಕ್ಷ್ಮೀಶೋಭನಪದ

★★★★★

# ವಿವಾಹ ಚಂದ್ರಿಕಾ

ವಿವಾಹವು ಮಾನವಜೀವಿಯ ಪರಿಪೂರ್ಣತೆಗೆ ಅಗತ್ಯವಾದ ಪ್ರಧಾನ ಸಂಸ್ಕಾರಗಳಲ್ಲೊಂದು. ಜನಿಸಿದಂದಿನಿಂದ ಬಾಳಿನ ಪೂರ್ಣತೆಗೆ ವಿಹಿತವಾಗಿರುವ ಸಂಸ್ಕಾರಗಳು ಒಟ್ಟು ೧೬; ಷೋಡಶಸಂಸ್ಕಾರಗಳು ಎಂಬುದಾಗಿ ಅವು ಪ್ರಸಿದ್ಧ. ಅವುಗಳಲ್ಲಿ ವಿವಾಹವು ಕೊನೆಯದು.[೧]

ಇತ್ತೀಚಿನ ದಿನಗಳಲ್ಲಿ ಹೆಚ್ಚಿನ ಸಂಸ್ಕಾರಗಳು ಲುಪ್ತವಾಗಿದ್ದರೆ, ಇನ್ನು ಕೆಲವು ಸಂಸ್ಕಾರಗಳು ವಿಕೃತಗೊಂಡಿವೆ. ನಾಮಕರಣ, ಅನ್ನಪ್ರಾಶನ, ಚೌಲ, ಉಪನಯನ ಹಾಗೂ ವಿವಾಹ - ಇವು ಮಾತ್ರವೇ ಇಂದು ಉಳಿದುಕೊಂಡಿರುವ ಸಂಸ್ಕಾರಗಳು. ಇವುಗಳು ಸಹ ವೈದಿಕ ಸಂಸ್ಕಾರಗಳು ಎಂಬ ಹಿನ್ನೆಲೆಯಲ್ಲಿ ನಡೆಯದೆ, ಕೇವಲ ಸಾಮಾಜಿಕ ಪ್ರತಿಷ್ಠೆ ಎಂಬಂತೆ ಆಚರಣೆಗೊಳ್ಳುತ್ತಿರುವುದು ಮತ್ತೊಂದು ಬಗೆಯ ವಿಕೃತಿ.

ಈಗ ನಡೆಯುವ ಈ ಸಂಸ್ಕಾರಗಳು ಸಹ ಹೆಚ್ಚಿನ ಸಂಸ್ಕಾರಗಳಲ್ಲಿ ಅಮಂತ್ರಕವಾಗಿಯೇ ನಡೆಯುವುದು ಮತ್ತೊಂದು ಬಗೆಯ ದುರಂತ. ಇವುಗಳಲ್ಲಿ ಹೆಚ್ಚಿನ ಸಂಸ್ಕಾರಗಳಿಗೆ ಕಾಲವು ವಿಹಿತವಾಗಿರುವುದು ಮತ್ತೊಂದು ವಿಶೇಷ. ನಾಮಕರಣ(ಕೆಲವೊಮ್ಮೆ ಸೀಮಂತ)ವೊಂದರ ಹೊರತು ಉಳಿದೆಲ್ಲ ಸಂಸ್ಕಾರಗಳು ಸಹ ಅನುಕೂಲವಾದಾಗ ಮಾತ್ರ ಆಚರಿಸುವ ಸಂಸ್ಕಾರಗಳು ಎಂಬ ಹಂತವನ್ನು ತಲುಪಿವೆ.

ಇವುಗಳಲ್ಲಿ ಹೆಚ್ಚು ಆಘಾತಕ್ಕೆ ಹಾಗೂ ವಿಕೃತಿಗೆ ಒಳಗಾಗಿರುವ ಸಂಸ್ಕಾರವೆಂದರೆ ವಿವಾಹ ಸಂಸ್ಕಾರವೇ ಆಗಿದೆ. ಎಂದರೆ ಅತ್ಯಂತ ಪ್ರಧಾನಸಂಸ್ಕಾರಕ್ಕೇ ಹೆಚ್ಚಿನ ಆಘಾತ ಒದಗಿದೆ ಎಂದಾಗುವುದು.

ಹೀಗೆ ನಡೆಯುವ ವಿವಾಹಗಳು ಚಾತುರ್ಮಾಸ್ಯ, ಧನುರ್ಮಾಸ ಮೊದಲಾದ ನಿಷಿದ್ಧಕಾಲದಲ್ಲಿ, ಏಕಾದಶೀ, ದ್ವಾದಶೀ, ಅಮಾವಾಸ್ಯೆ ಮೊದಲಾದ ನಿಷಿದ್ಧ ತಿಥಿಗಳಲ್ಲಿ , ಹೀಗೆ ಅನೇಕ ಬಗೆಯಾಗಿ ವಿಹಿತವಲ್ಲದ ರೀತಿಯಲ್ಲೇ ನಡೆಯುವುದು ಒಂದು ಬಗೆ. ನಿಷಿದ್ಧ ರೀತಿಯಲ್ಲಿ ಎಂದರೆ ವಿಹಿತವಾದ ಮಂತ್ರ ಹೋಮಗಳಿಲ್ಲದೆ ಮತ್ತೊಂದು ಬಗೆ. ಸಗೋತ್ರವಿವಾಹಗಳು ಮತ್ತೊಂದು ಬಗೆಯ ನಿಷಿದ್ಧ ವಿವಾಹಗಳಾದರೆ, ವರ್ಣೇತರ ವಿವಾಹಗಳು ಮಗದೊಂದು ಬಗೆಯವು.

ಇದರ ಪರಿಣಾಮವೆಂಬಂತೆ ಇತ್ತೀಚಿನ ದಿನಗಳಲ್ಲಿ ಹೆಚ್ಚಿನ ವಿವಾಹಗಳು ನಡೆದ ಅತ್ಯಲ್ಪಕಾಲದಲ್ಲಿಯೇ ವಿಚ್ಛೇದನದಲ್ಲಿ ಪರ್ಯವಸಾನಗೊಳ್ಳುತ್ತಿವೆ. ಒಂದು ರೀತಿಯಲ್ಲಿ

---

೧. ಇತರ ೧೫ ಸಂಸ್ಕಾರಗಳು ಹೀಗಿವೆ : ೧)ಗರ್ಭಾಧಾನ, ೨) ಪುಂಸವನ, ೩) ಸೀಮಂತ, ೪) ವಿಷ್ಣುಬಲಿ ೫)ಜಾತಕರ್ಮ ೬) ನಾಮಕರಣ ೭) ನಿಷ್ಕ್ರಮಣ ೮) ಅನ್ನಪ್ರಾಶನ ೯) ಚೌಲ ೧೦) ಉಪನಯನ ೧೧) ಮಹಾನಾಮ್ನೀ ೧೨) ಮಹಾವ್ರತ ೧೩)ಉಪನಿಷದ್ವ್ರತ ೧೪) ಗೋದಾನ ೧೫) ಸಮಾವರ್ತನ

ವಿವಾಹವೆಂದರೆ ಅನಂತರ ವಿಚ್ಛೇದನವೇ; ಎಂದರೆ ಅದು ೧೭ನೆಯ ಸಂಸ್ಕಾರವೆಂಬಂತೆ ಇಂದು ರೂಢಿಗೆ ಬರುತ್ತಿರುವುದು ಸಂತೋಷದ ಸಂಗತಿಯೇನಲ್ಲ.

ಇಂದು ಒಂದು ರೀತಿಯಲ್ಲಿ ಶುಭವಿವಾಹಗಳೇ ಅಪರೂಪವೆನ್ನಿಸುವಂತಹ ಘಟ್ಟ ತಲುಪಿವೆ. ಕೆಲವು ಬಾಲ್ಯವಿವಾಹಗಳಾದರೆ, ಮತ್ತೆ ಕೆಲವು ಅನುರೂಪವಲ್ಲದ ವಿವಾಹಗಳು.

ಸಹಶಿಕ್ಷಣ, ಸಹೋದ್ಯೋಗ ಮೊದಲಾದ ಕಾರಣಗಳಿಂದಾಗಿ, ಗಂಡು-ಹೆಣ್ಣುಗಳು ಒಂದೆಡೆ ಹೆಚ್ಚಾಗಿ ಸೇರುವ ಪ್ರಸಂಗಗಳು ಇತ್ತೀಚಿನ ದಿನಗಳಲ್ಲಿ ಅಪಾರ ಸಂಖ್ಯೆಯಲ್ಲಿ ಹೆಚ್ಚುತ್ತಿವೆ. ಸಹಶಿಕ್ಷಣದ ಅವಧಿ ಕೆಲವು ವರ್ಷಗಳದ್ದಾದರೆ, ಸಹೋದ್ಯೋಗ ಕೆಲಸದ ಪೂರ್ಣಾವಧಿಯ ವರೆಗಿನದು. ಎಂದರೆ ಹೆಚ್ಚಿನ ದುಷ್ಪರಿಣಾಮದ ಪಾಲು ಸಹೋದ್ಯೋಗಕ್ಕೆ ಸಲ್ಲುತ್ತದೆ ಎಂದು ತಿಳಿಯಬಹುದು. ಸಹಶಿಕ್ಷಣವು ವಿವಾಹಪೂರ್ವದ ಜೀವನವನ್ನು ಮಲಿನಗೊಳಿಸುವ ಕಾರಣಗಳಲ್ಲೊಂದಾದರೆ, ಸಹೋದ್ಯೋಗವು ವಿವಾಹದ ಉತ್ತರಕಾಲದ ಜೀವನವನ್ನು ಮಲಿನಗೊಳಿಸುವ ಪ್ರಧಾನಕಾರಣಗಳಲ್ಲೊಂದು.

ಇವುಗಳಿಗೆ ಇತ್ತೀಚಿನ ದಿನಗಳಲ್ಲಿನ ಹೊಸ ಸೇರ್ಪಡೆ ಎಂದರೆ ಐ.ಟಿ-ಬಿ.ಟಿಗಳ ಹಾವಳಿ. ಇದರಲ್ಲಿ ಸಹೋದ್ಯೋಗಮಾತ್ರವಲ್ಲದೆ ಅಕಾಲದಲ್ಲಿನ ಸಹೋದ್ಯೋಗ ಹೊಸ ರೀತಿಯ ಅಪಾಯವಾಗಿ ಪರಿಣಮಿಸಿದೆ. ಈ ಎಲ್ಲ ಪ್ರಸಂಗಗಳಲ್ಲಿ ಹೆಚ್ಚಿನ ಕಾಲ ಅವರು ಇತರರೊಂದಿಗೆ ಕಳೆಯುವ ಅನಿವಾರ್ಯ ಪರಿಸ್ಥಿತಿ ಉಂಟಾಗುತ್ತದೆ. ವಿಶೇಷವಾದ ಸಂಕಲ್ಪಶಕ್ತಿ, ಮನೆಗಳಲ್ಲಿ ದೊರಕುವ ಉನ್ನತ ಮಟ್ಟದ ಸಂಸ್ಕಾರ, ಸುಸಂಸ್ಕೃತ ಜೀವನದ ಪರಿಕಲ್ಪನೆ, ಹಿರಿದಾದದ್ದನ್ನು ಸಾಧಿಸುವ ಛಲ, ಪಾವಿತ್ರ್ಯದ ಬಗೆಗಿನ ವಿಶೇಷ ಕಾಳಜಿ ಇಲ್ಲದ ಜನ ಇಂತಹ ಪರಿಸರದಲ್ಲಿ ತಮ್ಮ ಜೀವನದಲ್ಲಿ ಪರಿಶುದ್ಧಿಯನ್ನು ಉಳಿಸಿಕೊಳ್ಳುವುದು ಸುಲಭದ ಮಾತಲ್ಲ. ಅಪವಾದವೆಂಬಂತೆ ಕೆಲವು ಶುದ್ಧ ಚಾರಿತ್ರ್ಯದ ಜನ ಸಿಕ್ಕಬಹುದಾದರೂ ಅದು ವಿವಾಹಸಂಸ್ಕಾರದ ಪಾವಿತ್ರ್ಯದ ಪರಿಪೂರ್ಣವಾದ ರಕ್ಷಣೆಗೆ ಪರ್ಯಾಪ್ತವೆನ್ನಿಸದು.

ಈ ಎಲ್ಲ ಬಗೆಯ ಅನರ್ಥಗಳಿಗೆ ಇರುವ ಅನೇಕ ಕಾರಣಗಳಲ್ಲಿ ಬಹುಮುಖ್ಯವಾದುದು ಎಂದರೆ ವಿವಾಹಸಂಸ್ಕಾರದ ಮಹತ್ತ್ವದ ಪರಿಕಲ್ಪನೆ ಆಧುನಿಕ ಜನತೆಗೆ ಇಲ್ಲವಾಗಿರುವುದು ಎನ್ನಬಹುದು.

ವಿವಾಹವೆಂದರೆ ಕೇವಲ ಗಂಡುಹೆಣ್ಣುಗಳ ಕೂಟವಲ್ಲ ; ಕೇವಲ ಕೆಲವು ವರ್ಷಗಳವರೆಗೆ ಮಾತ್ರ ನಡೆಯಬಲ್ಲ ತಾತ್ಕಾಲಿಕವ್ಯವಸ್ಥೆಯಲ್ಲ; ಮನಸ್ಸಿಗೆ ತೋಚುವಂತೆ ನಡೆದುಕೊಳ್ಳಬಹುದಾದ ಸ್ವೇಚ್ಛಾಪ್ರವೃತ್ತಿಯೂ ಅಲ್ಲ; ಅದು ಸಮಾಜದಲ್ಲಿ ಆರೋಗ್ಯ, ಸಂಸ್ಕೃತಿ, ಚಿಂತನೆಗಳ ಪಾವಿತ್ರ್ಯವನ್ನು ಸಂರಕ್ಷಿಸಲು ವಿಹಿತವಾಗಿರುವ ಅತ್ಯಂತ ಮಹತ್ತ್ವಪೂರ್ಣವಾದ ಸಂಸ್ಕಾರ ಎಂಬ ಅರಿವು ಬಂದಲ್ಲಿ ಇಂತಹ ಅಪಾಯ

ಗಣನೀಯವಾಗಿ ನಿಯಂತ್ರಣಕ್ಕೆ ಬರುವುದು ನಿಶ್ಚಿತ. ಪತಿಪತ್ನಿಯರು ಪರಸ್ಪರ ಅರ್ಥ-ಮಾಡಿಕೊಂಡು ಸಂತೃಪ್ತಿಯಿಂದ ಜೀವನಸಾಗಿಸುವಂತಹ ಕುಟುಂಬಗಳು ಸಮಾಜಕ್ಕೆ ಅತ್ಯಂತ ಕಲ್ಯಾಣಕರ[೧].

ಪ್ರಾಚೀನಕಾಲದಲ್ಲಿ ಪತ್ನಿಯನ್ನು ಪುರುಷನಾದವನು ಗುಲಾಮನಂತೆ ನಡೆಸಿ-ಕೊಳ್ಳುವಂತಹ ಸಂಸ್ಕೃತಿ ಬೇರೂರಿತ್ತು ಎಂಬುದು ಆಧುನಿಕರ ಆರೋಪ. ಅದು ಸರ್ವಥಾ ಸರಿಯಲ್ಲ. ವೇದಗಳಲ್ಲಿ(ಸಖಾ ಹ ಜಾಯಾಃ -ಐತರೇಯಬ್ರಾಹ್ಮಣ ೩೩/೧) ಸ್ಮೃತಿಗಳಲ್ಲಿ[೨] ಪತ್ನಿಯನ್ನು ಗೆಳತಿಯಂತೆ ಕಾಣಬೇಕು ಎಂಬ ವಿಧಿಯೇ ನಿರೂಪಿತವಾಗಿದೆ. ಮಹಾಭಾರತದ ಯಕ್ಷಪ್ರಶ್ನೆಯಲ್ಲಿ 'ಮನೆಯಲ್ಲಿನ ಆತ್ಮೀಯ ಹಿತೈಷಿ ಯಾರು?' ಎಂಬ ಪ್ರಶ್ನೆಗೆ ಯುಧಿಷ್ಠಿರ ನೀಡಿದ ಉತ್ತರ 'ಪತ್ನಿ[೩]' ಎಂಬುದಾಗಿಯೇ ಎಂಬುದು ಗಮನಾರ್ಹ:ಭಾರ್ಯಾ ಮಿತ್ರಂ ಗೃಹೇ ಸತಃ. ಆಚಾರ್ಯ ಶ್ರೀಮಧ್ವರು ಶ್ರೀಮಹಾಭಾರತತಾತ್ಪರ್ಯನಿರ್ಣಯದಲ್ಲಿಯೂ ಅದೇ ಮಾತನ್ನು ತಿಳಿಸಿರುವರು : 'ಜಾಯಾ ಸಖೀತಿ'(೧೯/೭೬). ಹೆಂಡತಿಯನ್ನು ಆಳಿನಂತೆಯೋ ದಾಸಿಯಂತೆಯೋ ಕಾಣು-ವುದನ್ನು ಶಾಸ್ತ್ರಗಳು ಒಪ್ಪುವುದಿಲ್ಲ.

## ವಿವಾಹದ ಅರ್ಥ

ವಿವಾಹಕ್ಕೆ ವಿವಾಹ, ಉಪಯಮ, ಪರಿಣಯ, ಉದ್ವಾಹ, ಉಪಯಾಮ ಹಾಗೂ ಪಾಣಿಗ್ರಹಣ ಎಂಬ ಆರು ಹೆಸರುಗಳನ್ನು ಪರ್ಯಾಯವಾಗಿ ಕೋಶಗಳು ದಾಖಲಿಸಿವೆ. ಕಲ್ಯಾಣ ಎಂಬುದು ಎಲ್ಲರಿಗೂ ಸುಲಭವಾಗಿ ತಿಳಿಯುವಂತಹ ಇದರ ಮತ್ತೊಂದು ಹೆಸರು. ಮದುವೆ ಎಂಬುದು ಕನ್ನಡದಲ್ಲಿ ಪ್ರಸಿದ್ಧವಾಗಿರುವ ಪದ.

---

೧. ಸಂತುಷ್ಟೋ ಭಾರ್ಯಯಾ ಭರ್ತಾ ಭರ್ತ್ರಾ ಭಾರ್ಯಾ ತಥೈವ ಚ।
ಯಸ್ಮಿನ್ನೇವ ಕುಲೇ ನಿತ್ಯಂ ಕಲ್ಯಾಣಂ ತತ್ರ ವೈ ಧ್ರುವಮ್॥ -ಮನುಸ್ಮೃತಿ(೩/೬೦)

೨. ಭಾರ್ಯಾ ಶ್ರೇಷ್ಠತಮಃ ಸಖಾ। -ಮಹಾಭಾರತ(೧/೯೪/೪೦)
ನ ಭಾರ್ಯಾ ಸದೃಶಂ ಭಾಗ್ಯಮ್। -ವೇಂಕಟೇಶಮಹಾತ್ಮ್ಯ, ಭ.ಪುರಾಣ(೧೧/೧೯-೨೦)
ಅಪತ್ಯಂ ಧರ್ಮಕಾರ್ಯಾಣಿ ಶುಶ್ರೂಷಾ ರತಿರುತ್ತಮಾ।
ದಾರಾಧೀನಸ್ತಥಾ ಸ್ವರ್ಗಃ ಪಿತೃಣಾಮಾತ್ಮನಶ್ಚ ಹ॥ -ಮನುಸ್ಮೃತಿ(೯/೨೮)
ಪತ್ನೀಮೂಲಂ ಗೃಹಂ ಪುಂಸಾಂ ಯದಿ ಛಂದಾನುವರ್ತಿನೀ।
ತಯಾ ಧರ್ಮಾರ್ಥಕಾಮಾನಾಂ ತ್ರಿವರ್ಗಫಲಮಶ್ನುತೇ॥ -ದಕ್ಷಸ್ಮೃತಿ(೪/೧)
ದೇವತಾಪಿತೃಭೃತ್ಯಾನಾಮತಿಥೀನಾಂ ಚ ಪೂಜನಮ್।
ನ ಪುಂಭಿಃ ಶಕ್ಯತೇ ಕರ್ತುಮೃತೇ ಭಾರ್ಯಾಂ ನೃಪಾತ್ಮಜ॥ -ಮಾರ್ಕಂಡೇಯಪುರಾಣ(೨೧/೭೨)
ಪ್ರಾಣಾಧಿಕಃ ಪ್ರಿಯಃ ಸ್ತ್ರೀಣಾಂ ಭರ್ತುಃ ಪ್ರಾಣಾಧಿಕಾ ಪ್ರಿಯಾ।-ಬ್ರಹ್ಮವೈವರ್ತಪುರಾಣ(೨೪/೩೨)

೩. ಕಿಂಸ್ವಿನ್ಮಿತ್ರಂ ಗೃಹೇ ಸತಃ; ಭಾರ್ಯಾ ಮಿತ್ರಂ ಗೃಹೇ ಸತಃ -ವನಪರ್ವ(೩೧೪/೬೬)

[೧]ವಿವಾಹ ಎಂಬುದಕ್ಕೆ ವಿಶಿಷ್ಟಂ ವಹನಂ - ವಿಶಿಷ್ಟವಾದ ಹೊರುವಿಕೆ ಎಂದರ್ಥ. ಎಂದರೆ ಗಂಡು ಹೆಣ್ಣುಗಳು ತಮ್ಮ ಜೀವನದ ಭಾರವನ್ನು ಒಂದು ಗಾಡಿಯನ್ನು ಎರಡು ಎತ್ತುಗಳು ಹೇಗೋ, ಅಥವಾ ಎರಡು [೨]ಚಕ್ರಗಳು ಹೇಗೋ ಹಾಗೆ ಎಂಬುದು ಇದರ ಫಲಿತಾರ್ಥ. ಎಂದರೆ ಈ ಸಂಸ್ಕಾರದ ಬಳಿಕ ಹೆಣ್ಣಿನ ಸಂರಕ್ಷಣೆಯ ಭಾರವನ್ನು ಗಂಡು ಹೊರುವುದು; ಗಂಡಿನ ಯೋಗಕ್ಷೇಮದ ಹೊಣೆಯನ್ನು ಹೆಣ್ಣು ಹೊರುವುದು - ಹೀಗೆ ಪರಸ್ಪರರ ಸಂರಕ್ಷಣೆಯ ಹೊಣೆಗಾರಿಕೆಯ ವ್ಯವಸ್ಥೆ ಎಂದಾಗುವುದು.

ಉಪಯಮ - ಇದು ಸಹ ಜೊತೆಯಾಗಿ ಬಾಳುವುದು ಎಂದರೆ ಇಬ್ಬರು ಸಹ ಜೀವನಪೂರ್ತಿ ಪರಸ್ಪರರನ್ನು ಅರ್ಥಮಾಡಿಕೊಂಡು ವ್ಯವಸ್ಥಿತವಾದಂತಹ ಸಾಂಸಾರಿಕ ವ್ಯವಸ್ಥೆಯಲ್ಲಿ ಪಾಲ್ಗೊಳ್ಳುವುದು ಎಂಬ ಅರ್ಥವನ್ನು ಕೊಡುವುದು. ಅದರಂತೆ ಸಂಯಮಪೂರ್ಣವಾದ ಗೃಹಸ್ಥಜೀವನ ಎಂಬ ಅರ್ಥವೂ ಇದರಿಂದ ಸೂಚಿತ. ಸಂಸಾರವು ದಾರಿತಪ್ಪಿದರೆ 'ಉಪಯಮ' ಎಂದರೆ ಅವರ ಪಯಣ ಯಮನ ಬಳಿಗೇ - ಎಂದರೆ ನರಕ ತಪ್ಪಿದ್ದಲ್ಲ ಎಂದರ್ಥ ; ಇಲ್ಲೂ ಸಹ ಅವರ ಪಾಡು ನರಕಸದೃಶ ಎಂಬ ಭಾವವೂ ಇದರಲ್ಲಿದೆ.

ಪರಿಣಯ - ಇದು ಸಹ ಪರಿಣಯನಂ - ಪರಿತಃ ನಯನಂ ಎಂದರೆ ಎಲ್ಲ ರೀತಿಯಲ್ಲೂ ಒಂದುರೀತಿಯಲ್ಲಿ ಸಹ ಜೊತೆಯಾಗಿರುವುದು ಎಂಬ ಅರ್ಥವನ್ನೇ ಕೊಡುವುದು. ಎಲ್ಲ ರೀತಿಯಲ್ಲೂ ಎಂದರೆ ಸುಖ-ದುಃಖ ಮೊದಲಾದವುಗಳಲ್ಲಿ ಸಮಭಾಗಿತ್ವವನ್ನು ಪಡೆದು ಯಶಸ್ವಿಯಾಗಿ ಸಂಸಾರವನ್ನು ರೂಢಿಸಿಕೊಂಡು ಹೋಗುವುದು ಎಂದರ್ಥ.

ಉದ್ವಾಹ - ಉದ್ವಾಹ ಎಂಬುದು ವಿವಾಹ ಶಬ್ದದಂತೆ ಉತ್ಕೃಷ್ಟವಾದ ವಹನ ಎಂದರೆ, ಜೀವನಪೂರ್ತಿ ಎಲ್ಲ ಬಗೆಯಲ್ಲೂ ಸಹ ಬಿಡುಗಡೆಯಾಗದಂತಹ ಬಗೆಯ ಭಾರಹೊರುವಿಕೆ ಎಂಬ ಅರ್ಥವನ್ನು ಕೊಡುವ ಶಬ್ದ. ಮತ್ತೊಂದು ರೀತಿಯಲ್ಲಿ ಉತ್ಕೃಷ್ಟತೆಯತ್ತ ಜೀವನವನ್ನು ಕೊಂಡೊಯ್ಯುವಂತಹ ಸಂಸ್ಕಾರ ಎನ್ನಬಹುದು.

ಉಪಯಾಮ - ಇದು ಸಹ ಉಪಯಮ ಎಂಬಂತೆ ಜೊತೆಯಾಗಿ ಬಾಳುವುದು ಎಂಬ ಅರ್ಥವನ್ನೇ ಕೊಡುವುದು. ಇತರರು ಸಹ ಜೊತೆಯಾಗಿಯೇ ಇದ್ದರೂ ಗಂಡಹೆಂಡಿರ ಸಂಬಂಧ ಇತರ ಎಲ್ಲರಿಗಿಂತ ಮಿಗಿಲಾಗಿ ಜೊತೆಗೂಡಿ ಇರುವಂತಹುದು ಎಂಬ ವಿಶೇಷಾರ್ಥವನ್ನು ಹೊಂದಿದೆ.

---

೧. ವಿವಾಹೋಪಯಮೌ ಸಮೌ । ತಥಾ ಪರಿಣಯೋದ್ವಾಹೋಪಯಾಮಾಃ ಪಾಣಿಪೀಡನಮ್॥
-ಅಮರಕೋಶ

೨. ಏಕಚಕ್ರೋ ರಥೋ ಯದ್ವದೇಕಪಕ್ಷೋ ಯಥಾ ಖಗಃ ।
ಅಭಾರ್ಯೋಽಪಿ ನರಸ್ತದ್ವದಯೋಗ್ಯಃ ಸರ್ವಕರ್ಮಸು ॥ -ಭವಿಷ್ಯಪುರಾಣ

ಪಾಣಿಗ್ರಹಣ - ಕೈಹಿಡಿಯುವುದು ಎಂದರ್ಥ. ಇದೂ ಸಹ ವರನು ಕನ್ಯೆಯ ಕೈಗಳನ್ನು ಮೊದಲ ಬಾರಿಗೆ ಹಿಡಿಯುವ ಮೂಲಕ ಅವಳ ಜವಾಬ್ದಾರಿಯನ್ನು ಜೀವನ ಪೂರ್ತಿಹೊರುವ ಆಶ್ವಾಸನೆಯನ್ನು ಕೊಡುವುದು ಎಂಬ ಅರ್ಥವನ್ನು ನೀಡುವುದು. ಕೈಹಿಡಿಯುವುದು ಎಂಬುದಕ್ಕೆ ರಕ್ಷಣೆ ಕೊಡುವುದು ಎಂಬರ್ಥ ರೂಢಿಯಲ್ಲೂ ಇದೆ.

ಮದುವೆ ಎಂಬ ಕನ್ನಡ ಪದ ಪ್ರಾಯಃ - 'ಮಧು - ವ'[೧] ಎಂಬ ಮೂಲವನ್ನು ಹೊಂದಿರುವ ಸಾಧ್ಯತೆ ಇದೆ. ಮಧು ಎಂದರೆ ಆನಂದ ಎಂಬುದು ಪ್ರಸಿದ್ಧವಾದ ಶಾಸ್ತ್ರೀಯ ಅರ್ಥ; ವ ಎಂಬುದಕ್ಕೆ ಜ್ಞಾನ ಎಂಬ ಅರ್ಥವೂ ಪ್ರಸಿದ್ಧವೇ. ಇದರಿಂದ ಜ್ಞಾನಾನಂದಗಳ ಸಾಧನೆಗೆ ವಿಶೇಷವಾದ ನೆರವು ನೀಡುವ ಸಂಸ್ಕಾರ ಎಂದು ಅರ್ಥವನ್ನು ಮಾಡಿಕೊಳ್ಳಬಹುದು. ಒಟ್ಟಿನಲ್ಲಿ ಜೀವನದಲ್ಲಿ ವಿಶೇಷ ಆನಂದಕ್ಕೆ ಕಾರಣವಾಗುವ ಸಂಸ್ಕಾರ ಎಂಬುದು ಇದರ ಭಾವ. ಆನಂದಕರವಾದ ಶಾಸ್ತ್ರದ ಅಧ್ಯಯನಕ್ಕೆ ನೆರವಾಗುವ ವಿಶೇಷ ಸಂಸ್ಕಾರ ಎಂದೂ ಇದನ್ನು ಅರ್ಥೈಸಿಕೊಳ್ಳಬಹುದು. ಮಧುಚಂದ್ರ ಎಂಬ ಪದ ಈ ಅರ್ಥದಲ್ಲಿಯೇ ರೂಪುಗೊಂಡಿರುವ ಸಾಧ್ಯತೆ ಇದೆ.

ಹೀಗೆ ಈ ಹೆಸರುಗಳು ಸಹ ಗಂಡು ಹೆಣ್ಣುಗಳು ವಿವಾಹ ಸಂಸ್ಕಾರದ ಬಳಿಕ ಜೀವನಪೂರ್ತಿಯಾಗಿ ಎಂತಹ ಪ್ರಸಂಗಗಳಲ್ಲೂ ಸಹ ಒಬ್ಬರನ್ನೊಬ್ಬರು ಕೈಬಿಡದೆ, ಸಂಪೂರ್ಣ ಹೊಂದಾಣಿಕೆಯಿಂದ ಜೀವನವನ್ನು ನಿರ್ವಹಿಸಿ ಮನೆತನದ, ಸಮಾಜದ ಏಳಿಗೆಗಾಗಿ ತಮ್ಮ ಜೀವನವನ್ನು ಮುಡುಪಿಡುವುದು ಎಂದರ್ಥ.

ಈ ಹಿನ್ನೆಲೆಯಲ್ಲಿ ವಿಶ್ಲೇಷಿಸಿದಾಗ ಇವತ್ತಿನ ವಿವಾಹಗಳು ಈ ಕಲ್ಪನೆಯ ಹತ್ತಿರವೂ ಸಹ ಬರುವ ಸ್ಥಿತಿಯಲ್ಲಿಲ್ಲ ಎಂಬ ಸತ್ಯದ ಅರಿವಾಗುವುದು. ಈ ಮುನ್ನ ತಿಳಿಸಿದಂತೆ ವಿಚ್ಛೇದನಗಳು ವಿವಾಹದ ಬಳಿಕದ ಮುಂದಿನ ಸಹಜ ಹಂತ ಎಂಬ ರೀತಿಯಲ್ಲಿ ಪರ್ಯವಸಾನಗೊಳ್ಳುತ್ತಿರುವುದು ಎಲ್ಲರಿಗೂ ವೇದ್ಯವಾಗಿರುವ ಸಂಗತಿ.

ಇದಕ್ಕೆ ಹೆಚ್ಚಿನ ಸಂದರ್ಭಗಳಲ್ಲಿ ಯಾವುದೇ ತಾತ್ವಿಕ, ಸಾಮಾಜಿಕ ಅಥವಾ ಕೌಟುಂಬಿಕವಾದ ಕಾರಣಗಳು ಇರದೆ, ಕೇವಲ ಪ್ರತಿಷ್ಠೆಯಷ್ಟೇ ಕಾರಣವಾಗಿರುವುದು ಗಮನಿಸಬೇಕಾದ ಅಂಶ. ಹೆಚ್ಚಿನ ಸಂದರ್ಭಗಳಲ್ಲಿ ಮನೆಯಲ್ಲಿ ಬೆಳೆದ ವಾತಾವರಣ ಮುಂದಿನ ಜೀವನದಲ್ಲಿ ಇತರರೊಂದಿಗೆ ಹೊಂದಿಕೊಳ್ಳದಂತಹ ಮಾನಸಿಕವಾದ ಸ್ಥಿತಿಯನ್ನು ನಿರ್ಮಿಸಿರುತ್ತದೆ. ಎಂದರೆ ಅತ್ತೆ, ಮಾವ, ಭಾವ-ಮೈದುನರು, ಅತ್ತಿಗೆ-ನಾದಿನಿಯರು, ಅವರ ಮಕ್ಕಳು ಮೊದಲಾಗಿ ಇತರರೆಲ್ಲರನ್ನೂ ಪರಕೀಯರೆಂಬಂತೆ ನೋಡುವ ಪ್ರವೃತ್ತಿಗೆ ಇದು ಕಾರಣವಾಗುವುದು. ತವರು ಮನೆಯಲ್ಲಿ ಬಂದ ಕೇವಲ

---

೧. ಮಧ್ವಿತ್ಯಾನಂದ ಉದ್ದಿಷ್ಟೋ ವರಿತಿ ತೀರ್ಥಮುಚ್ಯತೇ .. ವರಿತಿ ಜ್ಞಾನಮುಚ್ಯತೇ।

-ತೈತ್ತಿರೀಯಭಾಷ್ಯ

[೧]ವಿವಾಹ ಎಂಬುದಕ್ಕೆ ವಿಶಿಷ್ಟಂ ವಹನಂ - ವಿಶಿಷ್ಟವಾದ ಹೊರುವಿಕೆ ಎಂದರ್ಥ. ಎಂದರೆ ಗಂಡು ಹೆಣ್ಣುಗಳು ತಮ್ಮ ಜೀವನದ ಭಾರವನ್ನು ಒಂದು ಗಾಡಿಯನ್ನು ಎರಡು ಎತ್ತುಗಳು ಹೇಗೋ, ಅಥವಾ ಎರಡು [೨]ಚಕ್ರಗಳು ಹೇಗೋ ಹಾಗೆ ಎಂಬುದು ಇದರ ಫಲಿತಾರ್ಥ. ಎಂದರೆ ಈ ಸಂಸ್ಕಾರದ ಬಳಿಕ ಹೆಣ್ಣಿನ ಸಂರಕ್ಷಣೆಯ ಭಾರವನ್ನು ಗಂಡು ಹೊರುವುದು; ಗಂಡಿನ ಯೋಗಕ್ಷೇಮದ ಹೊಣೆಯನ್ನು ಹೆಣ್ಣು ಹೊರುವುದು - ಹೀಗೆ ಪರಸ್ಪರರ ಸಂರಕ್ಷಣೆಯ ಹೊಣೆಗಾರಿಕೆಯ ವ್ಯವಸ್ಥೆ ಎಂದಾಗುವುದು.

ಉಪಯಮ - ಇದು ಸಹ ಜೊತೆಯಾಗಿ ಬಾಳುವುದು ಎಂದರೆ ಇಬ್ಬರು ಸಹ ಜೀವನಪೂರ್ತಿ ಪರಸ್ಪರರನ್ನು ಅರ್ಥಮಾಡಿಕೊಂಡು ವ್ಯವಸ್ಥಿತವಾದಂತಹ ಸಾಂಸಾರಿಕ ವ್ಯವಸ್ಥೆಯಲ್ಲಿ ಪಾಲ್ಗೊಳ್ಳುವುದು ಎಂಬ ಅರ್ಥವನ್ನು ಕೊಡುವುದು. ಅದರಂತೆ ಸಂಯಮಪೂರ್ಣವಾದ ಗೃಹಸ್ಥಜೀವನ ಎಂಬ ಅರ್ಥವೂ ಇದರಿಂದ ಸೂಚಿತ. ಸಂಸಾರವು ದಾರಿತಪ್ಪಿದರೆ 'ಉಪಯಮ' ಎಂದರೆ ಅವರ ಪಯಣ ಯಮನ ಬಳಿಗೇ - ಎಂದರೆ ನರಕ ತಪ್ಪಿದ್ದಲ್ಲ ಎಂದರ್ಥ ; ಇಲ್ಲೂ ಸಹ ಅವರ ಪಾಡು ನರಕಸದೃಶ ಎಂಬ ಭಾವವೂ ಇದರಲ್ಲಿದೆ.

ಪರಿಣಯ - ಇದು ಸಹ ಪರಿಣಯನಂ - ಪರಿತಃ ನಯನಂ ಎಂದರೆ ಎಲ್ಲ ರೀತಿಯಲ್ಲೂ ಒಂದುರೀತಿಯಲ್ಲಿ ಸಹ ಜೊತೆಯಾಗಿರುವುದು ಎಂಬ ಅರ್ಥವನ್ನೇ ಕೊಡುವುದು. ಎಲ್ಲ ರೀತಿಯಲ್ಲೂ ಎಂದರೆ ಸುಖ-ದುಃಖ ಮೊದಲಾದವುಗಳಲ್ಲಿ ಸಮಭಾಗಿತ್ವವನ್ನು ಪಡೆದು ಯಶಸ್ವಿಯಾಗಿ ಸಂಸಾರವನ್ನು ರೂಢಿಸಿಕೊಂಡು ಹೋಗುವುದು ಎಂದರ್ಥ.

ಉದ್ವಾಹ - ಉದ್ವಾಹ ಎಂಬುದು ವಿವಾಹ ಶಬ್ದದಂತೆ ಉತ್ಕೃಷ್ಟವಾದ ವಹನ ಎಂದರೆ, ಜೀವನಪೂರ್ತಿ ಎಲ್ಲ ಬಗೆಯಲ್ಲೂ ಸಹ ಬಿಡುಗಡೆಯಾಗದಂತಹ ಬಗೆಯ ಭಾರಹೊರುವಿಕೆ ಎಂಬ ಅರ್ಥವನ್ನು ಕೊಡುವ ಶಬ್ದ. ಮತ್ತೊಂದು ರೀತಿಯಲ್ಲಿ ಉತ್ಕೃಷ್ಟತೆಯತ್ತ ಜೀವನವನ್ನು ಕೊಂಡೊಯ್ಯುವಂತಹ ಸಂಸ್ಕಾರ ಎನ್ನಬಹುದು.

ಉಪಯಾಮ - ಇದು ಸಹ ಉಪಯಮ ಎಂಬಂತೆ ಜೊತೆಯಾಗಿ ಬಾಳುವುದು ಎಂಬ ಅರ್ಥವನ್ನೇ ಕೊಡುವುದು. ಇತರರು ಸಹ ಜೊತೆಯಾಗಿಯೇ ಇದ್ದರೂ ಗಂಡಹೆಂಡಿರ ಸಂಬಂಧ ಇತರ ಎಲ್ಲರಿಗಿಂತ ಮಿಗಿಲಾಗಿ ಜೊತೆಗೂಡಿ ಇರುವಂತಹುದು ಎಂಬ ವಿಶೇಷಾರ್ಥವನ್ನು ಹೊಂದಿದೆ.

---

೧. ವಿವಾಹೋಪಯಮೌ ಸಮೌ । ತಥಾ ಪರಿಣಯೋದ್ವಾಹೋಪಯಾಮಾಃ ಪಾಣಿಪೀಡನಮ್॥

-ಅಮರಕೋಶ

೨. ಏಕಚಕ್ರೋ ರಥೋ ಯದ್ವದೇಕಪಕ್ಷೋ ಯಥಾ ಖಗಃ।
ಅಭಾರ್ಯೋಽಪಿ ನರಸ್ತದ್ವದಯೋಗ್ಯಃ ಸರ್ವಕರ್ಮಸು ॥ -ಭವಿಷ್ಯಪುರಾಣ

ಪಾಣಿಗ್ರಹಣ - ಕೈಹಿಡಿಯುವುದು ಎಂದರ್ಥ. ಇದೂ ಸಹ ವರನು ಕನ್ಯೆಯ ಕೈಗಳನ್ನು ಮೊದಲ ಬಾರಿಗೆ ಹಿಡಿಯುವ ಮೂಲಕ ಅವಳ ಜವಾಬ್ದಾರಿಯನ್ನು ಜೀವನ ಪೂರ್ತಿಹೊರುವ ಆಶ್ವಾಸನೆಯನ್ನು ಕೊಡುವುದು ಎಂಬ ಅರ್ಥವನ್ನು ನೀಡುವುದು. ಕೈಹಿಡಿಯುವುದು ಎಂಬುದಕ್ಕೆ ರಕ್ಷಣೆ ಕೊಡುವುದು ಎಂಬರ್ಥ ರೂಢಿಯಲ್ಲೂ ಇದೆ.

ಮದುವೆ ಎಂಬ ಕನ್ನಡ ಪದ ಪ್ರಾಯಃ - 'ಮಧು - ವ'[೧] ಎಂಬ ಮೂಲವನ್ನು ಹೊಂದಿರುವ ಸಾಧ್ಯತೆ ಇದೆ. ಮಧು ಎಂದರೆ ಆನಂದ ಎಂಬುದು ಪ್ರಸಿದ್ಧವಾದ ಶಾಸ್ತ್ರೀಯ ಅರ್ಥ; ವ ಎಂಬುದಕ್ಕೆ ಜ್ಞಾನ ಎಂಬ ಅರ್ಥವೂ ಪ್ರಸಿದ್ಧವೇ. ಇದರಿಂದ ಜ್ಞಾನಾನಂದಗಳ ಸಾಧನೆಗೆ ವಿಶೇಷವಾದ ನೆರವು ನೀಡುವ ಸಂಸ್ಕಾರ ಎಂದು ಅರ್ಥವನ್ನು ಮಾಡಿಕೊಳ್ಳಬಹುದು. ಒಟ್ಟಿನಲ್ಲಿ ಜೀವನದಲ್ಲಿ ವಿಶೇಷ ಆನಂದಕ್ಕೆ ಕಾರಣವಾಗುವ ಸಂಸ್ಕಾರ ಎಂಬುದು ಇದರ ಭಾವ. ಆನಂದಕರವಾದ ಶಾಸ್ತ್ರದ ಅಧ್ಯಯನಕ್ಕೆ ನೆರವಾಗುವ ವಿಶೇಷ ಸಂಸ್ಕಾರ ಎಂದೂ ಇದನ್ನು ಅರ್ಥೈಸಿಕೊಳ್ಳಬಹುದು. ಮಧುಚಂದ್ರ ಎಂಬ ಪದ ಈ ಅರ್ಥದಲ್ಲಿಯೇ ರೂಪುಗೊಂಡಿರುವ ಸಾಧ್ಯತೆ ಇದೆ.

ಹೀಗೆ ಈ ಹೆಸರುಗಳು ಸಹ ಗಂಡು ಹೆಣ್ಣುಗಳು ವಿವಾಹ ಸಂಸ್ಕಾರದ ಬಳಿಕ ಜೀವನಪೂರ್ತಿಯಾಗಿ ಎಂತಹ ಪ್ರಸಂಗಗಳಲ್ಲೂ ಸಹ ಒಬ್ಬರನ್ನೊಬ್ಬರು ಕೈಬಿಡದೆ, ಸಂಪೂರ್ಣ ಹೊಂದಾಣಿಕೆಯಿಂದ ಜೀವನವನ್ನು ನಿರ್ವಹಿಸಿ ಮನೆತನದ, ಸಮಾಜದ ಏಳಿಗೆಗಾಗಿ ತಮ್ಮ ಜೀವನವನ್ನು ಮುಡುಪಿಡುವುದು ಎಂದರ್ಥ.

ಈ ಹಿನ್ನೆಲೆಯಲ್ಲಿ ವಿಶ್ಲೇಷಿಸಿದಾಗ ಇವತ್ತಿನ ವಿವಾಹಗಳು ಈ ಕಲ್ಪನೆಯ ಹತ್ತಿರವೂ ಸಹ ಬರುವ ಸ್ಥಿತಿಯಲ್ಲಿಲ್ಲ ಎಂಬ ಸತ್ಯದ ಅರಿವಾಗುವುದು. ಈ ಮುನ್ನ ತಿಳಿಸಿದಂತೆ ವಿಚ್ಛೇದನಗಳು ವಿವಾಹದ ಬಳಿಕದ ಮುಂದಿನ ಸಹಜ ಹಂತ ಎಂಬ ರೀತಿಯಲ್ಲಿ ಪರ್ಯವಸಾನಗೊಳ್ಳುತ್ತಿರುವುದು ಎಲ್ಲರಿಗೂ ವೇದ್ಯವಾಗಿರುವ ಸಂಗತಿ.

ಇದಕ್ಕೆ ಹೆಚ್ಚಿನ ಸಂದರ್ಭಗಳಲ್ಲಿ ಯಾವುದೇ ತಾತ್ವಿಕ, ಸಾಮಾಜಿಕ ಅಥವಾ ಕೌಟುಂಬಿಕವಾದ ಕಾರಣಗಳು ಇರದೆ, ಕೇವಲ ಪ್ರತಿಷ್ಠೆಯಷ್ಟೇ ಕಾರಣವಾಗಿರುವುದು ಗಮನಿಸಬೇಕಾದ ಅಂಶ. ಹೆಚ್ಚಿನ ಸಂದರ್ಭಗಳಲ್ಲಿ ಮನೆಯಲ್ಲಿ ಬೆಳೆದ ವಾತಾವರಣ ಮುಂದಿನ ಜೀವನದಲ್ಲಿ ಇತರರೊಂದಿಗೆ ಹೊಂದಿಕೊಳ್ಳದಂತಹ ಮಾನಸಿಕವಾದ ಸ್ಥಿತಿಯನ್ನು ನಿರ್ಮಿಸಿರುತ್ತದೆ. ಎಂದರೆ ಅತ್ತೆ, ಮಾವ, ಭಾವ-ಮೈದುನರು, ಅತ್ತಿಗೆ-ನಾದಿನಿಯರು, ಅವರ ಮಕ್ಕಳು ಮೊದಲಾಗಿ ಇತರರೆಲ್ಲರನ್ನೂ ಪರಕೀಯರೆಂಬಂತೆ ನೋಡುವ ಪ್ರವೃತ್ತಿಗೆ ಇದು ಕಾರಣವಾಗುವುದು. ತವರು ಮನೆಯಲ್ಲಿ ಬಂದ ಕೇವಲ

---

೧. ಮಧ್ವಿತ್ಯಾನಂದ ಉದ್ದಿಷ್ಟೋ ವರಿತಿ ತೀರ್ಥಮುಚ್ಯತೇ .. ವರಿತಿ ಜ್ಞಾನಮುಚ್ಯತೇ।

-ತೈತ್ತಿರೀಯಭಾಷ್ಯ

ಸ್ವಾರ್ಥಪರವಾದ ಚಿಂತನೆ ಇಂತಹ ಪ್ರವೃತ್ತಿಗೆ ಎಡೆನೀಡುವುದು. ಇನ್ನೊಂದು ಬಗೆಯಲ್ಲಿ ಹಾಗೆ ಬಂದ ಸೊಸೆಯನ್ನು ಆತ್ಮೀಯವಾಗಿ ಕಾಣದೆ ಪರಕೀಯಳೆಂಬಂತೆ ಕಾಣುವ ಗಂಡನ ಮನೆಯವರ ಪ್ರವೃತ್ತಿ, ಅದಕ್ಕೆ ಸಹಜವಾದ ಸ್ವಾರ್ಥ- ಪ್ರವೃತ್ತಿಯೊಂದಿಗೆ, ವಂಶದ ಪ್ರತಿಷ್ಠೆ ಶ್ರೀಮಂತಿಕೆ ಮೊದಲಾದ ಇತರ ಕಾರಣಗಳು ಸೇರುವುವು. ಹೀಗೆ ಆರಂಭವಾಗುವ ವಿಕ್ಷಿಪ್ತತೆಯು ಕೊನೆಗೆ ವಿಚ್ಛೇದನದಲ್ಲಿ ಪರ್ಯವಸಾನಗೊಳ್ಳುವುದು.

ಇದು ಹೆಚ್ಚಾಗಿ ಹಿಂದಿನದಿನಗಳಲ್ಲಿ ಕಂಡುಬರುತ್ತಿದ್ದ ಪ್ರವೃತ್ತಿ ; ಆದರೆ ಇತ್ತೀಚಿನ ದಿನಗಳಲ್ಲಿ ಅವಿಭಕ್ತ ಕುಟುಂಬಗಳು ಅಪರೂಪವೆನ್ನಿಸುತ್ತಿರುವುದರಿಂದ ಇದು ಅಂತಹ ಗಮನಾರ್ಹಕಾರಣವಾಗಿ ಉಳಿದಿಲ್ಲ. ಇದರಲ್ಲಿ ವಿಚ್ಛೇದನ ಅಥವಾ ಸಾಮಾನ್ಯವಾಗಿ ವಧುವಿನ ದುರಂತಕ್ಕೆ ಕಾರಣವಾಗುವ ಅಂಶ ವರದಕ್ಷಿಣೆಯ ಪಿಡುಗು. ಪೀಡಿಸಿ ವರದಕ್ಷಿಣೆ ಪಡೆಯುವುದೇ ಗಂಡಿನವರ ಹಕ್ಕು ಎಂಬ ಧೋರಣೆ ಇಂತಹ ಅನಾಹುತಕ್ಕೆ ಕಾರಣವಾಗುತ್ತದೆ. ಇದಕ್ಕೆ ಇಂದಿನ ವರದಕ್ಷಿಣೆ ನಿಷೇಧದ ಕಾನೂನು ಒಂದು ರೀತಿಯ ಪರಿಹಾರವಾಗಿ ಬಂದಿರುವುದು ಸ್ವಾಗತಾರ್ಹವಾದ ಅಂಶ. ಆದರೂ ಇದು ಪೂರ್ಣವಾಗಿ ಹತೋಟಿಗೆ ಬಂದಿದೆ ಎಂದು ಹೇಳುವಂತಿಲ್ಲ ಎನ್ನುವುದು ಸಹ ಅಷ್ಟೇ ಸತ್ಯ.

ಇಂತಹ ಸಂದರ್ಭಗಳಲ್ಲಿ ತಮ್ಮ ಹೆಣ್ಣುಮಕ್ಕಳಿಗೆ ಪ್ರತಿಷ್ಠೆಯ ಸಂಕೇತವೆಂಬಂತೆ ಬೆಂಬಲ ವ್ಯಕ್ತಪಡಿಸುವ ಅವರ ತಂದೆ ತಾಯಿ ಮೊದಲಾದವರು ಒಂದುರೀತಿಯಲ್ಲಿ ತಮ್ಮ ಮಕ್ಕಳಿಗೆ ತುಂಬಲಾರದ ನಷ್ಟವನ್ನೇ ಉಂಟುಮಾಡಿ, ಅವರ ಬಾಳನ್ನು ಅತಂತ್ರವಾಗಿಸುವರು. ವಿವೇಕ ಇರುವವರು ಇಂತಹ ತಪ್ಪನ್ನು ಸರ್ವಥಾ ಮಾಡಲಾರರು. ಇದರ ಅರ್ಥ ಗಂಡ ನೀಡುವ ಹಿಂಸೆಗಳನ್ನೆಲ್ಲ ಮೂಕಪಶುವಿನಂತೆ ಹೆಂಡತಿಯಾದವಳು ಸಹಿಸಿಕೊಂಡು ತನ್ನ ಜೀವನವನ್ನೇ ಬಲಿಕೊಡುವುದು ಎಂದರ್ಥವಲ್ಲ; ಸಣ್ಣಪುಟ್ಟ ಪ್ರಸಂಗಗಳನ್ನು ವಿನಾಕಾರಣವಾಗಿ ದೊಡ್ಡದು ಮಾಡಿಕೊಂಡು ಭಾವೋದ್ವೇಗ ಮೊದಲಾದ ಕಾರಣಗಳಿಂದ ತಮ್ಮ ಸಂಸಾರವನ್ನು ತಾವೇ ಹಾಳುಮಾಡಿಕೊಳ್ಳುವ ದುಷ್ಟವೃತ್ತಿ ಸಲ್ಲದು ಎಂಬುದು ಮಾತ್ರ.

ಇಂತಹ ಹೆಚ್ಚಿನ ಸಂದರ್ಭಗಳಲ್ಲಿ ತವರುಮನೆಯವರ ಕುಮ್ಮಕ್ಕು ಮತ್ತೊಂದು ಬಗೆಯಲ್ಲಿ ಪ್ರಧಾನಪಾತ್ರವನ್ನು ನಿರ್ವಹಿಸುವುರು. ಎಂದರೆ ಅವರು ನೀಡುವ ಆರ್ಥಿಕ ಭದ್ರತೆ ಮೊದಲಾದವುಗಳು ವಿಚ್ಛೇದನದಂತಹ ದುಷ್ಕಾರ್ಯಕ್ಕೆ ಎಳೆಸಲು ಪ್ರೇರಣೆಯಾಗುವವು. ಇನ್ನು ಸ್ವಯಂ ಗಂಡನಿಗೆ ಸಮಸಮನಾಗಿ ಅಥವಾ ಕೆಲವು ಪ್ರಸಂಗಗಳಲ್ಲಿ ತನ್ನ ಗಂಡನಿಗಿಂತ ಮಿಗಿಲಾಗಿಯೇ ಹಣಗಳಿಸುವ ಸ್ತ್ರೀಯರು ಸಲ್ಲದ ಆತ್ಮಾಭಿಮಾನವನ್ನು ಬೆಳೆಸಿಕೊಂಡು, ತಮ್ಮ ಹಿರಿಮೆಯನ್ನು ಸಾಧಿಸುವ ಒಣಪ್ರತಿಷ್ಠೆಗಾಗಿ ತಮ್ಮ ಸಾಂಸಾರಿಕ ಜೀವನವನ್ನೇ ಬಲಿಕೊಡುವುದು ಇಂದಿನ ವಿಚ್ಛೇದನಗಳಲ್ಲಿ ಅತ್ಯಂತ ಪ್ರಧಾನ ಕಾರಣ ಎಂಬುದಾಗಿ ಸಮೀಕ್ಷೆಗಳು ದೃಢಪಡಿಸಿವೆ.

ತನ್ನ ಮಗಳಾದ ಸಂಜ್ಞೆಯು ಸೂರ್ಯನ ಬೇಗೆಯನ್ನು ತಾಳಲಾರದೆ ಅವನೊಂದಿಗೆ ಸಂಸಾರವನ್ನು ಮುಂದುವರಿಸಲಾಗದೆ, ತಂದೆಯಾದ ತ್ವಷ್ಟ್ರುವಿನ ಬಳಿಗೆ ಬಂದಾಗ ಅವನು ಪತಿಯನ್ನು ತೊರೆದು ಬಂದ ಅವಳಿಗೆ ಆಸರೆನೀಡಲು ನಿರಾಕರಿಸಿದ ಹರಿವಂಶದ ಪ್ರಸಂಗ ಇಲ್ಲಿ ಸ್ಮರಣೀಯವಾದುದು[೧]. ಇದರಿಂದ ಅವಳು ಮುಂದೊಮ್ಮೆ ಪುನಃ ತನ್ನ ಪತಿಯಾದ ಸೂರ್ಯನೊಂದಿಗೆ ಜೊತೆಗೂಡುವಂತಾಗಿ ಅಶ್ವಿನೀದೇವತೆಗಳಂತಹ ಸತ್ಪುತ್ರರನ್ನು ಪಡೆಯಲು ಸಾಧ್ಯವಾಗುವ ಸನ್ನಿವೇಶ ಒದಗಿ ಅವಳ ಸಂಸಾರ ಸುಖಮಯವಾದ ಉಲ್ಲೇಖವು ಗಮನಾರ್ಹ.

ಗಂಡನ ತಂದೆತಾಯಿಗಳು ಮೊದಲಾಗಿ ಯಾವ ಬಂಧುಗಳೂ ಸಹ ಜೀವಿಸಿರ-ಕೂಡದು ಎಂಬ ಮತ್ತೊಂದು ಬಗೆಯ ವಿಕೃತಚಿಂತನೆಯನ್ನು ಆಧುನಿಕ ತರುಣಿಯರು ಹಾಗೂ ಅವರ ಪಾಲಕರು ಹೊಂದಿರುವುದು ಈ ಕಾಲದ ಮತ್ತೊಂದು ಬಗೆಯ ದುರಂತ. ಇಂತಹ ಬಯಕೆಗೆ ಹಿನ್ನೆಲೆಯಾಗಿ ಸ್ವೇಚ್ಛಾಪ್ರವೃತ್ತಿ ಅಡಗಿರುತ್ತದೆ. ತಮ್ಮಿಬ್ಬರ ಸುಖಸಂತೋಷಗಳಿಗೆ ಗಂಡನ ಸಂಬಂಧಿಗಳಿಂದ, ವಿಶೇಷವಾಗಿ ತಂದೆತಾಯಿಗಳಿಂದ ಅಡ್ಡಿ ಒದಗುವುದು ಎಂಬ ಭ್ರಮೆ ಇದಕ್ಕೆ ಕಾರಣ. ಇಂತಹವರಿಗೆ ಅವಿಭಕ್ತ ಕುಟುಂಬದಲ್ಲಿನ ವಿಶೇಷ ಸವಲತ್ತುಗಳ ಪರಿಕಲ್ಪನೆ ಇರುವುದಿಲ್ಲ. ಸಂಸಾರದಲ್ಲಿ ಒದಗುವ ಆಗುಹೋಗುಗಳಿಗೆ ನಿಜ ಅರ್ಥದಲ್ಲಿ ನೆರವಾಗುವ ಹೃದಯವಂತಿಕೆ ಸಹಜವಾಗಿ ಬಂಧುವರ್ಗಕ್ಕೆ ವಿಶೇಷವಾಗಿ ಇರುತ್ತದೆ. ಕೆಲವು ಅಪವಾದಗಳನ್ನು ಬಿಟ್ಟಲ್ಲಿ, ಈ ಕಾಲದಲ್ಲಿ ಹೆಚ್ಚಿನವರು ತಮ್ಮ ಮಕ್ಕಳ ಸುಖಸಂತೋಷವನ್ನು ಬಯಸುವರೇ ಹೊರತು, ಅವರ ಬಾಳಿನಲ್ಲಿ ವಿಷಹಿಂಡುವ ದುಷ್ಪ್ರವೃತ್ತಿಯನ್ನಲ್ಲ. ನಿತ್ಯಜೀವನದ ಬಗೆಬಗೆಯ ಸಂಕಷ್ಟಗಳಿಗೆ ಅವರಿಂದ ಲಭಿಸುವ ನೆರವು ಅಪಾರವಾದುದು. ಅದರೊಂದಿಗೆ ವಂಶಪಾರಂಪರ್ಯವಾಗಿ ಬರುವ ಸಂಸ್ಕೃತಿ ಮತ್ತೊಂದು ಬಗೆಯ ವರ ಎಂಬ ಎಚ್ಚರವನ್ನು ಇವರು ಹೊಂದುವ ಅಗತ್ಯವಿದೆ. ಈ ಮುನ್ನ ತಿಳಿಸಿದಂತೆ ವಿವಾಹ ಮುಖ್ಯಾರ್ಥದಲ್ಲಿ ಒಂದು ಸಂಸ್ಕೃತಿ ವಾಹಕವಾದ ವಿಶಿಷ್ಟಸಂಸ್ಕಾರ ಎಂಬ ಪವಿತ್ರ ಹಿನ್ನೆಲೆಯನ್ನು ಇಂತಹವರು ಅರಿಯುವ ಅಗತ್ಯವಿದೆ. ಪ್ರಾಚೀನಸಂಸ್ಕೃತಿಯ ಆಚರಣೆ ಕೇವಲ ತೋರಿಕೆಯಾಗಿರದೆ, ಮನಸ್ಸಿಗೆ ಮುದನೀಡುವ ದಿವ್ಯತೆಯನ್ನೂ ಸಹ ಹೊಂದಿರುತ್ತದೆ ಎಂಬುದನ್ನು ಗಮನಿಸಬೇಕು. ಅವರಿಂದ ಜನಿಸುವ ಮಕ್ಕಳು ಅಸಾಮಾನ್ಯ ಸಾಧನೆಗೆ ಸ್ಫೂರ್ತಿ ಪಡೆಯಲು ಮನೆಯಲ್ಲಿನ ಹಿರಿಯರ ಒಡನಾಟ, ಅನೇಕ ಬಗೆಯಲ್ಲಿ ಪೂರಕವಾಗಿರುತ್ತದೆ.

ವಿವಾಹದ ಸರಿಯಾದ ಮಹತ್ತ್ವವು ತಿಳಿಯದಂತಾಗಲು ಇಂದಿನ ದಿನಗಳಲ್ಲಿ ಹಿಂದೆ ಹೇಳಿದಂತೆ ಐಟಿ-ಬಿಟಿಗಳಲ್ಲಿ ನಡೆಯುವ ಸಹೋದ್ಯೋಗ ಪ್ರಬಲ ಕಾರಣಗಳ-

---

೧. ಪಿತುಃ ಸಮೀಪಗಾ ಸಾ ತು ಪಿತ್ರಾ ನಿರ್ಭರ್ತ್ಸಿತಾ ತದಾ ।
ಭರ್ತುಃ ಸಮೀಪಂ ಗಚ್ಛೇತಿ ನಿಯುಕ್ತಾ ಚ ಪುನಃ ಪುನಃ ॥ -ಹರಿವಂಶ(೧/೯/೧೬)

ಲ್ಲೊಂದಾಗಿದೆ. ಇದಕ್ಕೆ ನೀರೆರೆಯುವಂತೆ ಇರುವ ಇತರ ಕಾರಣಗಳಲ್ಲಿ ದೂರದರ್ಶನಕ್ಕೆ ಅಗ್ರಸ್ಥಾನ. ಕೆಲಸದ ಪರಿಸರ, ನೋಡುವ ದೃಶ್ಯಗಳು, ಮನಸ್ಸನ್ನು ಕಲುಷಿತಗೊಳಿಸಿ, ತೀರ ಕ್ಷುಲ್ಲಕ ಕಾರಣಕ್ಕೂ ತಮ್ಮ ಸಂಸಾರವನ್ನು ತಮ್ಮ ಕೈಯ್ಯಾರ ಒಡೆದುಕೊಳ್ಳುವ ದುಷ್ಪ್ರವೃತ್ತಿಗೆ ಪ್ರೇರಣೆಯನ್ನು ಒದಗಿಸುತ್ತದೆ. ಜನತೆಯ ಚಿಂತನಶಕ್ತಿಯೇ ಕುಂಠಿತವಾಗಿ ತೋರಿಕೆಯ ಪ್ರತಿಷ್ಠೆ ಪ್ರಧಾನವೆನ್ನಿಸಿ, ಅತ್ಯಂತ ಸಾಮಾನ್ಯವೆನ್ನಿಸುವ ಕಾರಣವೂ ಸಹ ವಿಚ್ಛೇದನದತ್ತ ಸೆಳೆಯುವುದು ಸಣ್ಣ ದುರಂತವೇನಲ್ಲ. ವಿವಾಹದ ಅನಂತರದ ಹೊಂದಾಣಿಕೆಯನ್ನು ತಪಸ್ಸು ಎಂದು ಭಾವಿಸುವ ಸಂಸ್ಕೃತಿ ಇಂದು ಹೆಚ್ಚು ಕಡಿಮೆ ಪೂರ್ಣವೆಂಬಂತೆ ಮರೆಯಾಗಿದ್ದು ಅದು ಕೇವಲ ಒಂದು ತಾತ್ಕಾಲಿಕ ವ್ಯವಸ್ಥೆ ಎಂಬ ಭಾವ ಹೆಚ್ಚಿನ ಯುವ ಜನತೆಯಲ್ಲಿ ಕಂಡುಬರುತ್ತಿರುವುದು ಈ ಸಂಸ್ಕಾರದ ಪ್ರಾಧಾನ್ಯಕ್ಕೆ ಬಿದ್ದಿರುವ ದೊಡ್ಡದಾದ ಕೊಡಲಿಪೆಟ್ಟು ಎಂಬುದು ಗಮನಿಸಲೇಬೇಕಾದ ಸತ್ಯ.

ಇದಕ್ಕೆಲ್ಲಾ ಮುಖ್ಯಪರಿಹಾರವಾಗಿ, ಆಗಬೇಕಿರುವ ಕಾರ್ಯ, ವಿವಾಹಸಂಸ್ಕಾರದ ಪಾವಿತ್ರ್ಯ, ಪ್ರಾಮುಖ್ಯ, ಮೊದಲಾದವುಗಳನ್ನು ಸ್ಫುಟವಾಗಿ ಪ್ರತಿಪಾದಿಸುವ ಕಾರ್ಯ. ಸಮಾಜದಲ್ಲಿ ಇಂದು ಕಳ್ಳತನ, ಸುಳ್ಳುತನ, ಕೊಲೆ, ದರೋಡೆಗಳಿಗೆ ನಿಯಂತ್ರಣವಾಗಿ ಕೆಲಸಮಾಡುತ್ತಿರುವುದು ಅವುಗಳಿಂದಾಗುವ ದುಷ್ಪರಿಣಾಮದ ದರ್ಶನದಿಂದಾಗಿ; ಆದರಿಂದಾಗಿ ಅಂತಹ ಪ್ರವೃತ್ತಿಯ ಜನರೂ ಸಹ ಅವುಗಳಿಂದ ದೂರ ಉಳಿಯಲು ಸಾಧ್ಯವಾಗುತ್ತಿದೆ. ಕಾನೂನಿನ ಭಯವು ಅಂತಹ ದುಷ್ಕಾರ್ಯದಿಂದ ಜನರನ್ನು ದೂರವಿರಿಸಲು ನೆರವಾಗುವುದು.

ಇದರಂತೆ ವಿವಾಹದ ಪಾವಿತ್ರ್ಯದ ಪ್ರತಿಪಾದನೆ ವ್ಯಾಪಕವಾಗಿ ನಡೆದಾಗ, ವಿಚ್ಛೇದನ-ದಿಂದಾಗುವ ಸಾಮಾಜಿಕ, ಆಧ್ಯಾತ್ಮಿಕ ದುರಂತಗಳ ಅರಿವನ್ನು ಮೂಡಿಸಿದಾಗ, ಇದರ ಪ್ರಮಾಣ ಗಮನಾರ್ಹವಾಗಿ ಕುಸಿಯುವುದು ಸಹಜ. ಈ ನಿಟ್ಟಿನಲ್ಲಿ ವಿವಾಹಸಂಸ್ಕಾರದ ಅನೇಕ ಮುಖಗಳನ್ನು ಅರಿತುಕೊಳ್ಳುವುದು ಇಂದಿನ ಆದ್ಯತೆಗಳಲ್ಲಿ ಒಂದಾಗಿದೆ.

## ಗೃಹಸ್ಥಾಶ್ರಮ

ಇನ್ನು ಆಶ್ರಮವ್ಯವಸ್ಥೆಯಲ್ಲಿ ಗೃಹಸ್ಥಾಶ್ರಮ ಎರಡನೆಯದು. ಮೊದಲನೆಯದು ಬ್ರಹ್ಮ-ಚರ್ಯಾಶ್ರಮವಾದರೆ ಮೂರನೆಯದು ವಾನಪ್ರಸ್ಥಾಶ್ರಮ, ಕೊನೆಯದು ಸಂನ್ಯಾಸಾಶ್ರಮ.

ಮೇಲ್ನೋಟಕ್ಕೆ ಗೃಹಸ್ಥಾಶ್ರಮವು ಆಶ್ರಮಗಳಲ್ಲಿ ಒಂದು ಎನ್ನಿಸಿದರೆ, ವಸ್ತು- ಸ್ಥಿತಿಯಲ್ಲಿ ಅದರ ಮಹತ್ತ್ವ ತುಂಬಾ ವಿಶಿಷ್ಟವಾದುದು. ಬ್ರಹ್ಮಚರ್ಯಾಶ್ರಮದಲ್ಲಿ ಪ್ರಧಾನವಾಗಿ ವಿದ್ಯಾಭ್ಯಾಸಕ್ಕೆ ಆದ್ಯತೆ. ಪ್ರಾಚೀನಕಾಲದಲ್ಲಿ ಇಂತಹ ವಿದ್ಯಾಭ್ಯಾಸವು ವೇದವಿದ್ಯಾ-ಭ್ಯಾಸವಾದ್ದರಿಂದ ಆದ್ಯತೆಯಾಗಿತ್ತು. ಬ್ರಹ್ಮ ಎಂಬುದಕ್ಕೆ ವೇದ ಎಂಬ ಅರ್ಥವೂ ಇದೆ. ಈ ಅರ್ಥದಲ್ಲಿ ಅದು ಸಾರ್ಥಕವೆನ್ನಿಸುವುದು; ಆಧುನಿಕ ಜೀವನದ ವ್ಯವಸ್ಥೆಯಲ್ಲಿಯೂ

ಲೌಕಿಕವಿದ್ಯಾಭ್ಯಾಸದ ರೂಪದಲ್ಲಿ ಇದು ಉಳಿದುಕೊಂಡು ಬಂದಿದೆ. ಗೃಹಸ್ಥಾಶ್ರಮ ಅನಂತರದ್ದು; ವಿದ್ಯಾಭ್ಯಾಸ ಮುಗಿಸಿದವನು ಆರ್ಥಿಕಭದ್ರತೆಯನ್ನು ಪಡೆದು ಉದ್ಯೋಗ-ಶೀಲನಾಗುವುದರಿಂದ ಅವನಿಗೆ ಸಂಸಾರನಿರ್ವಹಣೆಯ ಅರ್ಹತೆ ಲಭಿಸುವುದು. ಪ್ರಾಚೀನ ಪದ್ಧತಿಯಲ್ಲೂ ವಿದ್ಯಾಭ್ಯಾಸ ಪೂರೈಸಿದವನು ಗುರುಗಳ ಆದೇಶದಂತೆ ಗೃಹಸ್ಥನಾಗುವುದು ಅಗತ್ಯವಾಗಿತ್ತು: [೧]ಪ್ರಜಾತಂತುಂ ಮಾ ವ್ಯವಚ್ಛೇತ್ಸೀಃ. ವಿದ್ಯಾಭ್ಯಾಸ ಮುಗಿಸಿದವನು ಎರಡು ಬಗೆಯ ಹೊಣೆಯನ್ನು ನಿರ್ವಹಿಸುವ ಕರ್ತವ್ಯಕ್ಕೆ ಬದ್ಧನಾಗುವನು. ಮೊದಲನೆಯದು ತಾನು ಜನಿಸಿದ ವಂಶವನ್ನು ಅಭಿವೃದ್ಧಿಗೊಳಿಸುವುದು; ಇದು ತಾನು ಉದ್ಯೋಗಕ್ಕೆ ಸೇರಿದ ಸಂಸ್ಥೆಯನ್ನು ವಿಕಾಸಗೊಳ್ಳುವಂತೆ ಮಾಡುವ ಜವಾಬ್ದಾರಿಯನ್ನು ಆಧುನಿಕ ಮಾನವ ಹೊಂದುವ ಪರಿಕಲ್ಪನೆಗೆ ಹತ್ತಿರವಾದುದು. ತನ್ನ ವಂಶವನ್ನೂ ಸಹ ಸಂಖ್ಯೆ ಹಾಗೂ ಸತ್ವ ಎರಡರಲ್ಲೂ ಬೆಳೆಸಬೇಕಾದ ಅಗತ್ಯ ಅವನಿಗಿದೆ. ಅದರಲ್ಲೂ ಸಹ ಸತ್ವಕ್ಕೆ ಹೆಚ್ಚು ಪ್ರಾಧಾನ್ಯ; ಎಂದರೆ ಕೇವಲ ಸಂತತಿ ಪಡೆಯುವುದು ಮಾತ್ರವಲ್ಲದೆ ಅಂತಹ ಸಂತತಿ ತನ್ನ ವಂಶ ಹಾಗೂ ಸಮಾಜದ ಉನ್ನತಿಗೆ ಕಾರಣವಾಗುವಂತಹ ಶ್ರೇಷ್ಠ ಸಂತತಿಯಾಗಬೇಕು. ಇದು ಸಹ ತಾನು ಉದ್ಯೋಗ-ಮಾಡುವ ಸಂಸ್ಥೆಯು ಅತ್ಯುನ್ನತ ಮಟ್ಟವನ್ನು ತಲುಪುವಂತೆ ನೋಡಿಕೊಳ್ಳುವ ಪರಿಕಲ್ಪನೆಗೆ ಸನಿಹವಾದುದು. ಹುದ್ದೆಗಳಿಗೆ ಆಯ್ಕೆ ಮಾಡುವಾಗ ಅರ್ಹತೆಗೆ ಆದ್ಯತೆ ನೀಡುವ ಪರಿಕಲ್ಪನೆಯೂ ಇದೇ ಆಗಿದೆ. ಅರ್ಹತೆ ಇಲ್ಲದವನನ್ನು ಹುದ್ದೆಗೆ ನೇಮಕಗೊಳಿಸಿದಾಗ ಅದರಿಂದ ಇಡೀ ಸಂಸ್ಥೆ ಹಿನ್ನಡೆಯನ್ನು ಕಾಣುವಂತಾಗುವಂತೆ, ಅನರ್ಹ ಸಂತತಿ ಪಡೆದಾಗ, ವಂಶದ ಹಿನ್ನಡೆಗೆ ಕಾರಣವಾಗುವುದು ಎಂದರ್ಥ.

ಈ ಅರ್ಥದಲ್ಲಿ ದುರ್ಯೋಧನನಂತಹ ದುಷ್ಟ ಜನಿಸಿದಾಗ, ಅವನ ದೇಹಲಕ್ಷಣ ಹಾಗೂ ಆ ಕಾಲದ ಉತ್ಪಾತಗಳನ್ನು ಗಮನಿಸಿದ ವಿದುರ ಅಂತಹವನಿಂದ ಇಡೀ ವಂಶ ಅಳಿಯುವ ಎಚ್ಚರಿಕೆಯನ್ನು ನೀಡಿ, ಅವನ ಪರಿತ್ಯಾಗಕ್ಕೆ ಧೃತರಾಷ್ಟ್ರನಿಗೆ ಉಪದೇಶನೀಡುವ ಪ್ರಸಂಗ ಅರ್ಥವತ್ತಾದುದು ಎನ್ನಿಸುವುದು.

ಎರಡನೆಯದು ತಾನು ಗಳಿಸಿದ ವಿದ್ಯೆ ಸಹ ಹೆಚ್ಚು ಪ್ರಸಾರ ಕಂಡು ಸಮಾಜದ ಉನ್ನತಿಗೆ ಕಾರಣವಾಗುವಂತಹ ಎಚ್ಚರವನ್ನು ವಹಿಸುವುದು. ಪ್ರಜಾತಂತು ಎಂಬ ಮಾತಿಗೆ ಈ ಅರ್ಥವೂ ವಿಹಿತ. ಇದನ್ನು ಶಾಸ್ತ್ರಗಳಲ್ಲಿ ಔರಸ ಸಂತತಿ, ವಿದ್ಯಾಸಂತತಿ ಎಂಬುದಾಗಿ ವಿಭಾಗಮಾಡಿ ತಿಳಿಸಿದೆ. ಈ ಎರಡು ವಿಧವಾದ ಹೊಣೆಯನ್ನು ಸಮರ್ಪಕವಾಗಿ ಪೂರೈಸಿದಾಗ ಗೃಹಸ್ಥಾಶ್ರಮ ಸಾರ್ಥಕವೆನ್ನಿಸುವುದು. [೨]ಪತ್ನಿ ಇಲ್ಲದವನಿಗೆ ಯಜ್ಞ-

---

೧. ಪ್ರಜಾಭಿರಜ್ಞೇ ಅಮೃತತ್ವಮಶ್ಯಾಮ್। -ಋಗ್ವೇದ(೫/೪/೧೦)

೨. ಅಯಾಜ್ಞೀಯೋ ವಾ ಏಷ ಯೋಽಪತ್ನೀಕಃ। -ತೈತ್ತಿರೀಯಬ್ರಾಹ್ಮಣ(೨/೨/೨/೬)

ಯಾಗಾದಿಗಳಲ್ಲಿ ಅರ್ಹತೆಯೂ ಸಹ ತಪ್ಪಿಹೋಗುವುದು; ಎಂದರೆ ಯಜ್ಞಯಾಗಾದಿಗಳಿಗೆ ಅರ್ಹತೆಯನ್ನು ಪಡೆಯಲು ಸಹ ಗೃಹಸ್ಥಾಶ್ರಮ ಅತ್ಯಗತ್ಯ.

ಮೂರನೆಯದು ವಾನಪ್ರಸ್ಥಾಶ್ರಮ ; ಇದು ವಯಸ್ಸಿಗೂ ಸಹ ಸಂಬಂಧಿಸಿದ ಆಶ್ರಮವಾಗಿದೆ. ಎಂದರೆ ಗೃಹಸ್ಥಾಶ್ರಮದ ಪೂರ್ಣತೆಯ ಹಂತದಲ್ಲಿ ತನ್ನ ಸಂತತಿ ಪ್ರೌಢವಾಗಿದ್ದು ತನ್ನ ಕರ್ತವ್ಯವನ್ನು ಸ್ವತಃ ನಿರ್ವಹಿಸುವ ಅರ್ಹತೆಯನ್ನು ಪಡೆದಿರುತ್ತದೆ. ಆ ಹೊತ್ತಿನಲ್ಲಿ ಪ್ರಧಾನವಾಗಿ, ತನ್ನ ಆತ್ಮೋದ್ಧಾರಕ್ಕೆ ಗಮನವಿತ್ತು ಅದರ ಸಾಧನೆಗಾಗಿ, ಅನುಕೂಲತೆಯನ್ನು ಕಲ್ಪಿಸುವಂತಹ ವನಕ್ಕೆ ತೆರಳಿ, ಅಲ್ಲಿ ನೆಲೆಸುವುದು ಮುಖ್ಯವೆನ್ನಿಸುತ್ತದೆ. ಅಲ್ಲಿಯೂ ಸಹ ಜ್ಞಾನಪರಂಪರೆಯನ್ನು ಮುಂದುವರೆಸುವ ಬಾಧ್ಯತೆಯು ಇದ್ದೇ ಇರುವುದು.

ಸಂನ್ಯಾಸವು ಕೊನೆಯ ಹಂತ. ವಿರಕ್ತಿಗೆ ಪೂರ್ಣತೆ ಲಭಿಸಿದಾಗ, ಇದರಿಂದ ಇನ್ನೂ ಹೆಚ್ಚಿನ ಸಾಧನೆ ಸಾಧ್ಯ. ಇತರ ಆಶ್ರಮಗಳಿಗೆ ವಿಹಿತವಾದ ಹೋಮಹವನಗಳು, ದೇವಕಾರ್ಯಾದಿ ಪಂಚಮಹಾಯಜ್ಞಗಳು, ವೃದ್ಧಿ ಸೂತಕಾದಿ ಪ್ರಸಂಗಗಳು, ವಿಶೇಷವಾದ ಜ್ಞಾನಸಾಧನೆಗೆ ಅಡ್ಡಿ ಎನ್ನಿಸುವುದರಿಂದ ಅವುಗಳಿಂದ ವಿನಾಯಿತಿ ಪಡೆಯಲು, ಇದು ನೀಡುವ ಅವಕಾಶ ಅಪಾರವಾದುದು. ಇತರ ಕಾರ್ಯಗಳಲ್ಲಿ ವಿನಿಯೋಗವಾಗುವ ಸಮಯ ಆಧ್ಯಾತ್ಮಿಕಸಾಧನೆಗೆ ವಿನಿಯೋಗವಾಗುವುದರಿಂದ ಪೂರ್ಣಪ್ರಮಾಣದ ಜೀವನದ ಸಾರ್ಥಕ್ಯಕ್ಕೆ ಈ ಆಶ್ರಮ ನೀಡುವ ನೆರವು ಅತ್ಯಪೂರ್ವವಾದುದು.

ಹೀಗೆ ಆಶ್ರಮವ್ಯವಸ್ಥೆಯು ಅತ್ಯಂತ ಸಮರ್ಪಕ ರೀತಿಯಲ್ಲಿ ಜೀವನದ ಪರಿಪೂರ್ಣತೆಗೆ ಅಗತ್ಯವಾದ ವ್ಯವಸ್ಥೆಯಾಗಿ ರೂಪಿತವಾಗಿದೆ.

ಇವುಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಗೃಹಸ್ಥಾಶ್ರಮದ ಹಿರಿಮೆಯು ಅರಿವೆಗೆ ಬರುವುದು. ಬ್ರಹ್ಮಚರ್ಯಾಶ್ರಮವು ಕೇವಲ ವಿದ್ಯಾರ್ಜನೆಗೆ ಮೀಸಲಾದ್ದರಿಂದ ಆ ಆಶ್ರಮದಲ್ಲಿ ಸಂಪಾದನೆಗೆ ಅವಕಾಶವಿರದು. ಇದರಿಂದಾಗಿ ಅವರ ಸಂರಕ್ಷಣೆಯ ಜವಾಬ್ದಾರಿ ಗೃಹಸ್ಥಾಶ್ರಮಿಗಳದು. ಸಂನ್ಯಾಸಿಗಳಿಗೆ ಸಂಪಾದನೆಯೇ ನಿಷಿದ್ಧ. ಅವರ ಜೀವನನಿರ್ವಹಣೆಯ ಹೊಣೆಯು ಸಹ ಕೇವಲ ಗೃಹಸ್ಥಾಶ್ರಮಿಗಳದೇ ಆಗಿದೆ. ವಾನಪ್ರಸ್ಥರು ಗ್ರಾಮದಲ್ಲಿ ನೆಲೆಸುವುದಿಲ್ಲವಾದ್ದರಿಂದ ಅವರ ಜವಾಬ್ದಾರಿ ಗೃಹಸ್ಥನಿಗೆ ಸಂಬಂಧಿಸಿದ್ದಲ್ಲ, ಆದರೆ ಅವರಿಗೆ ಅವರದೇ ಆದ ರೀತಿಯಲ್ಲಿ ನೆರವು ನೀಡುವ ಒಂದು ಬಗೆಯ ಜವಾಬ್ದಾರಿಯನ್ನು ಗೃಹಸ್ಥನಿಗೆ ಅಲ್ಲಗಳೆಯುವಂತಿಲ್ಲ. ಗೃಹಸ್ಥನು ಸಂಪಾದನೆಯೊಂದಿಗೆ, ಸಂರಕ್ಷಣೆಗೆ ಅಗತ್ಯವಾದ ವಾಸಸ್ಥಾನ ಮೊದಲಾದವುಗಳನ್ನು ಹೊಂದಿರುವುದರಿಂದ ಇತರ ಆಶ್ರಮಗಳ ಸಂರಕ್ಷಣೆಯ ಹೊಣೆಯನ್ನು ನಿರ್ವಹಿಸಲೇಬೇಕಾದ ಅನಿವಾರ್ಯತೆಯನ್ನು ಹೊಂದಿರುವನು. ಇದರಿಂದ ರೆಂಬೆ ಮೊದಲಾದವುಗಳಿಗೆ ಬೇರು ಆಧಾರವಾದಂತೆ ಗೃಹಸ್ಥಾಶ್ರಮಿಯು ಇತರ ಆಶ್ರಮಿಗಳಿಗೆ ಆಶ್ರಯಸ್ಥಾನೀಯನಾಗಿರುವನು ಎಂದು ನಿದರ್ಶನದೊಂದಿಗೆ ಶಾಸ್ತ್ರಗಳು ಸಾರಿವೆ.

ದೇಹಕ್ಕೆ ಪ್ರಾಣವಾಯು ಇದ್ದಂತೆ, ಪ್ರಾಣಿಗಳಿಗೆ ಉಸಿರು ಇದ್ದಂತೆ, ಇತರ ಸಕಲ ಆಶ್ರಮಗಳಿಗೂ ಗೃಹಸ್ಥಾಶ್ರಮವು [೧] ಜೀವಾತು ಎನ್ನಿಸಿದೆ. ಇತರ ಮೂರು ಆಶ್ರಮಗಳೂ ಸಹ ಗೃಹಸ್ಥನನ್ನೇ ಉಪಜೀವಿಸಿರುವುದರಿಂದ, ಗೃಹಸ್ಥಾಶ್ರಮವು ಪ್ರಧಾನವೆನ್ನಿಸುವುದು. ತನ್ನ ಸಕಲಸಾಧನೆಗಳೂ ಸಾರ್ಥಕವೆನ್ನಿಸಲು ಶಾಶ್ವತವೆನ್ನಿಸುವ ಸುಖದ ತಾಣ ಲಭಿಸಲು ಇಹಲೋಕದಲ್ಲೂ ಪೂರ್ಣಸುಖಿ ಎನ್ನಿಸಲು ಗೃಹಸ್ಥಾಶ್ರಮವು ವಿಹಿತ. ಋಷಿಗಳು, ಪಿತೃಗಳು, ದೇವತೆಗಳು, ಪ್ರಾಣಿಗಳು ಹಾಗೂ ಅತಿಥಿಗಳು ಸದಾ ಗೃಹಸ್ಥನಿಂದಲೇ ತಮ್ಮ ಬದುಕನ್ನು ನಂಬಿವೆ. ಅಧ್ಯಯನದಿಂದ ಋಷಿಗಳನ್ನು, ಹೋಮಗಳಿಂದ ದೇವತೆಗಳನ್ನು, ಶ್ರಾದ್ಧಗಳಿಂದ ಪಿತೃಗಳನ್ನು ಬಲಿಹರಣದಿಂದ ಭೂತ(ಸಕಲ ಪ್ರಾಣಿಸಂಕುಲ)ಗಳನ್ನು ಆರಾಧಿಸುವ ಹಿರಿಮೆ ಗೃಹಸ್ಥಾಶ್ರಮದ್ದು. ಹೀಗೆ ಗೃಹಸ್ಥಾಶ್ರಮದ ಹಿರಿಮೆ ಅನುಪಮವಾದುದು. ಧನ್ಯೋ ಗೃಹಸ್ಥಾಶ್ರಮಃ ಎಂಬ ಸುಪ್ರಸಿದ್ಧವಾದ ಸೂಕ್ತಿಯಲ್ಲಿ ಈ ಅರ್ಥವು ಅಪೂರ್ವ ರೀತಿಯಲ್ಲಿ ಅನಾವರಣಗೊಂಡಿದೆ.

ಜನಸಾಮಾನ್ಯರು ತಿಳಿದಿರುವಂತೆ ಸ್ವಕುಟುಂಬಪೋಷಣೆಯಷ್ಟೇ ಗೃಹಸ್ಥಾಶ್ರಮ ಎಂಬ ಪರಿಕಲ್ಪನೆ ಅತ್ಯಂತ ನಿಕೃಷ್ಟವಾದುದು. ಇಂತಹ ಉದಾತ್ತ ಆದರ್ಶದಿಂದಾಗಿ ಗೃಹಸ್ಥನು ಸಮಾಜದಲ್ಲಿ ಅಪಾರವಾದ ಗೌರವಾದರಗಳಿಗೆ ಪಾತ್ರನಾಗುವನು.

ವಂಶೋದ್ಧಾರದ ಗುರುತರ ಜವಾಬ್ದಾರಿಯನ್ನಂತೂ ಜನಿಸಿದ ಪ್ರತಿಯೊಬ್ಬನೂ ಸಹ ನಿರ್ವಹಿಸಲೇಬೇಕು. ಇಲ್ಲವಾದಲ್ಲಿ ಪಿತೃಗಳಿಗೆ ಅಪಾರವಾದ ನೋವನ್ನುಂಟುಮಾಡುವ

---

೧. ಯಥಾ ವಾಯುಂ ಸಮಾಶ್ರಿತ್ಯ ಸರ್ವೇ ಜೀವಂತಿ ಜಂತವಃ।
ತಥಾ ಗೃಹಸ್ಥಮಾಶ್ರಿತ್ಯ ವರ್ತಂತೇ ಸರ್ವ ಆಶ್ರಮಾಃ॥
ಯಸ್ಮಾತ್ ತ್ರಯೋऽಪ್ಯಾಶ್ರಮಿಣೋ ಜ್ಞಾನೇನಾನ್ನೇನ ಚಾನ್ವಹಮ್।
ಗೃಹಸ್ಥೇನೈವ ಧಾರ್ಯಂತೇ ತಸ್ಮಾಜ್ಜ್ಯೇಷ್ಠಾಶ್ರಮೋ ಗೃಹೀ॥
ಸ ಸಂಧಾರ್ಯಃ ಪ್ರಯತ್ನೇನ ಸ್ವರ್ಗಮಕ್ಷಯಮಿಚ್ಛತಾ।
ಸುಖಂ ಚೇಹೇಚ್ಛತಾ ನಿತ್ಯಂ ಯೋऽಧಾರ್ಯೋ ದುರ್ಬಲೇಂದ್ರಿಯೈಃ॥
ಋಷಯಃ ಪಿತರೋ ದೇವಾ ಭೂತಾನ್ಯತಿಥಯಸ್ತಥಾ।
ಆಶಾಸತೇ ಕುಟುಂಬಿಭ್ಯಸ್ತೇಭ್ಯಃ ಕಾರ್ಯಂ ವಿಜಾನತಾ॥
ಸ್ವಾಧ್ಯಾಯೇನಾರ್ಚಯೇತರ್ಷೀನ್ ಹೋಮೈರ್ದೇವಾನ್ ಯಥಾವಿಧಿ।
ಪಿತೄನ್ ಶ್ರಾದ್ಧೈಶ್ಚ ನ್ಣನನ್ನೈರ್ಭೂತಾನಿ ಬಲಿಕರ್ಮಣಾ॥ - ಮನುಸ್ಮೃತಿ (೩/೭೭-೮೧)

ದಾರಾಧೀನಾಃ ಕ್ರಿಯಾಃ ಸರ್ವಾಃ ಬ್ರಾಹ್ಮಣಾನಾಂ ವಿಶೇಷತಃ।
ದಾರಾನ್ ಸರ್ವಪ್ರಯತ್ನೇನ ವಿಶುದ್ಧಾಮುದ್ವಹೇತ್ತತಃ।
ದೇವತಾನಾಂ ನಮಸ್ಕಾರು ಪಿತೃಣಾಂ ಚೋದಕಕ್ರಿಯಾಃ।
ದಾರತಃ ಸಂಪ್ರವರ್ತಂತೇ ದಾರಾಃ ಸ್ವರ್ಗಸ್ಯ ಸಂಕ್ರಮಃ।
ಇತ್ಯೇತತ್ ಕಶ್ಯಪಸಮ್ಮತಂ ಬ್ರಹ್ಮಣಶ್ಚಾನುಶಾಸನಮ್॥ -ಕಾಶ್ಯಪ

ಕರ್ತವ್ಯಭ್ರಷ್ಟತೆಗೆ ಪಾತ್ರನಾಗುವುದು ಅನಿವಾರ್ಯವೆನ್ನಿಸುವುದು. ಇದನ್ನು ಸ್ಫುಟಪಡಿಸುವ ಅಪೂರ್ವ ನಿದರ್ಶನವೊಂದು ಶ್ರೀಮನ್ಮಹಾಭಾರತದಲ್ಲಿ ನಿರೂಪಿತವಾಗಿದೆ.

## ಜರತ್ಕಾರುವಿನ ಕಥೆ

ಜರತ್ಕಾರು ಎಂಬುವವನು ಒಬ್ಬ ಮಹಾತಪಸ್ವಿ. ದಿನವಿಡೀ ಸಂಚಾರ. ರಾತ್ರಿಯಷ್ಟೇ ವಿಶ್ರಾಂತಿ; ಸಾಮಾನ್ಯರಿಗೆ ಊಹಿಸಲೂ ಅಶಕ್ಯವಾದ ಇಂತಹ ದೀಕ್ಷೆ ಅವನದಾಗಿತ್ತು. ಪುಣ್ಯತೀರ್ಥಗಳಲ್ಲಿ ಸ್ನಾನಮಾಡುತ್ತಾ ಅವನು ಸಂಚರಿಸುತ್ತಿದ್ದ. ಹೆಚ್ಚಾಗಿ ನಿರಾಹಾರವೇ ಅವನ ಜೀವನದ ವೃತ್ತಿಯಾಗಿತ್ತು. ಆಗೊಮ್ಮೆ ಒಂದು ಸ್ಥಳದಲ್ಲಿ ಬಲೆಯೊಂದರಲ್ಲಿ ತಲೆಕೆಳಗಾಗಿ ನೇತಾಡುತ್ತಿದ್ದ ಪಿತೃಗಳನ್ನು ಕಂಡ. ಅವರು ಜೋಲುತ್ತಿದ್ದ ಬಲೆಯ ಎಲ್ಲಾ ನೂಲುಗಳು ತುಂಡಾಗಿ, ಒಂದು ನೂಲು ಮಾತ್ರ ಉಳಿದುಕೊಂಡಿತ್ತು. ಅದನ್ನು ಸಹ ಕತ್ತರಿಸಲು ಇಲಿಯೊಂದು ಹೊಂಚುಹಾಕುತ್ತಿತ್ತು. ಎಂದರೆ ಅದು ತುಂಡಾದಲ್ಲಿ ಅವರು ಕೆಳಕ್ಕೆ ಬೀಳುವುದು ಖಚಿತವಾಗಿತ್ತು. ಅವರಂತೂ ಕೃಶರು, ದೀನಮುಖರು ಆಗಿ ದುಃಖಿಸುತ್ತಿದ್ದರು. ಅವರ ಬಳಿಗೆ ತೆರಳಿ ಜರತ್ಕಾರು ಕೇಳಿಕೊಂಡ: ''ತಾವಾರು? ನೀವುಗಳು ಹೀಗೆ ನೇತಾಡುತ್ತಿರುವುದಕ್ಕೆ ಕಾರಣವೇನು? ಈ ನೂಲೂ ತುಂಡಾದಲ್ಲಿ ನೀವು ಬಿದ್ದುಹೋಗುವಿರಲ್ಲವೆ ! ನನ್ನಿಂದಾದ ನೆರವನ್ನು ನೀಡಲು ಸಿದ್ಧನಾಗಿರುವೆನು. ನಾನು ನನ್ನ ತಪಸ್ಸಿನ ಎಷ್ಟು ಭಾಗವನ್ನಾದರೂ ನಿಮಗೆ ನೀಡಿ, ಒಳಿತನ್ನು ಮಾಡಲು ಯತ್ನಿಸುವೆ. ಕೃಪೆಯಿಟ್ಟು ತಾವು ತಮ್ಮ ಈ ಪರಿಸ್ಥಿತಿಯನ್ನು ವಿವರಿಸಬೇಕು''. ಪಿತೃಗಳು ಉತ್ತರಿಸಿದರು : ''ನೀನು ವೃದ್ಧ; ಬ್ರಹ್ಮಚಾರಿ ಬೇರೆ. ನಮ್ಮನ್ನು ನೀನು ಉದ್ಧರಿಸಲು ಬಯಸಿರುವಿ. ಆದರೆ ನಿನ್ನ ಯಾವ ತಪಸ್ಸು ಸಹ ನಮ್ಮನ್ನು ಕಾಪಾಡದು. ನಮಗೂ ಸಾಕಷ್ಟು ತಪಸ್ಸಿನ ಸಂಗ್ರಹವುಂಟು. ಆದರೆ ನಮ್ಮ ಸಂತತಿ ನಾಶವಾಗುವ ಹಂತ ತಲುಪಿರುವುದರಿಂದ ನಾವು ನರಕದಲ್ಲಿ ಬೀಳುವಂತಾಗಿದೆ[1]. ಇದು ಅದಕ್ಕೆ ಮುನ್ಸೂಚನೆ. ನಾವು ಯಾಯಾವರ ಎಂಬ ಗುಂಪಿನ ಮುನಿಗಳು. ನಮಗೆ ನಮ್ಮ ಸಂತತಿಯಲ್ಲಿ ಈಗ ಒಬ್ಬನು ಮಾತ್ರ ಉಳಿದುಕೊಂಡಿರುವನು. ಅವನು ಮಂದಭಾಗ್ಯ. ತಪಸ್ಸನ್ನು ಮಾಡುವ ಚಿಂತೆಯಲ್ಲಿ ಮುಖ್ಯಕರ್ತವ್ಯವನ್ನೇ ಮರೆತಿರುವನು. ಅವನ ಹೆಸರು ಜರತ್ಕಾರು ಎಂದು. ವೇದ-ವೇದಾಂಗಗಳಲ್ಲಿ ನಿಪುಣ, ಮಹಾತ್ಮ, ವ್ರತಶೀಲ, ಮಹಾತಪಸ್ವಿ, ಅವನ ತಪಸ್ಸೇ ನಮ್ಮ ಕೇಡಿಗೆ ಕಾರಣವಾಗಿದೆ. ಏಕೆಂದರೆ, ಅವನಿಗೆ ಪತ್ನಿ ಇಲ್ಲ, ಪುತ್ರರಿಲ್ಲ ; ಬಂಧುಗಳಿಲ್ಲ. ಅವನೊಂದಿಗೆ ನಮ್ಮ ವಂಶ ಕೊನೆಗೊಳ್ಳುವ ಚಿಂತೆ ನಮ್ಮನ್ನು ಕಾಡುತ್ತಿದೆ. ನೀನು ಹೋಗಿ ಅವನಿಗೆ ನಮ್ಮ ಪರಿಸ್ಥಿತಿಯನ್ನು ವಿವರಿಸಿ, ಮದುವೆಯಾಗು ಎಂದು ಹೇಳುವೆಯಾ,

---

೧. ಯೇಷಾಂ ತು ಸಂತತಿರ್ನಾಸ್ತಿ ಮರ್ತ್ಯಲೋಕೇ ಸುಖಾವಹಾ।
ನ ತೇ ಲಭಂತೇ ವಸತಿಂ ಸ್ವರ್ಗೇ ಪುಣ್ಯಕೃತೋऽಪಿ ಹಿ॥ -ಮಹಾಭಾರತ(೧/೧೩/೨೧)

ಸಂತತಿ ಬೆಳೆಸು ಎಂದು ತಿಳಿಸುವೆಯಾ. ಇಲ್ಲಿ ಈ ನೂಲನ್ನು ಕತ್ತರಿಸುವ ಈ ಇಲಿ ಬೇರೇನೂ ಅಲ್ಲ, ಅದು ಕಾಲದ ಸಂಕೇತ. ಉಳಿದುಕೊಂಡಿದ್ದ ಒಂದು ತಂತು[೧] ಜರತ್ಕಾರುವಿನ ಸಂಕೇತ. ನಾವು ಈ ತಂತು ಕಡಿದು ಕೆಳಗೆ ಬಿದ್ದಲ್ಲಿ ನಾವು ಮಾತ್ರವಲ್ಲದೆ ನಮ್ಮ ಹಿಂದಿನವರೂ ಅಧೋಗತಿಗೆ ತೆರಳುವಂತಾಗುವುದು. ಜರತ್ಕಾರು ವಿವಾಹವಾಗಿ ಸಂತತಿ ಬೆಳೆಸಿದಲ್ಲಿ ನಮಗೆ ಈ ಅಪಾಯ ತಪ್ಪಿ ಸುಖದಿಂದರಲು ಸಾಧ್ಯ; ಅಪ್ಪ ನೀನಾರು? ನಮ್ಮ ಬಗ್ಗೆ ಇದೆಂತಹ ಕಳಕಳಿ, ಎಲ್ಲವನ್ನೂ ತಿಳಿಸು''.

ಇದನ್ನು ಕೇಳಿದ ಜರತ್ಕಾರುವಿಗೆ ವಿಷಯದ ಅರಿವಾಯಿತು. ಅವರು ತಿಳಿಸಿದ ಜರತ್ಕಾರು ತಾನೇ ಎಂದು ಅರ್ಥಮಾಡಿಕೊಂಡು, ಅವರಲ್ಲಿ ಕ್ಷಮೆ ಯಾಚಿಸಿದ; ತನ್ನ ತಪ್ಪನ್ನು ತಿದ್ದಿಕೊಳ್ಳಲು ನಿಶ್ಚೈಸಿದ. ಅವರು ಆದೇಶವಿತ್ತರು. ''ಮಗು, ನೀನು ಕೂಡಲೇ ಇಲ್ಲಿಂದ ತೆರಳಿ ವಿವಾಹವಾಗು. ವಂಶವನ್ನು ಬೆಳೆಸು'' ಎಂದರು. ಜರತ್ಕಾರು ನುಡಿದ: ''ನಾನು ಈ ಪಿತೃಗಳನ್ನು ಹಾಳಾಗಲು ಬಿಡೆನು. ಮದುವೆಯಾಗಕೂಡದೆಂಬ ನಿಶ್ಚಯವನ್ನು ನಾನೀಗ ತೊರೆದೆ. ಆದರೆ ನನ್ನದೊಂದು ಕರಾರು. [೨]ನನ್ನನ್ನು ವಿವಾಹವಾಗುವ ಕನ್ಯೆಯೂ ಸಹ ನನ್ನ ಹೆಸರಿನವಳೇ ಆಗಿರಬೇಕು ; ಅನುರೂಪಳೂ ಆಗಿರಬೇಕು; ಸರ್ವಥಾ

---

೧. ಅಪುತ್ರಸ್ಯ ಗತಿರ್ನಾಸ್ತೀತ್ಯೇವಂ ವೇದವಿದೋ ವಿದುಃ।
ಪುತ್ರೇಣ ರುಕ್ಮಪಾತ್ರೇ ತು ನಾನ್ನಂ ಭುಕ್ತಂ ಮಯಾ ಸಹ॥
ಕೃತದೋಷೇಣ ನ ಮಯಾ ಕದಾಚಿಲ್ಲಾಲಿತಃ ಸುತಃ।
ಭೂಷಣಾನ್ಯಾದರಾತ್ ಕೃತ್ವಾ ನ ಪುತ್ರೋಽಲಂಕೃತೋ ಮಯಾ॥
ಸ ಸಂಜಾತೋ ನ ಮೇ ಯಃ ಸ್ಯಾತ್ ಪುತ್ರಃ ಪಿತೃಹಿತೇ ರತಃ।
ಸುತಾರ್ಥಂ ಕವಚಂ ಕೃತ್ವಾ ತ್ವಮೇಹೀತಿ ಸ ನೋದಿತಃ।
ಪುತ್ರಹೀನಂ ಚ ಮಾಂ ದೃಷ್ಟ್ವಾ ಕರ್ಷಂತಿ ಯಮಕಿಂಕರಾಃ।
ಗಚ್ಛ ರಾಜನ್ ! ಜವೇನೈವ ಯಮಸ್ಯ ಭವನಂ ತ್ವಿತಿ॥
ಪಾಶಕುಂಠಿತಸರ್ವಾಂಗಃ ಕಿಮು ವಕ್ಷ್ಯಾಮ್ಯಪುತ್ರವಾನ್।
ಚಿತ್ರಗುಪ್ತೇನ ಲಿಖಿತಂ ಅಪುತ್ರತ್ವಂ ಮಹಾಮತೇ।
ಮದ್ಗರ್ಭಜೇನ ಸುಕುಲಂ ಮಾರ್ಜಿತಂ ತು ಕದಾ ಭವೇತ್।
ದುರಾಚಾರೋಽಸಿ ದುರ್ಬುದ್ಧಿರಪುತ್ರೇತಿ ಯಮೇನ ಚ।
ಭಾಷಿತಂ ವಚನಂ ಶ್ರುತ್ವಾ ಕಃ ಪುಮಾನ್ ಸುಖಮಾಪ್ನುಯಾತ್।
ನಷ್ಟದೀಪೋಽತಿನೈಷ್ಠುರ್ಯಃ ಕಷ್ಟೋದ್ಧೂತಕಲೇಬರಃ॥
ವೃಥಾ ಜಾತೋಽತಿಪಾಪಾತ್ಮಾಽಸ್ಮ್ಯಾತ್ಮನೋ ನರಕಾವಹಃ।
ತಂತುಹೀನಂ ಕುಲಂ ಚಾಪಿ ವಿಗತಾಂಬುಂ ಚ ವಾಪಿಕಾಮ್॥
ಅಂಗನಾಂ ಭರ್ತೃಹೀನಾಂ ಚ ಸಂತೋ ನಿಂದಂತಿ ಸಂಸದಿ।
-ಶ್ರೀಭವಿಷ್ಯೋತ್ತರಪುರಾಣ, ವೆಂಕಟೇಶಮಹಾತ್ಮ್ಯ(೬/೩೨-೪೦)

೨. ಸನಾಮ್ನೀ ವಾ ಭವಿತ್ರೀ ಮೇ ದಿತ್ಸಿತಾ ಚೈವ ಬಂಧುಭಿಃ।
ಭೈಕ್ಷಾವತ್ತಾಮಹಂ ಕನ್ಯಾಮುಪಯಂಸ್ಯೇ ವಿಧಾನತಃ॥ -ಮಹಾಭಾರತ(೧/೧೩/೩೦)

ಅಪ್ರಿಯವಾಗಿ ವರ್ತಿಸಕೂಡದು. ಅಂತಹವಳು ದೊರೆತಲ್ಲಿ ನಾನು ವಿವಾಹವಾಗುವೆ''. ಹೀಗೆ ತಿಳಿಸಿದ ಅವನು ಅಂತಹ ಕನ್ಯೆಯ ಅನ್ವೇಷಣೆಗೆಂದು ಲೋಕವನ್ನೆಲ್ಲಾ ಸುತ್ತಿದ. ಆ ವೇಳೆಗೆ ಅವನು ಪ್ರಾಯಮೀರಿದವನು ಎಂಬ ಕಾರಣದಿಂದ ಅವನಿಗೆ ಹೆಣ್ಣುಕೊಡಲು ಯಾರೂ ಮುಂದಾಗಲಿಲ್ಲ. ಜೊತೆಗೆ ಹೆಸರು ಒಂದೇ ಆಗಿರಬೇಕು ಎಂಬ ಕರಾರು ಬೇರೆ. ನಿರಾಶನಾದ ಅವನು ಕೊನೆಗೆ ಅರಣ್ಯಕ್ಕೆ ತೆರಳಿ ಜೋರಾಗಿ ಕೂಗಿಕೊಂಡ. ''ನಾನೀಗ ನನ್ನ ಪಿತೃಗಳ ಕಲ್ಯಾಣಕ್ಕಾಗಿ ವಿವಾಹವಾಗಲೇ ಬೇಕಾಗಿದೆ. ನಾನೀಗ ಕನ್ಯೆಯನ್ನು ಭಿಕ್ಷೆಯಾಗಿ ಬಯಸಿರುವೆ. ನಾನು ದರಿದ್ರ, ವೃದ್ಧ. ಯಾರಾದರೂ ಈಗ ನಾನು ಬಯಸಿದ ನನ್ನ ಹೆಸರಿನ ಕನ್ಯೆಯನ್ನು ನೀಡಿದಲ್ಲಿ ತುಂಬಾ ಉಪಕಾರವಾಗುವುದು'' ಅವನ ಮಾತನ್ನು ಕೇಳಿಸಿಕೊಂಡ ಸರ್ಪಗಳು ಅದನ್ನು ತಮ್ಮ ಒಡೆಯನಾದ ವಾಸುಕಿಗೆ ತಿಳಿಸಿದರು. ಕೂಡಲೇ ನಾಗರಾಜನಾದ ಅವನು ಜರತ್ಕಾರು ಎಂಬ ಕನ್ಯೆಯನ್ನು ಕರೆತಂದು, ಅವನಿಗೆ ಒಪ್ಪಿಸಿ, ತಿಳಿಸಿದ: ''ನಾನು ನಾಗರಾಜನಾದ ವಾಸುಕಿ. ಇವಳು ನಿನಗಾಗಿ ಬಂದಿರುವ ಕನ್ಯೆ. ನನ್ನ ತಂಗಿ; ಹೆಸರು ಸಹ ಜರತ್ಕಾರು ಎಂದೇ''. ಅದಕ್ಕೆ ಒಪ್ಪಿಕೊಂಡ ಜರತ್ಕಾರು ತಿಳಿಸಿದ: ''ಇವಳು ನನಗೆ ಪ್ರಿಯವಲ್ಲದ ರೀತಿಯಲ್ಲಿ ಎಂದೂ ನಡೆಯಕೂಡದು. ಹಾಗಿದ್ದಲ್ಲಿ ಮಾತ್ರ ಇವಳನ್ನು ವಿವಾಹವಾಗುವೆ. ಮಾತಿಗೆ ತಪ್ಪಿ ನಡೆದಲ್ಲಿ ಇವಳನ್ನು ತೊರೆದು ಹೋಗುವೆ''. ವಾಸುಕಿ ಅದರಂತೆ ಭಾಷೆಯಿತ್ತ. ಜರತ್ಕಾರು ಅವಳನ್ನು ವಿಧ್ಯುಕ್ತವಾಗಿ ಪಾಣಿಗ್ರಹಣಮಾಡಿದ.

ತನ್ನ ಪತ್ನಿಯೊಂದಿಗೆ ಜರತ್ಕಾರು ಅನೇಕ ವರ್ಷಗಳ ಕಾಲ ದಾಂಪತ್ಯವನ್ನು ಸಾಗಿಸಿದ. ಮುಂದೊಮ್ಮೆ ಅವಳು ಗರ್ಭಿಣಿಯಾದಳು. ಆಗೊಂದುದಿನ ಜರತ್ಕಾರು ಅವಳ ತೊಡೆಯಮೇಲೆ ತಲೆಯಿರಿಸಿ, ವಿಶ್ರಾಂತಿ ಪಡೆಯುತ್ತಿದ್ದ. ಸೂರ್ಯ ಮುಳುಗುವ ವೇಳೆ ಸಮೀಪಿಸಿತು. ಸಂಧ್ಯಾಕಾಲ ಮೀರಿದಲ್ಲಿ ಅವನು ತುಂಬಾ ಖಿನ್ನನಾಗುವನೆಂದು ಬಗೆದು, ಅವಳು ಅವನನ್ನು ಎಚ್ಚರಿಸಿದಳು. ಹಾಗೆ ಎಚ್ಚರಿಸಿದಲ್ಲಿ ತನ್ನ ಮೇಲೆ ಕೋಪಗೊಳ್ಳುವನು ಎಂದು ಎನ್ನಿಸಿದರೂ ಅವಳು ಅವನ ಸಂಧ್ಯಾಕಾರ್ಯಕ್ಕೆ ವಿಳಂಬವಾಗಕೂಡದು ಎಂಬ ಭಾವದಿಂದ ಎಬ್ಬಿಸಿದಳು. ಎಚ್ಚೆತ್ತ ಅವನು ಕೋಪದಿಂದ ತುಟಿ ಅದರುತ್ತಾ ''ನೀನು ನನ್ನನ್ನು ಅವಮಾನಿಸಿದೆ. ನನಗೆ ಅಪ್ರಿಯವನ್ನು ಉಂಟುಮಾಡಿದೆ. ನಾನು ಸಂಧ್ಯಾವಂದನೆ ಮಾಡದೆ ಸೂರ್ಯನೆಂತು ಮುಳುಗಿಯಾನು? ಇದನ್ನು ಅರಿಯದ ನೀನು ತಪ್ಪು ಮಾಡಿದೆ. ನಾನಿನ್ನು ನಿನ್ನ ಜೊತೆ ಇರಲಾರೆ'' ಹೀಗೆ ಹೇಳಿದವನೇ ಅವಳನ್ನು ವಾಸುಕಿಗೆ ಒಪ್ಪಿಸಿದ ; ಅವಳು ಎಷ್ಟು ಕೇಳಿಕೊಂಡರೂ ಅವನ ಮನಸ್ಸು ಕರಗಲಿಲ್ಲ. ಅವನು ತಿಳಿಸಿದ : ''ನಾನು ಮೊದಲೇ ಮಾಡಿಕೊಂಡಿದ್ದ ಕರಾರು. ಅದರ ಉಲ್ಲಂಘನೆಯಾದ ಮೇಲೆ ನಾನು ನಿನ್ನ ಜೊತೆ ಇರುವುದು ಅಸಾಧ್ಯ''. ಅವಳು ಪುನಃ ಕೇಳಿಕೊಂಡಳು : ''ನಾನು ಪತಿವ್ರತೆ, ಧರ್ಮಪರಾಯಣಳು. ನನಗಿನ್ನು ನಿನ್ನಿಂದ ಸಂತತಿಯೂ ಆಗಿಲ್ಲ. ನನ್ನನ್ನು ತೊರೆಯುವುದು ತರವಲ್ಲ''. ಕೂಡಲೇ ಅವನು ಹೇಳಿದ. ''ನೀನು ಈಗ ಗರ್ಭಿಣಿ-

ಯಾಗಿರುವೆ. ಪರಮ ಧರ್ಮಿಷ್ಠನೂ, ಋಷಿಯೂ ಆಗಿರುವ ಮಗನು ನಿನಗೆ ಜನಿಸುವನು'' ಎಂದು ತಿಳಿಸಿ, ಅಲ್ಲಿಂದ ತೆರಳಿದ. ಮುಂದೆ ಹಾಗೆ ಜನಿಸಿದ ಮಹಾತ್ಮ ''ಆಸ್ತೀಕ'' ಎಂದು ಪ್ರಸಿದ್ಧನಾದ. ಜನಮೇಜಯರಾಜ ಕೈಗೊಂಡಿದ್ದ ಸರ್ಪಯಾಗವನ್ನು ನಿಲ್ಲಿಸುವ ಮೂಲಕ ಸರ್ಪಕುಲವನ್ನು ಸಂರಕ್ಷಿಸಿದ. ಇತ್ತ ಪಿತೃಗಳ ಆದೇಶವನ್ನು ಪಾಲಿಸಿ, ಪಿತೃಕುಲವನ್ನು ಉದ್ಧರಿಸಿದ ಜರತ್ಕಾರು ಉತ್ತಮಗತಿಯನ್ನು ಪಡೆದುಕೊಂಡ.

ಈ ಉಪಾಖ್ಯಾನದಲ್ಲಿ ಎಂತಹ ಮಹಾತಪಸ್ವಿಯಾದರೂ ಸಹ ವಿಧ್ಯುಕ್ತರೀತಿಯಲ್ಲಿ ವಿವಾಹವಾಗಿ ಸಂತತಿಪಡೆಯದೇ ಇದ್ದಲ್ಲಿ ಪಿತೃಗಳ ಅಧೋಗತಿಗೆ ಕಾರಣವಾಗುವ ಪಾಪಕ್ಕೆ ಪಾತ್ರನಾಗುವನು ಎಂಬ ಸಂದೇಶ ನಿರೂಪಿತವಾಗಿದೆ. ಎಂದರೆ ಪುರುಷನಿಗೆ ವಿವಾಹವು ಕಡ್ಡಾಯ, ವಿಶೇಷ ಪ್ರಸಂಗವಿಲ್ಲದ ಹೊರತು ಅವನು ಗೃಹಸ್ಥನಾಗುವುದು ಅನಿವಾರ್ಯ. ಇಲ್ಲವಾದಲ್ಲಿ ಸದ್ಗತಿಯಾಗದು ಎಂಬ ಪ್ರಮೇಯ ಸ್ಫುಟಪಡುವುದು.

ಕೆಲವರು ಭ್ರಾಮಕವಾದ ಕಾರಣಗಳನ್ನು ಮುಂದಿಟ್ಟು ಗೃಹಸ್ಥಾಶ್ರಮಕ್ಕೆ ಕಾಲಿಡಲು ನಿರಾಕರಿಸುವುದುಂಟು; ಸಾಧನೆಗೆ ಅಡ್ಡಿಯಾಗುವುದು ಎಂಬ ತಪ್ಪು ಕಲ್ಪನೆ ಮತ್ತೆ ಕೆಲವರಿಗೆ; ಇವರೆಲ್ಲರಿಗೆ ಉತ್ತರವೆಂಬಂತೆ ಶ್ರೀಮದ್ಭಾಗವತಪುರಾಣದಲ್ಲಿ ಬಂದಿರುವ ಪ್ರಿಯವ್ರತರಾಜನ ಕಥೆಯನ್ನು ಉಲ್ಲೇಖಿಸಬಹುದು. ವಿಶೇಷ ವಿರಕ್ತಿಯ ಕಾರಣದಿಂದ ಪ್ರಿಯವ್ರತನು ವಿವಾಹವಾಗಲು ನಿರಾಕರಿಸಿದಾಗ ನಾರದ ಹಾಗೂ ಸ್ವಾಯಂಭುವಮನುಗಳ ಪ್ರಾರ್ಥನೆಯಂತೆ, ಬ್ರಹ್ಮದೇವರು ಆಗಮಿಸಿ, ಗೃಹಸ್ಥಾಶ್ರಮದ ಹಿರಿಮೆಯನ್ನು ನಿರೂಪಿಸಿ, ವಿವಾಹವು ಅಗತ್ಯವೆಂದು ನಿರೂಪಿಸಿದಾಗ, ಪ್ರಿಯವ್ರತ ಆದಕ್ಕೆ ಸಮ್ಮತಿಸಿ, ಲೋಕೋತ್ತರವಾದ ಸಾಧನೆ ಮಾಡಿದ ಅಲ್ಲಿಯ ವಿವರ ಅತ್ಯಂತ ಗಮನಾರ್ಹವಾದುದು. [೧]ಜಿತೇಂದ್ರಿಯನೂ, ಅಧ್ಯಾತ್ಮದಲ್ಲಿ ಆಸಕ್ತನೂ ಆದ ವಿವೇಕಿಗೆ ಗೃಹಸ್ಥಾಶ್ರಮ ಯಾವ ರೀತಿಯಲ್ಲೂ ಬಂಧಕವೆನ್ನಿಸದು ಎಂಬುದು ಅಲ್ಲಿಯ ಸಾರ.

## ವೃದ್ಧಕನ್ಯಾಚರಿತ್ರ

ಇನ್ನು ಪುರುಷರಂತೆ ಸ್ತ್ರೀಯರಿಗೂ ಸಹ ವಿವಾಹವು ಕಡ್ಡಾಯ ಎಂಬ ಮತ್ತೊಂದು ವಿಶೇಷಾಂಶವೂ ಸಹ ಶಾಸ್ತ್ರಗಳಲ್ಲಿ ನಿರೂಪಿತವಾಗಿದೆ. ಮಹಾಭಾರತದಲ್ಲಿ ಬರುವ ಮತ್ತೊಂದು ಪ್ರಸಂಗ ಹೀಗಿದೆ :

ಕುಣಿಗಾರ್ಗ್ಯ ಎಂಬ ಒಬ್ಬ ಮುನಿ; ಮಹಾತಪಸ್ವಿ. ಆತನ ವಿಪುಲ ತಪಸ್ಸಿಗೆ ಫಲವೆಂಬಂತೆ ಒಬ್ಬ ಪುತ್ರಿ ಜನಿಸಿದಳು. ಹಾಗೆ ಜನಿಸಿದ ಆ ತೇಜಸ್ವಿನಿಯಾದ ಪುತ್ರಿಯನ್ನು ಕಂಡು, ಸುಪ್ರೀತನಾಗಿ, ಆ ಮುನಿ ಸ್ವರ್ಗಕ್ಕೆ ತೆರಳಿದ. ಕಮಲನೇತ್ರೆಯಾದಂತಹ ಅವಳು

---

೧. ಜಿತೇಂದ್ರಿಯಸ್ಯಾತ್ಮರತೇರ್ಬುಧಸ್ಯ ಗೃಹಾಶ್ರಮಃ ಕಿಂನು ಕರೋತ್ಯವದ್ಯಮ್ । -ಭಾಗವತ(೫/೧/೧೭)

ಸಹ ಆಶ್ರಮದಲ್ಲಿ ನೆಲೆಸಿ, ಉಗ್ರವಾದ ತಪಸ್ಸನ್ನು ಕೈಗೊಂಡು, ಪಿತೃಗಳನ್ನು ದೇವತೆಗಳನ್ನು ಆರಾಧಿಸಿದಳು. ಹಿಂದೊಮ್ಮೆ ತನ್ನ ತಂದೆಯು ವಿವಾಹಮಾಡಲು ಬಯಸಿದ್ದರೂ ಅವಳು ಅದಕ್ಕೆ ಒಪ್ಪದೆ ಕನ್ಯೆಯಾಗಿಯೇ ಉಳಿದಿದ್ದಳು. ಅದಕ್ಕೆ ಅವಳಿಗೆ ತನಗೆ ಅನುರೂಪನಾದ ಪತಿ ದೊರೆಯಲಿಲ್ಲ ಎಂಬುದೇ ಕಾರಣವಾಗಿತ್ತು. ಹೀಗೆ ತಪಸ್ಸು ಮಾಡುತ್ತಲೇ ಕೊನೆಗೆ ಅವಳು ವೃದ್ಧಾಪ್ಯವನ್ನು ತಲುಪಿದಳು. ಕೊನೆಗೆ ಅವಳು ಮುಪ್ಪಿನ ಕಾರಣದಿಂದ ಒಂದು ಹೆಜ್ಜೆಯನ್ನು ಸಹ ಮುಂದೆ ಇಡದಂತಹ ಹಂತವನ್ನು ತಲುಪಿದಳು; ಆಗ ಶರೀರವನ್ನು ತೊರೆದು ಪರಲೋಕಕ್ಕೆ ತೆರಳಲು ಸಿದ್ಧಳಾದಳು. ಅಲ್ಲಿಗೆ ನಾರದರು ಆಗಮಿಸಿ ತಿಳಿಸಿದರು. "ನೀನು ವಿವಾಹವಾಗದವಳು ; ಆ ಸಂಸ್ಕಾರ ನಿನಗೆ ಆಗದಿರುವುದರಿಂದ ನಿನಗೆ ಸದ್ಗತಿ ಲಭಿಸದು[೧]. ನೀನು ಎಷ್ಟೇ ತಪಸ್ಸು ಮಾಡಿದ್ದರೂ ವಿವಾಹವಾಗದ ಕೊರತೆ ನಿನ್ನನ್ನು ಬಿಡದು". ನಾರದರ ಮಾತನ್ನು ಕೇಳಿ ಅವಳು ವಿವಾಹವಾಗಲು ನಿಶ್ಚಯಿಸಿದಳು. ಋಷಿಗಳ ಗುಂಪುಗಳಿದ್ದಲ್ಲಿಗೆ ತೆರಳಿ, ತನ್ನನ್ನು ಯಾರಾದರೂ ವಿವಾಹವಾಗಬೇಕೆಂದೂ ಹಾಗೆ ಮಾಡಿದವರಿಗೆ ತನ್ನ ತಪಸ್ಸಿನ ಅರ್ಧಭಾಗವನ್ನು ಧಾರೆ ಎರೆಯುವುದಾಗಿಯೂ ತಿಳಿಸಿದಳು. ಆಗ ಗಾಲವ ವಂಶದ ಒಬ್ಬ ಮುನಿ 'ಶೃಂಗವಾನ್' ಎಂಬುವನು ಅವಳ ಕೈಹಿಡಿಯಲು ಮುಂದೆ ಬಂದ. ಆಗ ಕರಾರೊಂದನ್ನು ಅವನು ಹಾಕಿದ: ತಾನು ಅವಳೊಂದಿಗೆ ಕಳೆಯುವುದು ಒಂದು ರಾತ್ರಿ ಮಾತ್ರ ಎಂಬುದು ಅವರ ನಿಬಂಧನೆ-ಯಾಗಿತ್ತು. ಅದಕ್ಕೆ ಒಪ್ಪಿದ ಅವಳು ಅವರನ್ನು ವಿಧ್ಯುಕ್ತವಾಗಿ ವಿವಾಹವಾದಳು[೨]. ತನ್ನ ತಪಃಶಕ್ತಿಯಿಂದ ಅವಳು ಒಂದು ದಿನದ ಮಟ್ಟಿಗೆ ತರುಣಿಯೂ, ಅಪೂರ್ವಸುಂದರಿಯೂ ಆಗಿ, ಬದಲಾದಳು. ಅವಳು ತನ್ನ ಉದ್ದೇಶ ಪೂರೈಸಿದ್ದರಿಂದ ತಾನಿನ್ನು ದೇಹತೊರೆದು ಪರಲೋಕಕ್ಕೆ ಹೊರಡುವುದಾಗಿ ತಿಳಿಸಿದಳು. ಹೊರಡುವ ಮುನ್ನ ತಾನು ಒಂದು ದಿನ ಹಾಗೆ ನೆಲೆಸಿದ್ದ ಆ ತೀರ್ಥವು ಅತ್ಯಂತ ಪವಿತ್ರವಾಗಲಿ ಒಟ್ಟು ೬೪ ವರ್ಷಗಳ ಕಾಲ ವಿಶೇಷವಾದ ಬ್ರಹ್ಮಚರ್ಯವ್ರತವನ್ನು ಆಚರಿಸಿದ ಪುಣ್ಯ ಇಲ್ಲಿ (ವೃದ್ಧಕನ್ಯಾತೀರ್ಥ) ಸ್ನಾನಮಾಡುವವರಿಗೆ ಲಭಿಸಲಿ ಎಂದು ವರವಿತ್ತು ಪರಲೋಕಕ್ಕೆ ತೆರಳಿದಳು. ಅವಳು ನೀಡಿದ ಅರ್ಧತಪಸ್ಸಿನ ಫಲದಿಂದ ಆ ಗಾಲವಿ ಎಂಬ ಮುನಿಯು ಸದ್ಗತಿಯನ್ನು ಪಡೆದನು. ಇದರಿಂದ ಒಬ್ಬ ಸ್ತ್ರೀಯು ಎಷ್ಟೇ ವ್ರತ, ಉಪವಾಸ, ತಪಸ್ಸು ಮೊದಲಾದವು-ಗಳನ್ನು ಮಾಡಿದರೂ ಸಹ ವಿಧ್ಯುಕ್ತವಾಗಿ ವಿವಾಹವಾಗದಿದ್ದಲ್ಲಿ ಸಾಧನೆಯು ಪೂರ್ಣ-ವೆನ್ನಿಸದಂತಾಗಿ, ಸದ್ಗತಿಯು ಲಭಿಸದಾಗುವುದು ಎಂಬ ಪ್ರಮೇಯ ನಿರೂಪಿತವಾಗುವುದು.

---

೧. ಅಸಂಸ್ಕೃತಾಯಾಃ ಕನ್ಯಾಯಾಃ ಕುತೋ ಲೋಕಾಸ್ತವಾನಘೇ ।
ಏವಂ ತು ಶ್ರುತಮಸ್ಮಾಭಿರ್ದೇವಲೋಕೇ ಮಹಾವ್ರತೇ ॥ -ಮ. ಭಾ. ಶಲ್ಯಪರ್ವ(೫೨/೧೨)

೨. ಯಥಾದೃಷ್ಟೇನ ವಿಧಿನಾ ಹುತ್ವಾ ಚಾಗ್ನಿಂ ವಿಧಾನತಃ ।
ಚಕ್ರೇ ಚ ಪಾಣಿಗ್ರಹಣಂ ತಸ್ಯೋದ್ವಾಹಂ ಚ ಗಾಲವಿಃ ॥ -ಮ. ಭಾ. ಶಲ್ಯಪರ್ವ(೫೨/೧೬)

ಹೀಗೆ ಸ್ತ್ರೀಪುರುಷರಿಬ್ಬರಿಗೂ ಜೀವನದಲ್ಲಿ ವಿವಾಹ ಕಡ್ಡಾಯ ಎಂಬ ವಿಶೇಷವಾದ ವಿಧಿ ನಿರೂಪಿತವಾಗಿದೆ. ಪುರುಷರಿಗೆ ವಿಶೇಷ ಸಂದರ್ಭದಲ್ಲಿ ಗಾರ್ಹಸ್ಥ್ಯದಿಂದ ವಿನಾಯಿತಿ ಉಂಟು. ಅಂತಹವರು ನೇರವಾಗಿ ಸಂನ್ಯಾಸಪಡೆದು ಸದ್ಗತಿಪಡೆಯುವ ಅವಕಾಶವಿದೆ. ಸನಕ, ಸನಂದನ, ಸನತ್ಕುಮಾರ, ಹಾಗೂ ಸನತ್ಸುಜಾತ ಎಂಬ ನಾಲ್ವರು ಬ್ರಹ್ಮಪುತ್ರರು ಇದಕ್ಕೆ ನಿದರ್ಶನ. ಒಂದರ್ಥದಲ್ಲಿ ಬಾಲಸಂನ್ಯಾಸದ ಪ್ರವರ್ತಕ-ಮುನಿಗಳೆಂದರೆ ಇವರೇ. ಆದರೆ ಸ್ತ್ರೀಯರಿಗೆ ಮಾತ್ರ ಈ ವಿನಾಯಿತಿಯನ್ನು ಶಾಸ್ತ್ರಗಳು ನೀಡಿಲ್ಲ. ಆದಕ್ಕೆ ಮಹಾಭಾರತದ ಬಕವಧ ಪರ್ವದಲ್ಲಿ ಬರುವ ವಿಪ್ರಪತ್ನಿಯ ಮಾತುಗಳಲ್ಲಿ ಕಾರಣ ನಿರೂಪಿತವಾಗಿದೆ ಎಂದು ತಿಳಿಯಬಹುದು. ಒಂಟಿ ಹೆಣ್ಣನ್ನು ಸಮಾಜ ಎಂದೂ ಸಹ ಸುರಕ್ಷಿತವಾಗಿ ಬದುಕಲು ಬಿಡದು ಎಂಬ ವಿಶೇಷವಾದ ಅಂಶ ಅಲ್ಲಿ ತುಂಬಾ ವಿವರವಾಗಿ ನಿರೂಪಿತವಾಗಿದೆ[೧].

ಹಿಂದಿನ ಯುಗಗಳಲ್ಲಿ ನೈಷ್ಠಿಕ ಬ್ರಹ್ಮಚರ್ಯ ಎಂಬ ಪರಿಕಲ್ಪನೆಯನ್ನು ಶಾಸ್ತ್ರಗಳು ನೀಡಿವೆ. ಅದರಂತೆ ಒಬ್ಬ ಪುರುಷನು ಜೀವನವಿಡೀ ಬ್ರಹ್ಮಚರ್ಯದಿಂದಲೇ ಇದ್ದು ಸದ್ಗತಿ ಪಡೆಯಲು ಸಾಧ್ಯ. ಅಂತಹವರಿಗೆ ಸಂನ್ಯಾಸದ ಅಗತ್ಯವೂ ಇರದು. ಆದರೆ ಇದು ಕಲಿಯುಗದಲ್ಲಿ ನಿಷಿದ್ಧ ಎಂಬುದಾಗಿ ಸ್ಮೃತಿಗಳು ಸಾರಿವೆ. ಇದರಿಂದಾಗಿ ಕಲಿಯುಗದ ಮಟ್ಟಿಗೆ ವಿವಾಹವು ಕಡ್ಡಾಯ ಎಂಬುದಾಗಿ ಸ್ಫುಟಪಡುವುದು. ಬಾಲಸಂನ್ಯಾಸದ ಮಟ್ಟಿಗೆ ಈ ವಿನಾಯಿತಿ ಇನ್ನೂ ಉಳಿದುಕೊಂಡು ಬಂದಿದೆ ಎಂಬುದನ್ನು ಗಮನಿಸಬೇಕು; ಅಲ್ಲೊಂದು ಇಲ್ಲೊಂದು ನೈಷ್ಠಿಕ ಬ್ರಹ್ಮಚರ್ಯದ ನಿದರ್ಶನಗಳು ಕಂಡುಬಂದರೂ ಅದನ್ನು ಕೇವಲ ಅಪವಾದವೆಂದಷ್ಟೇ ಭಾವಿಸಬೇಕು. ಇಂದಿಗೂ ಸಹ ಉದ್ಯೋಗ-ನಿರತರಾದ ಅನೇಕ ಅವಿವಾಹಿತ ಮಹಿಳೆಯರು ಕಾಮುಕರ ನೋಟದಿಂದ ಪಾರಾಗಲು ವಿವಾಹಿತರಂತೆ ಮಂಗಲಸೂತ್ರಾದಿಗಳನ್ನು ಧರಿಸಿ, ರಕ್ಷಣೆಗೆ ಪ್ರಯತ್ನಿಸುವುದು ಕಂಡಿದೆ. ಎಂದರೆ ಆಧ್ಯಾತ್ಮಿಕ ಸಾಧನೆಗೆ ಮಾತ್ರವಲ್ಲದೆ ಸುರಕ್ಷಿತವಾದ ಲೌಕಿಕಜೀವನಕ್ಕೂ ಸಹ ಸ್ತ್ರೀಗೆ ವಿವಾಹ ಅತ್ಯಗತ್ಯ ಎಂದಾಗುವುದು.

---

೧. ಉತ್ಸೃಷ್ಟಮಾಮಿಷಂ ಭೂಮೌ ಪ್ರಾರ್ಥಯಂತಿ ಯಥಾ ಖಗಾಃ ।
ಪ್ರಾರ್ಥಯಂತಿ ಜನಾಃ ಸರ್ವೇ ಪತಿಹೀನಾಂ ತಥಾ ಸ್ತ್ರಿಯಾಮ್ ॥...
ಸ್ತ್ರೀಜನ್ಮ ಗರ್ಹಿತಂ ನಾಥ ಲೋಕೇ ದುಷ್ಟಜನಾಕುಲೇ ।
ಮಾತಾಪಿತ್ರೋರ್ವಶೇ ಕನ್ಯಾ ಪ್ರೌಢಾ ಭರ್ತೃವಶೇ ತಥಾ ॥
ಅಭಾವೇ ಚಾನಯೋಃ ಪುತ್ರೇ ಸ್ವತಂತ್ರಾ ಸ್ತ್ರೀ ವಿಗರ್ಹಿತಾ ॥
ಅನಾಥತ್ವಂ ಸ್ತ್ರಿಯೋ ದ್ವಾರಂ ದುಷ್ಟಾನಾಂ ವಿವೃತಂ ಹಿ ತತ್ ।
ವಸ್ತ್ರಖಂಡಂ ಘೃತಾಕ್ತಂ ಹಿ ಯಥಾ ಸಂಕೃಷ್ಯತೇ ಶ್ವಭಿಃ ॥
-ಮಹಾಭಾರತ, ಆದಿಪರ್ವ(೧೭೨/೧೨,೧೪-೧೬)

# ವಿವಾಹಮಾಡುವ ಮುಖ್ಯ ಅರ್ಹತೆ

ವಿವಾಹವು ತಂದೆತಾಯಿಗಳ ಅಗತ್ಯ ಕರ್ತವ್ಯಗಳಲ್ಲೊಂದು. ಅದನ್ನು ಸಕಾಲಕ್ಕೆ ಪೂರೈಸದ ತಂದೆತಾಯಿಗಳು ದಂಡನೆಗೆ ಅರ್ಹರು ಎಂಬ ಮಾತು ಸ್ಮೃತಿಗಳಲ್ಲಿದೆ : ಕಾಲೇಽದಾತಾ ಪಿತಾ ವಾಚ್ಯಃ -(ಮನುಸ್ಮೃತಿ); ಎಂದರೆ ವಿವಾಹವು ಒಂದು ಐಚ್ಛಿಕ ಸಂಸ್ಕಾರವಾಗಿರದೆ ಕಡ್ಡಾಯವಾದ ಸಂಸ್ಕಾರವಾಗಿದೆ. ಅದರ ವ್ಯವಸ್ಥೆಯ ಪೂರ್ಣ ಜವಾಬ್ದಾರಿ ತಂದೆತಾಯಿಯದು. ಸಕಾಲದಲ್ಲಿ ಕನ್ಯಾದಾನಮಾಡುವುದರಿಂದ ವಿಶೇಷ ಫಲ ಎಂಬ ಮಾತು ಮಹಾಭಾರತದಲ್ಲಿದೆ[1]. ಆ ಬಗ್ಗೆ ವಹಿಸದ ಎಚ್ಚರ ಇಹಪರಗಳ ಅನರ್ಥಕ್ಕೆ ಸಾಧನ ಎಂದರ್ಥ. ಹೆಣ್ಣು ಮಗು ಜನಿಸಿದ ಕೂಡಲೇ ಅದನ್ನು ಯೋಗ್ಯ ವರನಿಗೆ ನೀಡುವ ಸಂಕಲ್ಪ ಮಾಡಿ, ಮುಂದೆ ಯೋಗ್ಯಕಾಲದಲ್ಲಿ ಅದನ್ನು ನಡೆಸುವ ಹೊಣೆ ತಂದೆಯದು.

# ಕನ್ಯಾಸಂತತಿಯು ಪುರುಷಸಂತತಿಯಷ್ಟೇ ಮಹತ್ತ್ವಪೂರ್ಣ

ಕೆಲವರು ಕನ್ಯಾಸಂತತಿಯ ಬಗ್ಗೆ ಅವಹೇಳನಕಾರಿಯಾದ ಮನೋಭಾವವನ್ನು ಹೊಂದಿರುವುದುಂಟು. ಹೆಣ್ಣು ಭ್ರೂಣಹತ್ಯೆಯ ಪ್ರಸಂಗಗಳು ಇಂದೂ ಸಹ ಅಪಾರ ಸಂಖ್ಯೆಯಲ್ಲಿ ವರದಿಯಾಗುತ್ತಿರುವುದು ಕಂಡಿದೆ. ಆದರೆ ಇದು ಯಾವ ಸಂಸ್ಕೃತಿಗೂ ಶೋಭೆ ತರುವ ಸಂಗತಿಯಲ್ಲ. ಸುಸಂಸ್ಕೃತರೆನ್ನಿಸಿದ ಜನರೂ ಸಹ ಇಂತಹ ಮನೋಭಾವವನ್ನು ಹೊಂದಿರುವುದು ಅವರ ವಿದ್ಯಾವಂತಿಕೆಯನ್ನೇ ಪ್ರಶ್ನಿಸುವಂತೆ ಮಾಡುವುದು ಸಹಜ. ಜನಾಂಗಗಳು ಮುಂದುವರೆಯಲು ಗಂಡಿನಂತೆ ಹೆಣ್ಣೂ ಸಹ ಅತ್ಯಗತ್ಯ ಎಂಬುದು ಸೃಷ್ಟಿಯ ನಿಯಮ. ಆದರಿಂದಾಗಿ ಸ್ತ್ರೀಸಂಕುಲಕ್ಕೆ ಪುರುಷ-ಸಂಕುಲದಷ್ಟೇ ಮಹತ್ವವನ್ನು ಶಾಸ್ತ್ರಗಳು ಸಾರಿವೆ. ಲೌಕಿಕ ಪರಿಕಲ್ಪನೆಯಲ್ಲೂ ಈ ಮಾತು ಯಥಾರ್ಥವಾದದ್ದು. ತನ್ನ ತಾಯಿ ಸ್ತ್ರೀ, ತನ್ನ ಪತ್ನಿ ಸ್ತ್ರೀ, ಹೀಗಿದ್ದು ಸ್ತ್ರೀಸಂತತಿಯನ್ನು ದ್ವೇಷಿಸುವುದು ಹೇಗೆ ತಾನೇ ವಿವೇಕವೆನ್ನಿಸೀತು? ಶಾಸ್ತ್ರಗಳಂತೂ ಸ್ತ್ರೀಯರ ಮಹತ್ವವನ್ನು ಪುರುಷರಿಗಿಂತ ಮಿಗಿಲಾಗಿಯೇ ವರ್ಣಿಸಿವೆ ಎಂಬುದನ್ನು ಈ ಪ್ರಸಂಗದಲ್ಲಿ ಗಮನಿಸ-ಬೇಕು. ಪುರಾಣವಚನದಂತೆ ೧೦೦ ಗಂಡು ಮಕ್ಕಳಿಗಿಂತ ಒಂದು ಹೆಣ್ಣು ಮಗು ಜನಿಸುವುದು ಹೆಚ್ಚು ಮಿಗಿಲು : ನೂನಂ ಪುತ್ರಶತಾತ್ ಪುತ್ರೀ ಯದಿ ಪಾತ್ರೇ ಪ್ರದೀ-ಯತೇ[2]; ಆಚಾರ್ಯಮಧ್ವರಂತೂ ಸ್ತ್ರೀಯನ್ನು ತಾನು ಜನಿಸುವ ಕುಲ ಹಾಗೂ ತಾನು

---

೧. ಜಾತಮಾತ್ರಾ ತು ದಾತವ್ಯಾ ಕನ್ಯಕಾ ಸದೃಶೇ ವರೇ।
ಕಾಲೇ ದತ್ತಾಸು ಕನ್ಯಾಸು ಪಿತಾ ಧರ್ಮೇಣ ಯುಜ್ಯತೇ॥ -ಅನುಶಾಸನಪರ್ವ(೩೩/೧)

೨. ಒಬ್ಬ ಕನ್ಯೆಯನ್ನು ಸರಿಯಾಗಿ ಪೋಷಿಸಿ, ಬೆಳೆಸುವುದು ೧೦ ಗಂಡುಮಕ್ಕಳನ್ನು ಪೋಷಿಸಿ, ಬೆಳೆಸುವುದಕ್ಕೆ ಸಮಾನ ಎಂಬುದು ನಾರದರ ವಚನ :

ಸೇರುವ ಕುಲ ಹೀಗೆ ಎರಡು ಕುಲವನ್ನು ಸಹ ಉದ್ಧರಿಸುವವಳು ಎಂಬುದಾಗಿ ಪ್ರಶಂಸಿಸಿರುವರು: ಕನ್ಯೋದಿತಾ ಬತ ಕುಲದ್ವಯತಾರಿಣೀತಿ(ಮ.ಭಾ.ತಾ.ನಿ.- ೧೯/೭೬).

ಆದರಂತೆ ಮಾತೃಭಾಷೆ ಎಂಬ ಪದದಲ್ಲಿಯೂ ಮಗುವಿನ ಪ್ರಗತಿಯಲ್ಲಿ ತಾಯಿಯ ಪಾತ್ರದ ಹಿರಿಮೆಯನ್ನು ಗುರುತಿಸಬಹುದು. ಎಂದರೆ ಮಗುವಿಗೆ ಮೊದಲ ಮಾತು ಸಾಧ್ಯವಾಗುವುದು ತಾಯಿಯಿಂದಾಗಿ, ಆದರಿಂದಾಗಿಯೇ ಮಾತೃಭಾಷೆ ಎಂಬುದು ಸಾರ್ಥಕವೆನ್ನಿಸುವ ಪದ. ಮಕ್ಕಳ ಭಾಷೆ ಮಾತ್ರವಲ್ಲದೆ ಆರಂಭದ ಸಂಸ್ಕೃತಿಯೂ ಸಹ ತಾಯಿಯಿಂದಲೇ ರೂಪುಗೊಳ್ಳುವುದು. ಅದೇಕೆ? ತಂದೆಯನ್ನು ಮಗುವು ಖಚಿತವಾಗಿ ತಿಳಿಯಲು ಸಾಧ್ಯವಾಗುವುದು ಸಹ ತಾಯಿಯ ಮಾತಿನಿಂದಲೇ ಎಂಬುದು ಕಟುಸತ್ಯ[೧]. ತಂದೆ ತಿಳಿಸಲಾಗದ ಅನೇಕ ವಿವರಗಳನ್ನು ಹೆಣ್ಣು ತಿಳಿಯಲಾಗುವುದು ತಾಯಿಯಿಂದಲೇ. ಈ ಮಾತು ಹೆಣ್ಣುಮಕ್ಕಳ ವಿಚಾರದಲ್ಲಿ ಇನ್ನೂ ಹೆಚ್ಚು ಸತ್ಯ ಎಂಬುದನ್ನು ಅರ್ಥಮಾಡಿಕೊಳ್ಳಬೇಕು. 'ತಾಯಿಯಂತೆ ಮಗಳು[೨]' ಎಂಬ ಮಾತಿನಲ್ಲಿ ಇದರ ಮಹತ್ವ ಬಿಂಬಿತವಾಗಿದೆ. ಸುಶಿಕ್ಷಿತಳಾದ ಹೆಣ್ಣಿನಿಂದ ಒಂದು ಮನೆ ಮಕ್ಕಳ ಪಾಲಿಗೆ ಪಾಠಶಾಲೆಯಂತಾಗುವುದು ಎಂಬ ಮಾತು ಪ್ರಚಾರದಲ್ಲಿರುವುದು ಅರ್ಥವತ್ತಾದುದೇ ಆಗಿದೆ. ಮನೆಯ ಪಾಕಶಾಲೆಯಂತೆ ಪಾಠಶಾಲೆಯ ಹೊಣೆಯೂ ಸಹ ಪತ್ನಿಯದೇ ಆಗಿದೆ ಎಂಬುದು ಈ ಎಲ್ಲ ವಿಚಾರಗಳ ಸಾರ.

ವೇದಕಾಲದಿಂದಲೂ ಸ್ತ್ರೀಯರಿಗೆ ವಿಶೇಷ ಮಹತ್ವ ನೀಡಲ್ಪಟ್ಟಿದೆ. ಋಷಿಮುನಿಗಳಂತೆ ಸ್ತ್ರೀಯರೂ ಸಹ ವೇದಾಧ್ಯಯನ ಮಾತ್ರವಲ್ಲದೆ ವೇದಮಂತ್ರಗಳ ದ್ರಷ್ಟಾರ ಋಷಿಗಳಾಗಿಯೂ ಸಹ ವೈದಿಕಸಂಸ್ಕೃತಿಯಲ್ಲಿ ಮಾನ್ಯರಾಗಿರುವರು : ಮೈತ್ರೇಯೀ, ಗಾರ್ಗಿ ಮೊದಲಾದವರು ಇದಕ್ಕೆ ಉತ್ತಮ ನಿದರ್ಶನ. ರಾಮಾಯಣದ ಸೀತಾದೇವಿ, ಮಹಾಭಾರತದ ದ್ರೌಪದೀದೇವಿ, ಇಡೀ ದುಷ್ಟಕುಲದ ವಿನಾಶಕ್ಕೆ ಕಾರಣರಾಗಿ ಲೋಕ-ಕಲ್ಯಾಣಕಾರಕರಾದ ಮಹಾಮಹಿಳೆಯರು. ಸಾವಿತ್ರೀ, ಸುಕನ್ಯೆ, ಮೊದಲಾದವರಂತೂ ತಮ್ಮ ಪಾತಿವ್ರತ್ಯದಿಂದ ಹೆಸರಾದವರು. ಮೃತಪತಿಯಾದ ಸತ್ಯವಾನನನ್ನು ಮರಳಿ ಬದುಕಿಸಿಕೊಂಡ ಸಾಧನೆ ಸಾವಿತ್ರಿಯದಾದರೆ, ವೃದ್ಧಪತಿಯಾದ ಚ್ಯವನಮುನಿಯನ್ನು ತರುಣನನ್ನಾಗಿಸಿಕೊಂಡ ಹಿರಿಮೆ ಸುಕನ್ಯೆಯದು. ಅಷ್ಟೇ ಏಕೆ ! ಪ್ರತಿಯೊಬ್ಬ ಮಹಾ-ಸಾಧಕನಾದ ಪುರುಷನ ಹಿನ್ನೆಲೆಯಲ್ಲೂ ಒಬ್ಬ ಸ್ತ್ರೀ(ತಾಯಿ, ಹೆಂಡತಿ ಅಥವಾ ಇಬ್ಬರ)ಯ

---

ದಶಪುತ್ರಸಮಾ ಕನ್ಯಾ ದಶಪುತ್ರಾನ್ ಪ್ರವರ್ಧಯನ್ ।
ಯತ್ಫಲಂ ಲಭತೇ ಮರ್ತ್ಯಸ್ತಲ್ಲಭ್ಯಂ ಕನ್ಯಯೈಕಯಾ ॥-ಸ್ಕಂದಪುರಾಣ,ಮಾಹೇಶ್ವರಖಂಡ (೨೪/೪೬)

೧. ಜಾನಾತಿ ಮಾತಾ ಪರಮಾತ್ಮಜಾತಂ ನೂನಂ ಪಿತಾಽಪಿ ಕ್ವಚಿದೇವ ಲೋಕೇ ।
ತಾಭ್ಯಾಮನಂಗೀಕೃತಕೃಷ್ಣಜನ್ಮ ಕೋ ವಾ ಪುಮಾನ್ ಸಾಧಯಿತುಂ ಸಮರ್ಥಃ ॥ -ರು.ವಿ.೧/೫೦

೨. ಯಥಾ ಶೀಲಾ ಭವೇನ್ಮಾತಾ ತಥಾ ಶೀಲಾ ಭವೇತ್ ಸುತಾ । -ಯಾಜ್ಞವಲ್ಕ್ಯಸ್ಮೃತಿ

ಪಾತ್ರ ಇದ್ದೇ ಇರುವುದು ಎಂಬ ಲೋಕರೂಢಿಯ ಮಾತು ಸ್ತ್ರೀಯ ಮಹತ್ವಕ್ಕೆ ಹಿಡಿದ ಕನ್ನಡಿಯಾಗಿದೆ. ಬಾಲವಿಧವೆಯಾಗಿದ್ದು ತನ್ನ ಐವರು ಮಕ್ಕಳನ್ನು ಬಗೆಬಗೆಯ ಪ್ರತಿಕೂಲ ಸಂದರ್ಭಗಳಲ್ಲೂ ಭಗವಂತನ ಮೇಲಿನ ನಂಬಿಕೆಯನ್ನು ಆಧರಿಸಿ, ಮುನ್ನಡೆಸುವ ಮಹಾಮಹಿಳೆಯಾಗಿ ಕುಂತಿಯ ಪಾತ್ರ ಸರ್ವಕಾಲಕ್ಕೂ ಉಜ್ವಲವೆನ್ನಿಸುವಂತಹುದಾಗಿದೆ. ಪುರಾಣಪುಣ್ಯಕಥೆಗಳಲ್ಲಿ ಸಹಸ್ರಾರು ಮಹಾಮಹಿಳೆಯರ ಕಥೆಗಳು ನಿರೂಪಿತವಾಗಿದೆ. ಅರುಂಧತೀದರ್ಶನವಿಲ್ಲದೆ ವಿವಾಹಪ್ರಕ್ರಿಯೆ ಪೂರ್ಣವೆನ್ನಿಸದು ಎಂಬ ವಿಧಿಯಲ್ಲೂ ಮಹಿಳೆಯ ಹಿರಿಮೆಯನ್ನು ಗುರುತಿಸಬಹುದು. ಇದನ್ನೆಲ್ಲಾ ಪರಿಶೀಲಿಸದೆ ಕೇವಲ ಪ್ರಜ್ಞಾವಾದದಿಂದ ಪ್ರಾಚೀನ ಸಂಸ್ಕೃತಿಯನ್ನು ದೂಷಿಸುವ ಅವಿವೇಕಿಗಳ ಬಗ್ಗೆ ಎಚ್ಚರವಹಿಸುವುದು ಅಗತ್ಯ.

## ಎಂಟು ವಿಧ ವಿವಾಹಗಳು

ಮನುಸ್ಮೃತಿಯಲ್ಲಿ ಬಂದಿರುವಂತೆ ವಿವಾಹಗಳು [೧]ಎಂಟುವಿಧ[೨] : ಬ್ರಾಹ್ಮ ದೈವ, ಆರ್ಷ, ಪ್ರಾಜಾಪತ್ಯ, ಆಸುರ, ಗಾಂಧರ್ವ, ರಾಕ್ಷಸ ಮತ್ತು ಪೈಶಾಚ.

ಆಚಾರವಿಚಾರಶೀಲನಾದ ವರನನ್ನು ಆಹ್ವಾನಿಸಿ, ಅವನಲ್ಲಿ ಶ್ರೀಹರಿಯನ್ನು ಚಿಂತಿಸಿ, ಕನ್ಯೆಯಲ್ಲಿ ಮಹಾಲಕ್ಷ್ಮಿಯನ್ನು ಚಿಂತಿಸಿ, ಶ್ರದ್ಧೆಯಿಂದ ತಾನಾಗಿ ಧಾರೆ ಎರೆಯುವ ವಿವಾಹವು ಬ್ರಾಹ್ಮವಿವಾಹ. ಯಜ್ಞದಲ್ಲಿ ಋತ್ವಿಕ್ ಕಾರ್ಯವನ್ನು ನಿರ್ವಹಿಸುವ ಯೋಗ್ಯವರನಿಗೆ ತಾನಾಗಿ ಕನ್ಯೆಯನ್ನು ನೀಡುವುದು ದೈವವಿವಾಹ. ಗೋಮಿಥುನವನ್ನು ವರನಿಗೆ ನೀಡಿ ಕನ್ಯಾದಾನ ಮಾಡುವುದು ಆರ್ಷವಿವಾಹ. ಕನ್ಯಾವರರಿಬ್ಬರು ಜೊತೆಯಾಗಿ, ಧರ್ಮಾನುಷ್ಠಾನ ಮಾಡಿಕೊಂಡಿರಲು ಆದೇಶಿಸಿ, ಗೌರವಿಸಿ ಕನ್ಯಾದಾನ ಮಾಡುವುದು ಪ್ರಾಜಾಪತ್ಯವಿವಾಹ. ಕನ್ಯೆಗೂ, ಕನ್ಯೆಯ ಕಡೆಯವರಿಗೂ ಅವರು ಬಯಸಿದ ಶುಲ್ಕವನ್ನಿತ್ತು ಮಾಡಿಕೊಳ್ಳುವ ವಿವಾಹ ಆಸುರವಿವಾಹ. ವಧೂವರರಿಬ್ಬರು ತಾವಾಗಿ ಮೆಚ್ಚಿ ಮಾಡಿಕೊಳ್ಳುವ ವಿವಾಹ ಗಾಂಧರ್ವವಿವಾಹ. ಹಿಂಸಿಸಿ, ಬೆದರಿಸಿ, ಗೋಳಿಡುವ ಕನ್ಯೆಯನ್ನು ಬಲಾತ್ಕಾರದಿಂದ ಅಪಹರಿಸಿ ತಂದು ಮಾಡಿಕೊಳ್ಳುವ ವಿವಾಹ

---

೧. ಬ್ರಾಹ್ಮೋ ದೈವಸ್ತಥೈವಾರ್ಷಃ ಪ್ರಾಜಾಪತ್ಯಸ್ತಥಾಽಽಸುರಃ ।
ಗಾಂಧರ್ವೋ ರಾಕ್ಷಸಶ್ಚೈವ ಪೈಶಾಚಶ್ಚಾಷ್ಟಮೋಽಧಮಃ ॥ (೩/೨೧)

೨. ಮತ್ತೊಂದು ರೀತಿಯಲ್ಲಿ ವಿವಾಹವು ಪ್ರಾಜಾಪತ್ಯ, ಬ್ರಾಹ್ಮ ದೈವ, ಆರ್ಷ, ಗಾಂಧರ್ವ, ಆಸುರ, ರಾಕ್ಷಸ, ಪಿಶಾಚಕ, ಪ್ರಾತಿಭ ಹಾಗೂ ಘಾತನ ಎಂಬುದಾಗಿ ೧೦ ವಿಧ ಎಂಬ ಮಾತು ಸ್ಕಂದಪುರಾಣದಲ್ಲಿದೆ :

ಪ್ರಾಜಾಪತ್ಯಸ್ತಥಾ ಬ್ರಾಹ್ಮೋ ದೈವಾರ್ಷೌ ಚಾತಿ ಶೋಭನಾಃ ।
ಗಾಂಧರ್ವಶ್ಚಾಸುರಶ್ಚೈವ ರಾಕ್ಷಸಶ್ಚ ಪಿಶಾಚಕಃ ।
ಪ್ರಾತಿಭೋ ಘಾತನಶ್ಚೇತಿ ವಿವಾಹಾಃ ಕಥಿತಾಃ ದಶ ॥ (೬/೨೪೧/೩೫)

ರಾಕ್ಷಸವಿವಾಹ. ಮೈಮರೆತ, ಪ್ರಜ್ಞೆ ಇರದ ಕನ್ಯೆಯನ್ನು ಬಲಾತ್ಕರಿಸಿ ಆಗುವ ವಿವಾಹ ಪೈಶಾಚ ವಿವಾಹ. ಇವುಗಳಲ್ಲಿ ಪೈಶಾಚವಿವಾಹವು ಅತ್ಯಂತ ನಿಕೃಷ್ಟವಾದ ವಿವಾಹ.

ಸಾಮಾನ್ಯವಾಗಿ ರೂಢಿಯಲ್ಲಿ ಬಂದಿರುವುದು ಬ್ರಾಹ್ಮವಿವಾಹವೇ. ಇದು ಬ್ರಾಹ್ಮಣವರ್ಗದಲ್ಲಿ ಮಾತ್ರ ನಡೆಯುವ ವಿವಾಹವೆಂದೇನೂ ತಿಳಿಯಬೇಕಿಲ್ಲ. ಇದಕ್ಕೆ ಬ್ರಾಹ್ಮವಿಧಿಯ ವಿವಾಹ ಎಂದು ಅರ್ಥವೇ ಹೊರತು ಬ್ರಾಹ್ಮಣರದೇ ಮಾತ್ರ ವಿವಾಹ ಎಂದು ಅರ್ಥವಲ್ಲ. ಇತರ ವಿವಾಹಪದ್ಧತಿಗಳಲ್ಲಿ ಗಾಂಧರ್ವವಿವಾಹ ಕ್ಷತ್ರಿಯರಿಗೆ ವಿಹಿತ. ಇತರ ವಿವಾಹ ಪದ್ಧತಿಗಳು ಇತ್ತೀಚಿನ ದಿನಗಳಲ್ಲಿ ರೂಢಿಯಲ್ಲಿಲ್ಲ. ಅಲ್ಲೊಂದು ಇಲ್ಲೊಂದು ಕನ್ಯಾಶುಲ್ಕ ನೀಡಿ ನಡೆಯುವ [೧]ಆಸುರವಿವಾಹ ಕಂಡುಬರುವುದುಂಟು. ಬಲಾತ್ಕಾರದಿಂದ ಆಗುವ ವಿವಾಹಗಳು ಕಂಡುಬಂದರೂ ಅವುಗಳು ವಿವಾಹದ ಮಾನ್ಯತೆಯನ್ನು ಪಡೆದಿಲ್ಲ. ಪೈಶಾಚವಿವಾಹವನ್ನು ಈ ಕಾಲದಲ್ಲಿ ಕಾನೂನು ಸಹ ಒಪ್ಪುವುದಿಲ್ಲ.

ಸಹಜವಾಗಿಯೇ ಈ ಎಂಟು ವಿವಾಹಗಳಲ್ಲಿ ಬ್ರಾಹ್ಮವಿವಾಹ ಅತ್ಯಂತ ಶ್ರೇಷ್ಠ- ಮಟ್ಟದ ವಿವಾಹಪದ್ಧತಿ. ಇದರಲ್ಲಿ ಉಭಯಪಂಗಡದ ಗುರುಹಿರಿಯರ ಸಮ್ಮತಿ ಇರುವುದು ವಿಶೇಷ. ಇಹಪರಗಳಿಗೆ ಸಾಧನವಾಗುವ ಅತ್ಯಂತ ಸಾತ್ವಿಕಪದ್ಧತಿಯ ಈ ವಿವಾಹಕ್ಕೆ ಎಲ್ಲಿಲ್ಲದ ಮನ್ನಣೆ ಉಂಟು. ಆದರೆ ಇತ್ತೀಚಿನ ದಿನಗಳಲ್ಲಿ ವರಕನ್ಯೆಯರು ಪರಸ್ಪರ ಮೆಚ್ಚಿ ಮದುವೆಯಾಗುವ ಪದ್ಧತಿ ಹೆಚ್ಚು ಹೆಚ್ಚಾಗಿ ಕಂಡುಬರುತ್ತಿದೆ. ಇದನ್ನು ಗಾಂಧರ್ವವಿವಾಹ ಎಂದು ಅವರೇ ಕರೆದುಕೊಳ್ಳುವುದುಂಟು. ಆದರೆ ಅದು ಸರಿಯಲ್ಲ. ಈ ಮೊದಲೇ ತಿಳಿಸಿದಂತೆ ಗಾಂಧರ್ವವಿವಾಹವು ವಿಶೇಷವಾಗಿ ಕ್ಷತ್ರಿಯರಿಗೆ ವಿಹಿತವಾದುದು; ಅಲ್ಲದೆ ಅಂತಹ ವಿವಾಹವು ಕನ್ಯಾವರರ ಪರಸ್ಪರ ಸಮ್ಮತಿಯೊಂದಿಗೆ ವರ್ಣ ಮೊದಲಾದವುಗಳ ಅನುಕೂಲ್ಯವನ್ನು ಸಹ ಹೊಂದಿರುವುವು. [೨]ಮಹಾಭಾರತದಲ್ಲಿನ ಶಾಕುಂತಲೋಪಾ- ಖ್ಯಾನದಲ್ಲಿ ದುಷ್ಯಂತ-ಶಕುಂತಲೆಯರ ಮಧ್ಯೆ ನಡೆದ ವಿವಾಹ ಈ ಬಗೆಯದು. ಮಹಾಕವಿ ಕಾಳಿದಾಸನ ಅಭಿಜ್ಞಾನ ಶಾಕುಂತಲ ನಾಟಕದಲ್ಲೂ ಈ ಬಗ್ಗೆ ಸ್ಪಷ್ಟ ನಿರೂಪಣೆ ಕಂಡುಬರುತ್ತದೆ[೩].

ಇದಕ್ಕೆ ಗುರುಹಿರಿಯರಿಗೆ ಆ ಬಗ್ಗೆ ಆ ಕ್ಷಣದಲ್ಲಿ ಮಾಹಿತಿ ಇರುವುದಿಲ್ಲವಾದರೂ ಇದು ಅವರ ಒಪ್ಪಿಗೆಗೆ ಅರ್ಹವಾದ ರೀತಿಯಲ್ಲಿ ನಡೆಯುವಂತಿರುತ್ತದೆ ಎಂಬುದು

---

೧. ಜ್ಞಾತಿಭ್ಯೋ ದ್ರವಿಣಂ ದತ್ವಾ ಕನ್ಯಾಯೈ ಚೈವ ಶಕ್ತಿತಃ ।
ಕನ್ಯಾಪ್ರದಾನಂ ಸ್ವಾಚ್ಛಂದ್ಯಾದಾಸುರೋ ಧರ್ಮ ಉಚ್ಯತೇ ॥ -ಮನುಸ್ಮೃತಿ(೩/೩೧)

೨. ನ ಮೇಽನ್ಯತ್ ಕ್ಷತ್ರಿಯಾಯಾ ಮನೋ ಜಾತು ಪ್ರವರ್ತತೇ ।
ಋಷಿಪುತ್ರೀಷು ಚಾನ್ಯಾಸು ನಾವರಾಸು ಪರಾಸು ಚ ॥ - ಮಹಾಭಾರತ(ಆದಿಪರ್ವ/೨೨/೨೦)

೩. ಅಸಂಶಯಂ ಕ್ಷತ್ರಪರಿಗ್ರಹಕ್ಷಮಾ ಯದಾರ್ಯಮಸ್ಯಾಮಭಿಲಾಷಿ ಮೇ ಮನಃ ।
ಸತಾಂ ಹಿ ಸಂದೇಹಪದೇಷು ವಸ್ತುಷು ಪ್ರಮಾಣಮಂತಃಕರಣಪ್ರವೃತ್ತಯಃ ॥ -ಅಭಿಜ್ಞಾನ ಶಾಕುಂತಲ

ವಿಶೇಷ[1]. ಈ ಅರ್ಥದಲ್ಲಿ ಇಂದಿನ ಪರಸ್ಪರ ಮೆಚ್ಚುಗೆಯ ಹೆಚ್ಚಿನ ವಿವಾಹಗಳು ಮನೆಯ ಹಿರಿಯರ ವಿರೋಧಕ್ಕೆ ಒಳಗಾಗುವ ಸಂದರ್ಭಗಳೇ ಹೆಚ್ಚು. ಅದರಿಂದಾಗಿ ಇವುಗಳನ್ನು ಶಾಸ್ತ್ರೋಕ್ತವಾದ ಗಾಂಧರ್ವವಿವಾಹದ ಸಾಲಿಗೆ ಸೇರಿಸುವಂತಿಲ್ಲ.

ಕನ್ಯಾವರರ ಪರಸ್ಪರರ ಮೆಚ್ಚುಗೆಯೊಂದಿಗೆ ಗುರುಹಿರಿಯರ ಸಮ್ಮತಿಯೂ ದೊರೆತಾಗ, ಅದು ಒಂದರ್ಥದಲ್ಲಿ ಬ್ರಾಹ್ಮ ಗಾಂಧರ್ವದ ಸಮ್ಮಿಲನದಂತೆ ಮಾನ್ಯ-ವಾಗುವ ವಿಶೇಷ ವಿವಾಹವೆನ್ನಿಸುವುದು. ಕೆಲವು ಸಮಯದ ಹಿಂದೆ ವಧೂವರರಿಗೆ ವಿವೇಕ ಬರುವ ಮುನ್ನವೇ ಗುರುಹಿರಿಯರು ನಿಶ್ಚಯಿಸಿ ಮಾಡುವ ವಿವಾಹಗಳು ಹೆಚ್ಚಾಗಿ ನಡೆಯುತ್ತಿದ್ದವು. ಅವುಗಳಲ್ಲಿ ವಧೂವರರ ಮೆಚ್ಚುಗೆಯ ಪ್ರಶ್ನೆ ಗೌಣವೆನ್ನಿಸುತ್ತಿತ್ತು. ಆದರೆ ಅನಂತರದ ದಿನಗಳಲ್ಲಿ ವಧೂವರರ ಮೆಚ್ಚುಗೆಗೂ ಮಹತ್ವಬರುವಂತಾಗಿ, ಅಂತಹ ವಿವಾಹಗಳು ಹೆಚ್ಚು ಪ್ರಶಸ್ತವೆನ್ನಿಸತೊಡಗಿದವು. ಬಾಲ್ಯವಿವಾಹವು ಮರೆಯಾಗಿ, ಪ್ರೌಢವಿವಾಹ ಚಾಲ್ತಿಗೆ ಬರತೊಡಗಿದಂತೆ ಇಂತಹ ಅನಪೇಕ್ಷಿತವಲ್ಲದ ಮಾರ್ಪಾಡು ಕಾಣಿಸತೊಡಗಿತು.

## 'ಬಾಲ್ಯವಿವಾಹ

ಆ ಮುನ್ನ ಸಮಾಜದಲ್ಲಿ ಕೆಲವೆಡೆ ರೂಢಿಯಲ್ಲಿದ್ದ ಬಾಲ್ಯವಿವಾಹವು ತುಂಬಾ ಕಡ್ಡಾಯ ಎಂಬ ರೀತಿಯಲ್ಲಿ ಶಾಸ್ತ್ರಗಳಲ್ಲಿ ನಿರೂಪಿತವಾಗಿಲ್ಲ ಎಂಬುದು ಗಮನಾರ್ಹ. ಹಸುಗೂಸುಗಳಲ್ಲೇ ವಿವಾಹ ನಡೆಯುವ ಪದ್ಧತಿ ಅದು ಆಯಾ ಗ್ರಾಮ, ಪಟ್ಟಣಗಳಲ್ಲಿನ ದುಷ್ಟಕೂಟದ ಅಥವಾ ವಿಧರ್ಮೀಯರ ಅತ್ಯಾಚಾರದಿಂದ ಆಗಬಹುದಾದ ಅನರ್ಥ-ವನ್ನು ತಪ್ಪಿಸಲು ರೂಪುಗೊಂಡ ಒಂದು ಆಪತ್ಕಾಲದ ವಿಶೇಷ ವ್ಯವಸ್ಥೆ ಎಂದು ಭಾವಿಸಬಹುದು. ಬ್ರಾಹ್ಮವಿವಾಹವನ್ನು ಶ್ರೇಷ್ಠವೆನ್ನಿಸುವ ಮನುಸ್ಮೃತಿ ಮೊದಲಾದ ಸ್ಮೃತಿಗಳು ಸಹ ಕನ್ಯೆಯು ಋತುಮತಿಯಾದ ಬಳಿಕವೂ ಮೂರು ವರ್ಷಗಳವರೆಗೆ ವಿವಾಹದ ಅವಕಾಶವನ್ನು ನೀಡಿದೆ ಎಂಬುದು ಗಮನಿಸಲೇಬೇಕಾದ ಸಂಗತಿ[2]. ಈ

---

೧. ಶಕುಂತಲೆಯ ಗಾಂಧರ್ವವಿವಾಹದ ವಿಚಾರವನ್ನು ತಿಳಿದ ಕಣ್ವರು ಅದನ್ನು ವಿಶೇಷವಾಗಿ ಅಭಿನಂದನೆ ಮಾಡಿದ ವಿವರ ಕಾಳಿದಾಸನ ಅಭಿಜ್ಞಾನಶಾಕುಂತಲದಲ್ಲಿ ಮನೋಜ್ಞವಾಗಿ ಬಂದಿರುವುದು ಗಮನಾರ್ಹ: ದಿಷ್ಟ್ಯಾ ಧೂಮಾಕುಲಿತದೃಷ್ಟೇರಪಿ ಯಜಮಾನಸ್ಯ ಪಾವಕ ಏವಾಹುತಿಃ ಪತಿತಾ.

೨. ತ್ರೀಣಿ ವರ್ಷಾಣ್ಯೃತುಮತೀ ಕಾಂಕ್ಷೇತ ಪಿತೃಶಾಸನಮ್ ।
ತತಶ್ಚತುರ್ಥೇ ವರ್ಷೇ ತು ವಿಂದೇತ ಸದೃಶಂ ಪತಿಮ್ ।
ಅವಿದ್ಯಮಾನೇ ಸದೃಶೇ ಗುಣಹೀನಮಪಿ ಶ್ರಯೇತ್ ॥ -ಬೋಧಾಯನಸ್ಮೃತಿ

ತ್ರೀಣಿ ವರ್ಷಾಣ್ಯುಪಾಸೀತ ಕುಮಾರ್ಯರ್ತುಮತೀ ಸತೀ ।
ಊರ್ಧ್ವಂ ತು ಕಾಲಾದೇತಸ್ಮಾದ್ವಿಂದೇತ ಸದೃಶಂ ಪತಿಮ್ ॥ -ಮನುಸ್ಮೃತಿ(೯/೯೦)
ಅದೀಯಮಾನಾ ಭರ್ತಾರಮಧಿಗಚ್ಛೇದ್ಯದಿ ಸ್ವಯಮ್ ।
ನೈನಃ ಕಿಂಚಿದವಾಪ್ನೋತಿ ನ ಚ ಯಂ ಸಾಽಧಿಗಚ್ಛತಿ ॥ -ಮನುಸ್ಮೃತಿ

ಹಿನ್ನೆಲೆಯಲ್ಲಿ ಇಂದಿನ ಕಾನೂನಿನ ಅಡಿಯಲ್ಲೇ ನಡೆಯುವ ವಿವಾಹಕ್ಕೆ ಹೆಚ್ಚು ಮಹತ್ತ್ವವಿದೆ. ಇದಕ್ಕೆ ಪ್ರತಿಯಾಗಿ ನಡೆಯುವ ಹೆಚ್ಚಿನ ಬಾಲ್ಯವಿವಾಹಗಳು ಅನಂತರ ವಧೂವರರಲ್ಲಿನ ಸಾಮರಸ್ಯದ ಕೊರತೆಯಿಂದಾಗಿ, ವಿಚ್ಛೇದನ ಮೊದಲಾದ ದುಷ್ಪರಿಣಾಮದಲ್ಲಿ ಪರ್ಯವಸಾನವಾಗುವುದು ಹೆಚ್ಚಾಗಿ ಕಂಡುಬರುತ್ತದೆ. ಸಂಬಂಧಿಸಿದವರು ಇದನ್ನು ಗಮನಿಸಿ, ಈ ಬಗ್ಗೆ ಎಚ್ಚರಿಕೆಯಿಂದ ನಡೆದುಕೊಳ್ಳುವುದು ಇಂದಿನ ಅಗತ್ಯಗಳಲ್ಲೊಂದಾಗಿದೆ.

## ಪ್ರೇಮವಿವಾಹ

ಇದಕ್ಕೆ ಭಿನ್ನವಾಗಿ ಇಂದು ನಡೆಯುವ ಬಹುತೇಕ ವಿವಾಹಗಳು ಕೇವಲ ಪರಸ್ಪರರ ದೈಹಿಕ ಆಕರ್ಷಣೆಯನ್ನಷ್ಟೇ ಆಧರಿಸುವುದು ವಿಷಾದಕರ ಸಂಗತಿ. ಇಂತಹ ವಿವಾಹಗಳಿಗೆ ಪ್ರೇಮವಿವಾಹ ಎಂಬ ಹಣೆಪಟ್ಟಿಯನ್ನು ಇಂತಹವರು ಕಟ್ಟುವರಾದರೂ ಹೆಚ್ಚಿನ ಸಂದರ್ಭಗಳಲ್ಲಿ ಅದು ವಾಸ್ತವವಾಗಿ ಕಾಮವಿವಾಹವೇ ಹೊರತು ಪ್ರೇಮವಿವಾಹವಲ್ಲ. ಈ ಮುನ್ನವೇ ತಿಳಿಸಿದಂತೆ ಸಹಶಿಕ್ಷಣ ಮೊದಲಾದ ಅನೇಕ ಕಾರಣಗಳಿಂದ ಉಂಟಾಗುವ ತಾತ್ಕಾಲಿಕವಾದ ದೈಹಿಕ ಆಕರ್ಷಣೆಯನ್ನು ಪ್ರೇಮ ಎಂಬ ಹೆಸರಿನಿಂದ ಅಪವಿತ್ರಗೊಳಿಸುವುದು ಸರಿಯಲ್ಲ. ಅಂತಹ ವಿವಾಹಗಳು ಹೆಚ್ಚಿನ ಪ್ರಸಂಗಗಳಲ್ಲಿ ಉಭಯಪಂಗಡಗಳ ಹಿರಿಯರಿಗೂ ಸಮ್ಮತವಾಗದೆ, ದುರಂತವನ್ನು ಕಂಡಿರುವ ಪ್ರಸಂಗಗಳು ಅಗಣಿತವಾಗಿವೆ. ಆರಂಭದ ಕಾಮನೆಯು ಕೊನೆಗೊಂಡಮೇಲೆ ಇಣುಕುವ ವಿರಸಗಳು ದಿಕ್ಕುದೆಶೆ ಕಾಣದೆ, ವಧೂವರರಿಬ್ಬರು ಅತಂತ್ರರಾದ ಅನೇಕ ಪ್ರಸಂಗಗಳು ದಾಖಲಾಗಿವೆ. ಆದ್ದರಿಂದ ಇಂತಹ ಪ್ರಸಂಗಕ್ಕೆ ಅವಕಾಶ ನೀಡದಂತೆ ಹಿರಿಯರು ಹಾಗೂ ಕಿರಿಯರು ತುಂಬ ಎಚ್ಚರವಹಿಸಬೇಕಾದ ಅಗತ್ಯವನ್ನು ಒತ್ತಿಹೇಳಬೇಕಾಗಿದೆ. ಈ ಬಗ್ಗೆ ಸರ್ಕಾರವಾಗಲೀ ಕಾನೂನಾಗಲೀ, ಅಸಹಾಯಕ ಎಂಬುದನ್ನು ಗಮನಿಸಬೇಕು. ಆಧುನಿಕ ಸರ್ಕಾರದ ಪರಿಕಲ್ಪನೆಯಲ್ಲಿ ವಿವಾಹದ ಪಾವಿತ್ರ್ಯ, ಮೊದಲಾದವುಗಳ ಬಗ್ಗೆ ಹೆಚ್ಚಿನ ಒತ್ತು ಕಂಡುಬರುವುದಿಲ್ಲ ಎಂಬುದು ಇದಕ್ಕೆ ಮುಖ್ಯಕಾರಣ.

## ಬ್ರಾಹ್ಮವಿವಾಹದ ವೈಶಿಷ್ಟ್ಯ

[೧]ಬ್ರಾಹ್ಮವಿವಾಹದ ಪ್ರಧಾನಗುಣವೆಂದರೆ ಉಭಯಪಕ್ಷಗಳ ಗುರುಹಿರಿಯರ ಪೂರ್ಣಸಮ್ಮತಿಯಿಂದ ಲಭಿಸುವ ಭದ್ರತೆ. ಅದು ನಡೆಯುವ ರೀತಿ, ನಡೆಯುವ

---

೧. ಆಹೂಯ ದಾನಂ ಬ್ರಾಹ್ಮಃ ಸ್ಯಾತ್ ಕುಲಶೀಲಯುತಾಯ ತು ।
ಪುರುಷಾಂಸ್ತಾರಯೇತ್ ತಜ್ಜೋ ನಿತ್ಯಂ ಕನ್ಯಾಪ್ರದಾನತಃ ॥ -ಅಗ್ನಿಪುರಾಣ(೧೦೪/೯)
ದಶ ಪೂರ್ವಾನ್ ಪರಾನ್ ವಂಶ್ಯಾನಾತ್ಮಾನಂ ಚೈಕವಿಂಶಕಮ್ ।
ಬ್ರಾಹ್ಮೀಪುತ್ರಃ ಸುಕೃತಕೃನ್ಮೋಚಯತ್ಯೇನಸಃ ಪಿತೄನ್ ॥ -ಮನುಸ್ಮೃತಿ(೩/೩೭)

ವಿಧಿವಿಧಾನಗಳು ಎಲ್ಲವೂ ಸಹ ಪಾರದರ್ಶಕವಾಗಿದ್ದು ಪ್ರತಿಯೊಂದು ಹಂತದಲ್ಲೂ ಒಳಿತಿನ ಅಂಶಗಳು ಎದ್ದು ಕಾಣುವವು. ಹಾಗೆ ಬಹುಜನರ ಸಮ್ಮುಖದಲ್ಲಿ ನಡೆಯುವ ವಿವಾಹಗಳಿಗೆ ವಿಶೇಷ ಮಹತ್ತ್ವ ತಾನಾಗಿಯೇ ಒದಗುವುದು. ವಧೂವರರಲ್ಲಿ ಮೂಡುವ ಆ ಬಗೆಗಿನ ಎಚ್ಚರ ಎಂತಹ ಪ್ರಸಂಗದಲ್ಲೂ ಏಕತೆಯನ್ನು ಕಾಯ್ದುಕೊಳ್ಳಲು ನೆರವಾಗುವುದು. ಸ್ವೇಚ್ಛಾಚಾರಕ್ಕೆ ಸಂಪೂರ್ಣ ನಿಯಂತ್ರಣ ಉಂಟಾಗುವುದು. ಮುಂದೆ ಯಾವುದೇ ಕಾರಣದಿಂದ ಆ ದಂಪತಿಗಳಲ್ಲಿ ವಿರಸ ಉಂಟಾದಾಗ ಅದನ್ನು ಪರಿಹರಿಸುವ ಬಾಧ್ಯತೆಯನ್ನು ಉಭಯಪಂಗಡಗಳ ಹಿರಿಯರು ಹೊಂದಿರುವುದರಿಂದ ಸಹಜವಾಗಿಯೇ ಅವು ಪುನಃ ಸುಖಾಂತ್ಯವಾಗಲು ನೆರವಾಗುವುದು. ಸಮಾಜದ ಕಣ್ಣಿನಲ್ಲಿ ತಮ್ಮ ಅಂತಸ್ತಿನ ಸಂರಕ್ಷಣೆಯ ವಿವೇಕವು ಸಹ ದಂಪತಿಗಳಲ್ಲಿ ವಿಶೇಷವಾದಂತಹ ಹೊಂದಾಣಿಕೆಗೆ ರಕ್ಷಾಕವಚದಂತೆ ಕಾರ್ಯನಿರ್ವಹಿಸುವುದು. ದೈಹಿಕ ಆಕರ್ಷಣೆಗಿಂತ ಹೆಚ್ಚಾಗಿ ಧಾರ್ಮಿಕ ಪರಿಕಲ್ಪನೆ, ಸಾಂಸ್ಕೃತಿಕ ಶಿಸ್ತು ಮೊದಲಾದವುಗಳಿಗೆ ಹೆಚ್ಚಿನ ಸ್ಥಾನ ಲಭಿಸಿ, ಸಂಸಾರವು ಒಂದು ಸಂಸ್ಥೆಯಂತೆ ರೂಪುಗೊಂಡು, ಮುಂದಿನ ಜನಾಂಗಕ್ಕೂ ಸಹ ಆದರ್ಶ-ವೆನ್ನಿಸುವಂತಹ ಉತ್ತಮ ಬಾಳು ಸಾಧ್ಯವಾಗಲು ಇದರ ಕಾಣಿಕೆ ಅಪಾರ.

ಬ್ರಾಹ್ಮವಿವಾಹದಿಂದ ಜನಿಸುವ ಪುತ್ರರು ತಮ್ಮ ವಂಶದ ಹಿಂದಿನ ಹತ್ತು ಪಿತೃಗಳನ್ನು ತನ್ನನ್ನು ಹಾಗೂ ಅನಂತರದ ೨೧ ಕುಲಗಳನ್ನು ಉದ್ಧರಿಸುವನು ಎಂಬ ವಿಶೇಷಾಂಶ ಮನುಸ್ಮೃತಿಯಲ್ಲಿದೆ. ಬ್ರಾಹ್ಮವಿವಾಹದಿಂದ ರೂಪವಂತರು, ಬಲವಂತರು, ಗುಣವಂತರು, ಧನವಂತರು, ಕೀರ್ತಿವಂತರು ಹಾಗೂ ನೂರು ವರ್ಷಗಳ ಕಾಲ ಧರ್ಮಪರಾಯಣರಾಗಿ ಜೀವಿಸುವ ಶ್ರೇಷ್ಠಪುತ್ರರು [೧]ಜನಿಸುವರು. ಧರ್ಮಬಾಹಿರವಾದ ವಿವಾಹದಿಂದ ಕ್ರೂರಿಗಳು, ಸುಳ್ಳುಗಾರರು, ದೈವದ್ವೇಷಿಗಳು ಹಾಗೂ ಧರ್ಮದ್ವೇಷಿಗಳು ಆದ ಪುತ್ರರು ಜನಿಸುವರು. ವಿಹಿತಗುಣಗಳಿಂದ ಕೂಡಿದ ಕನ್ಯೆಯರೊಂದಿಗೆ ನಡೆಯುವ ವಿವಾಹದಲ್ಲಿ ಶ್ರೇಷ್ಠಸಂತತಿಯು, ಅವಿಹಿತಸ್ತ್ರೀಯರೊಂದಿಗೆ ನಡೆಯುವ ವಿವಾಹದಲ್ಲಿ ದುಷ್ಟಸಂತತಿಯು ಜನಿಸುವುದು. [೨]ಸಾಮಾನ್ಯವಾಗಿ ತಂದೆಯ ಗುಣಗಳು ಮಗನಿಗೆ ಬಂದರೆ ತಾಯಿಯ

---

೧. ರೂಪಸತ್ತ್ವಗುಣೋಪೇತಾ ಧನವಂತೋ ಯಶಸ್ವಿನಃ ।
ಪರ್ಯಾಪ್ತಭೋಗಾ ಧರ್ಮಿಷ್ಠಾ ಜೀವಂತಿ ಚ ಶತಂ ಸಮಾಃ ॥ -ಮನುಸ್ಮೃತಿ(೩,೪೦)
ಇತರೇಷು ತು ಶಿಷ್ಟೇಷು ನೃಶಂಸಾನೃತವಾದಿನಃ ।
ಜಾಯಂತೇ ದುರ್ವಿವಾಹೇಷು ಬ್ರಹ್ಮಧರ್ಮದ್ವಿಷಃ ಸುತಾಃ ॥ -ಮನುಸ್ಮೃತಿ(೩,೪೧)
ಅನಿಂದಿತೈಃ ಸ್ತ್ರೀವಿವಾಹೈರನಿಂದ್ಯಾ ಭವತಿ ಪ್ರಜಾ ।
ನಿಂದಿತೈರ್ನಿಂದಿತಾ ನೃಣಾಂ ತಸ್ಮಾನ್ನಿಂದ್ಯಾನ್ ವಿವರ್ಜಯೇತ್ ॥ -ಮನುಸ್ಮೃತಿ(೩,೪೨)

೨. ಅಶ್ವಂ ಪಿತ್ರಾ ಪರೀಕ್ಷೇತ ಮಾತ್ರಾ ಕನ್ಯಾಂ ಪರೀಕ್ಷಯೇತ್ ।
ತೃಣಾದ್ಭೂಮಿಂ ಪರೀಕ್ಷೇತ ಆಚಾರೇಣ ಕುಲಂ ತಥಾ ॥ -ವಿಷ್ಣುಸ್ಮೃತಿ

ಗುಣಶೀಲಗಳು ಮಗಳಿಗೆ ಬರುತ್ತವೆ ಎಂಬುದು ಶಾಸ್ತ್ರಗಳ ವಿಚಾರ. ಕೈಕೇಯಿಯು ತಾಯಿಯ ದುಷ್ಟಸ್ವಭಾವವನ್ನೇ ಹೊಂದಿದವಳು ಎಂಬುದನ್ನು ತಿಳಿಸಲು ವಾಲ್ಮೀಕಿ ರಾಮಾಯಣದಲ್ಲಿ ಈ ಮಾತು ಬಂದಿದೆ. ತನ್ನ ೧೦ ತಲೆಮಾರಿನವರು ಶ್ರೋತ್ರಿಯರೆಂದು ಪ್ರಸಿದ್ಧರಾದ ಶ್ರೇಷ್ಠ ಕುಲದಿಂದ ಕನ್ಯೆಯನ್ನು ತರಬೇಕು ಎಂಬುದು ಯಾಜ್ಞವಲ್ಕ್ಯರ ಅಭಿಮತ.

ಇದರೊಂದಿಗೆ ಧಾರ್ಮಿಕ-ವೈಜ್ಞಾನಿಕ ಹಿನ್ನೆಲೆಯಲ್ಲಿ ಮುಂದಿನ ಸಂತತಿಯೂ ಸಹ ಸಾಮಾಜಿಕವಾಗಿ, ದೈಹಿಕವಾಗಿ, ಸಾಂಸ್ಕೃತಿಕವಾಗಿ, ಆಧ್ಯಾತ್ಮಿಕವಾಗಿ, ಸುದೃಢವಾಗಿ ರೂಪುಗೊಳ್ಳಲು ಸಾಧ್ಯವಾಗುವುದು. ಯಾವುದೇ ಹಂತದಲ್ಲೂ ಕಾಮ ಗೌಣವೆನ್ನಿಸಿ, ಧರ್ಮ ಪ್ರಧಾನವಾಗಿ ಜೀವನ ಅರ್ಥವತ್ತಾಗುವುದು. ಗೃಹಸ್ಥಾಶ್ರಮದ ಹೃದಯದಲ್ಲಿ ಕಾಮವು ಒಂದಾಗಿರುವುದು ನಿಜವಾದರೂ ಅದು ಒಂದು ಸ್ವೇಚ್ಛಾಚಾರವಾಗದೇ ಒಂದು ಶಿಸ್ತಿಗೆ ಒಳಪಡಲು ಈ ಬ್ರಾಹ್ಮವಿವಾಹ ತುಂಬಾ ಸಹಕಾರಿಯಾಗುವುದು : **ಧರ್ಮಾವಿರುದ್ಧೋ ಭೂತೇಷು ಕಾಮೋऽಸ್ಮಿ ಭರತರ್ಷಭ** -(೭/೧೧) ಎಂಬ ಭಗವದ್ಗೀತೆಯ ಮಾತಿನಲ್ಲಿ ಇದರ ಮಹತ್ತ್ವವನ್ನು ಅರ್ಥಮಾಡಿಕೊಳ್ಳಬಹುದು. ಇದರಿಂದಾಗಿ ವಿವಾಹವು ಒಂದು ಧಾರ್ಮಿಕ ವ್ಯವಸ್ಥೆಯಾಗಿ ಸಾಮಾಜಿಕಭದ್ರತೆಯ ಅಡಿಪಾಯವಾಗಿ ಸಮಾಜದ ಸರ್ವತೋಮುಖ ಪ್ರಗತಿಗೆ ಸಲ್ಲುವ ಉತ್ತಮ ಕಾಣಿಕೆಯಾಗಿ ಮಾನ್ಯವಾಗುವುದು.

## ವಿಧಿವಿಧಾನಗಳ ಮಹತ್ತ್ವ

ಯಾವುದೇ ಕಾರ್ಯ ವಿಧಿವಿಧಾನಗಳಿಗೆ ಅನುಗುಣವಾಗಿ ನಡೆದಾಗ ಮಾತ್ರವೇ ಊರ್ಜಿತವೆನಿಸಿ, ಅರ್ಥವತ್ತಾಗುವುದು. ಉದಾಹರಣೆಗೆ, ನಿವೇಶನ, ಮನೆ ಇತ್ಯಾದಿಗಳ ನೋಂದಣಿಯನ್ನು ಗಮನಿಸಬಹುದು. ಅಂತಹ ನೋಂದಣಿಕಾರ್ಯಕ್ಕೆ ಅಗತ್ಯವಾದ ದಾಖಲೆಗಳು ಸಮಗ್ರವೂ ಸ್ಪಷ್ಟವೂ ಆಗಿದ್ದಾಗ ಅಂತಹ ನೋಂದಣಿ ಊರ್ಜಿತವೆನ್ನಿಸಿ, ಎರಡು ಗುಂಪಿನವರಿಗೂ ನಿರಾಳವೆನ್ನಿಸುವುದು. ಬದಲಿಗೆ ಅದರಲ್ಲಿ ಲೋಪ-ದೋಷಗಳಿದ್ದಲ್ಲಿ ಆ ಕಾರ್ಯ ಯೋಗ್ಯ ರೀತಿಯಲ್ಲಿ ಪೂರೈಸುವುದಾಗಲಿ, ಆ ಬಳಿಕ ನಿರೀಕ್ಷಿತ ರೀತಿಯಲ್ಲಿ ಅದು ಮುಂದಿನ ಕಾರ್ಯಕ್ಕೆ ಅನುವು ಮಾಡಿಕೊಡುವುದಾಗಲಿ, ಅಶಕ್ಯವೆನ್ನಿಸುವುದು. ವಿದ್ಯಾರ್ಥಿಗಳ ಶಾಲಾಕಾಲೇಜುಗಳ ಪ್ರವೇಶಕಾರ್ಯ, ಮುಂದೆ ಉದ್ಯೋಗಕ್ಕೆ ಸೇರ್ಪಡೆ ಮೊದಲಾದ ಪ್ರತಿಯೊಂದು ಕಾರ್ಯವೂ ಸಹ ಅವಕ್ಕೆ ಸಂಬಂಧಿಸಿದಂತಹ ವಿಧಿವಿಧಾನಗಳಿಗೆ ಅನುಗುಣವಾಗಿ ನಡೆದಾಗ ಮಾತ್ರವೇ

---

ಗುಣಾಃ ಪಿತುರ್ಮಾತೃಜಾತಿಃ ಸುತಾನಾಂ -ಮಹಾಭಾರತತಾತ್ಪರ್ಯನಿರ್ಣಯ(೨೦/೧೫೭)
ಪಿತೄನ್ ಸಮನುಜಾನಂತಿ ನರಾ ಮಾತರಮಂಗನಾಃ। -ವಾಲ್ಮೀಕಿರಾಮಾಯಣ(೨/೩೫/೨೭)

ಪರಿಪೂರ್ಣವೆನ್ನಿಸಲು ಸಾಧ್ಯ. ವೈದ್ಯರೂ ಸಹ ರೋಗಿಯ ಶಸ್ತ್ರಚಿಕಿತ್ಸೆಯನ್ನು ಅವನ ರಕ್ತದೊತ್ತಡ, ರಕ್ತದಲ್ಲಿನ ಸಕ್ಕರೆಯಲ್ಲಿನ ಪ್ರಮಾಣ ಮೊದಲಾದವುಗಳ ಪರೀಕ್ಷೆ ನಡೆಸಿ, ಅವುಗಳು ಸಮರ್ಪಕ ಪ್ರಮಾಣದಲ್ಲಿದ್ದಾಗ ಮಾತ್ರವೇ ನಡೆಸುವ ಸಂಗತಿಯನ್ನು ಇಲ್ಲಿ ಗಮನಿಸಬಹುದು. ಎಂದರೆ ಕೇವಲ ರೋಗಿಯ ಆಸಕ್ತಿ ಹಾಗೂ ವೈದ್ಯರ ನೈಪುಣ್ಯಗಳು ಮಾತ್ರವಲ್ಲದೆ ಶಸ್ತ್ರಚಿಕಿತ್ಸೆಗೆ ಅನುಕೂಲಿಸುವಂತಹ ಇತರ ಅಗತ್ಯಗಳೂ ಸಹ ಗಮನಾರ್ಹವೆನ್ನಿಸುವಂತೆ ಈ ಪ್ರಸಂಗ ಎಂದು ತಿಳಿಯಬೇಕು. ಇಂತಹ ಕಾರ್ಯಗಳ ಬಗ್ಗೆ ವಿಶೇಷ ಗಮನವನ್ನು ಹರಿಸುವ ಜನರು ವಿವಾಹದಂತಹ ಜೀವನ ಪೂರ್ತಿಯಾದ ವಿಶೇಷ ಸಂಬಂಧ ಕಲ್ಪಿಸುವ ಮಹತ್ತರವಾದ ಸಂಸ್ಕಾರವನ್ನು ವಿಧಿವಿಧಾನಗಳತ್ತ ಗಮನಹರಿಸದೆ ಕೇವಲ ಸ್ವಂತ ವಿಷಯವೆಂಬಂತೆ ಲಘುವಾಗಿ ಪರಿಗಣಿಸಿ, ಮುಂದೆ ಬಗೆಬಗೆಯ ಅನರ್ಥಗಳಿಗೆ ಗುರಿಯಾಗುವುದು ವಿವೇಕವೆನ್ನಿಸದು. ಎಷ್ಟೋ ಜನರ ಬಾಳು ಅನಧಿಕೃತ ಸಂಬಂಧವೆನ್ನಿಸಿ, ಅವರಿಗೂ ಅವರ ಸಂತತಿಗೂ ಅಪಾರವಾದ ನೋವನ್ನು ತಂದು-ಕೊಡುತ್ತಿರುವುದು ಎಲ್ಲರಿಗೂ ತಿಳಿದಿರುವ ವಿಷಯವೇ ಆಗಿದೆ. ಆದಕ್ಕಾಗಿ ವಿವಾಹಕ್ಕೆ ಸಂಬಂಧಿಸಿದ ವಿಧಿವಿಧಾನಗಳ ಪರಿಜ್ಞಾನವನ್ನು ಎಲ್ಲರೂ ತಿಳಿದಿರುವುದು ಅತ್ಯಗತ್ಯ ಎನ್ನಿಸುವುದು. ಇತ್ತೀಚಿನ ದಿನಗಳಲ್ಲಿ ವಿವಾಹವೆಂಬುದು ಕೇವಲ ವಧೂವರರಿಬ್ಬರಲ್ಲಿ ಮಾತ್ರವೇ ನಡೆಯಬೇಕಾದ ಕೇವಲ ತಾತ್ಕಾಲಿಕವೆನ್ನಿಸುವ ಒಂದು ಸಂಬಂಧ ಎಂಬ ಭಾವ ಹೆಚ್ಚಾಗಿ ಬೆಳೆಯುತ್ತಿದ್ದು ವಿಧಿವಿಧಾನಗಳ ಬಗ್ಗೆ ಅಸಡ್ಡೆ ತೋರುವ ಪ್ರವೃತ್ತಿ ಹೆಚ್ಚಾಗಿ ಕಂಡುಬರುವುದು. ಪ್ರಗತಿಪರ ಧೋರಣೆ ಎಂಬ ಹೆಸರಿನಲ್ಲಿ ಇವಕ್ಕೆ ಭಾರೀ ಪ್ರಚಾರವೂ ದೊರೆಯುತ್ತಿದ್ದು ಸಂಪ್ರದಾಯದ ಬಗ್ಗೆ ಅವಜ್ಞೆ ದಿನೇ ದಿನೇ ಹೆಚ್ಚುತ್ತಿದೆ. ಇದು ಸಾಮಾಜಿಕ ಹಾಗೂ ಆಧ್ಯಾತ್ಮಿಕ ಒಳಿತಿಗೆ ಕಾರಣವಾಗುವ ಧೋರಣೆ ಎನ್ನಿಸದು.

## ಸಗೋತ್ರ- ಸಪ್ರವರ ವಿವಾಹ ನಿಷಿದ್ಧ

ಕನ್ಯೆಯು ತಾಯಿಯ ಸಪಿಂಡಳಾಗಿರಕೂಡದು, ತಂದೆಯ ಸಮಾನಗೋತ್ರ-ಳಾಗಿರಕೂಡದು ಎಂಬುದು ಅತ್ಯಂತ ಮುಖ್ಯ ಅರ್ಹತೆ. ಸಗೋತ್ರವಿವಾಹ ವೈಜ್ಞಾನಿಕ-ವಾಗಿಯೂ ಸಹ ವಿಹಿತವಾದುದಲ್ಲ ಎಂಬುದು ಗಮನಿಸಬೇಕಾದ ಅಂಶ. ಸಾಮಾನ್ಯವಾಗಿ ರಕ್ತಸಂಬಂಧಿಗಳಲ್ಲಿನ ವಿವಾಹವೇ ಅಷ್ಟು ಪ್ರಶಸ್ತವೆನ್ನಿಸದು. ಅದರಲ್ಲೂ ಸಗೋತ್ರವಿವಾಹ ಸಂಪೂರ್ಣ ನಿಷಿದ್ಧವಾದುದು ಎಂಬುದು ವಿಶೇಷ . ಇಲ್ಲಿ ಸಗೋತ್ರ ವಿವಾಹವೆಂದರೆ ಗೋತ್ರದೊಂದಿಗೆ ಪ್ರವರವೂ ವಿವಕ್ಷಿತ[1].

---

೧. ನೈಕಗೋತ್ರಾಂ ತು ವರಯೇನ್ನೈಕಾರ್ಷೇಯಾಂ ಚ ಭಾರ್ಗವ ।
ಪಿತೃತಃ ಸಪ್ತಮಾದೂರ್ಧ್ವಂ ಮಾತೃತಃ ಪಂಚಮಾತ್ ತಥಾ ॥ -ಅಗ್ನಿಪುರಾಣ(೧೫೪/೮)
ಪರಿಣೇಯ ಸಗೋತ್ರಾಂ ತು ಸಮಾನಪ್ರವರಾಂ ತಥಾ ।

ಸಗೋತ್ರ ಹಾಗೂ ಸಪ್ರವರ ವಿವಾಹಗಳು ನಿಷಿದ್ಧ ಎಂಬುದನ್ನು ಸ್ಮೃತಿಗಳೂ ಏಕಕಂಠದಿಂದ ಸಾರಿವೆ. ಈ ಮುನ್ನವೇ ತಿಳಿಸಿದಂತೆ ವೈಜ್ಞಾನಿಕ ಹಿನ್ನೆಲೆಯಲ್ಲಿಯೂ ಸಹ ಅದು ಅನಾರೋಗ್ಯಕರ. ಮತ್ತೊಂದು ಗೋತ್ರಕ್ಕೆ ದತ್ತುಕೊಡುವಿಕೆ ಮೊದಲಾದ ಯಾವುದೇ ವಿಧಾನದಿಂದಲೂ ಇದಕ್ಕೆ ಪರಿಹಾರ ವಿಹಿತವಾಗಿಲ್ಲ. ಅಜ್ಞಾನವಶಾತ್ ಅಂತಹ ವಿವಾಹಗಳು ನಡೆದಲ್ಲಿ ಶಾಸ್ತ್ರನೀಡುವ ಪರಿಹಾರವೆಂದರೆ ಕನ್ಯೆಯ ಪರಿತ್ಯಾಗ ಹಾಗೂ ಚಾಂದ್ರಾಯಣವ್ರತದ ಆಚರಣೆ. ತಿಳಿದೂ ಮಾಡಿದಲ್ಲಿ ಕನ್ಯಾಪರಿತ್ಯಾಗದೊಂದಿಗೆ ಎರಡು ಬಾರಿ ಚಾಂದ್ರಾಯಣವ್ರತ. ಆ ರೀತಿ ಪತ್ನಿಯನ್ನು ತ್ಯಾಗಮಾಡುವುದು ಎಂದರೆ ಜೊತೆಯಾಗಿ ಸಂಸಾರ ನಡೆಸುವುದನ್ನು ತ್ಯಜಿಸಬೇಕು ಎಂದರ್ಥ. ಆದರೆ ಅವಳ ರಕ್ಷಣೆಯ ಬಗ್ಗೆ ಮಾತ್ರ ಸಂಪೂರ್ಣ ವ್ಯವಸ್ಥೆಯನ್ನು ಮಾತ್ರ ಮಾಡಲೇಬೇಕು. ಮಾತೃವತ್ ಪರಿಪಾಲಯೇತ್ ಅವಳನ್ನು ತಾಯಿಯಂತೆ ಕಾಣಬೇಕು ಎಂಬ ಮಾತಿನಲ್ಲಿ ಈ ವಿಷಯ ಸ್ಫುಟವಾಗಿ ಬಂದಿದೆ[೧].

## ಮತ್ತೆ ಕೆಲವು ನಿಷಿದ್ಧ ವಿವಾಹಗಳು

ಅಣ್ಣತಮ್ಮಂದಿರಿಗೆ ಅಕ್ಕತಂಗಿಯರನ್ನು ವಿವಾಹಮಾಡಿಕೊಡುವುದು ಸಹ ವಿಹಿತವಲ್ಲ. ಆದರೆ ಅಣ್ಣತಮ್ಮಂದಿರ ಮಕ್ಕಳು ವಿಭಿನ್ನ ಗೋತ್ರದ ಮನೆತನದ ಅಕ್ಕತಂಗಿಯರನ್ನಾಗಲೀ, ಅಥವಾ ಅವರ ಅಣ್ಣತಮ್ಮಂದಿರ ಪುತ್ರಿಯರನ್ನಾಗಲೀ, ವಿವಾಹವಾಗುವುದು ನಿಷೇಧಿಸಲ್ಪಟ್ಟಿಲ್ಲ. ಎಂದರೆ ಏಕೋದರರಾದ ಅಣ್ಣತಮ್ಮಂದಿರು ಏಕೋದರಿಯರಾದ ಕನ್ಯೆಯರನ್ನು ಮದುವೆಯಾಗುವಂತಿಲ್ಲ ಎಂದರ್ಥ. ಒಬ್ಬನೇ ವರನಿಗೆ ತನ್ನ ಇಬ್ಬರು ಹೆಣ್ಣುಮಕ್ಕಳನ್ನು

---

ತಸ್ಯಾಂ ಕೃತ್ವಾ ಸಮುತ್ಸರ್ಗಂ ದ್ವಿಜಶ್ಚಾಂದ್ರಾಯಣಂ ಕರೇತ್ ॥
-ಮೇಧಾತಿಥಿ, ಮನುಸ್ಮೃತಿ, ಮುಕ್ತಾವಲೀವ್ಯಾಖ್ಯಾ (೩/೫)

ಪರಿಣೀಯ ಸಗೋತ್ರಾಂ ತು ಸಮಾನಪ್ರವರಾಂ ತಥಾ ।
ಕೃತ್ವಾ ತಸ್ಯಾಃ ಸಮುತ್ಸರ್ಗಮತಿಕೃಚ್ಛ್ರಂ ವಿಶೋಧನಮ್ ॥ -ಶಾತಾತಪಸ್ಮೃತಿ

ಸಮಾನಗೋತ್ರಪ್ರವರಾಂ ಕನ್ಯಾಮೂಢ್ವೋಪಗಮ್ಯ ಚ ।
ತಸ್ಯಾಮುತ್ಪಾದ್ಯ ಚಂಡಾಲಂ ಬ್ರಾಹ್ಮಣ್ಯಾದೇವ ಹೀಯತೇ ॥ -ಆಪಸ್ತಂಬಸ್ಮೃತಿ

ಅವಿಪ್ಲುತಬ್ರಹ್ಮಚರ್ಯೋ ಲಕ್ಷಣ್ಯಾಂ ಸ್ತ್ರಿಯಮುದ್ವಹೇತ್ ।
ಅನನ್ಯಪೂರ್ವಿಕಾಂ ಕಾಂತಾಮಸಪಿಂಡಾಂ ಯವೀಯಸೀಮ್ ।
ಅರೋಗಿಣೀಂ ಭ್ರಾತೃಮತೀಮಸಮಾನಾರ್ಷಗೋತ್ರಜಾಮಿತಿ ॥ -ಯಾಜ್ಞವಲ್ಕ್ಯಸ್ಮೃತಿ (೧/೫೨)

ಏಕ ಏವ ಋಷಿರ್ಯತ್ರ ಪ್ರವರೇಷ್ವನುವರ್ತತೇ ।
ತಾವತ್ಸಮಾನಗೋತ್ರತ್ವಂ ಋತೇ ಭೃಗ್ವಂಗಿರೋಗಣಾತ್ ॥ -ಬೌಧಾಯನಸ್ಮೃತಿ

೧. ಆರೂಢಪತಿತಾಪತ್ಯಂ ಬ್ರಾಹ್ಮಣ್ಯಾಂ ಯಶ್ಚ ಶೂದ್ರಜಃ ।
ಸಗೋತ್ರೋಢಾಸುತಶ್ಚೈವ ಚಾಂಡಾಲಾಸ್ತ್ರಯ ಈರಿತಾಃ ॥ -ಯಮಸ್ಮೃತಿ

ಧಾರೆ ಎರೆಯುವುದು ಸಹ ನಿಷಿದ್ಧ. ಆದರೆ ಕಾರಣಾಂತರದಿಂದ ತನ್ನ ಮೊದಲ ಮಗಳು ಮೃತಳಾದರೆ, ಅಳಿಯನಿಗೆ ಇತರ ಎಲ್ಲ ಅನುಕೂಲಗಳು ಇದ್ದಲ್ಲಿ ತನ್ನ ಇನ್ನೊಬ್ಬ ಮಗಳನ್ನು ಕೊಡುವುದು ಶಾಸ್ತ್ರಗಳು ನಿಷೇಧಿಸಿಲ್ಲ. ಅದರಂತೆ ಒಂದೇ ವರ್ಷದಲ್ಲಿ ಅಣ್ಣತಮ್ಮಂದಿರಿಗೆ ವಿವಾಹಗಳು ವಿಹಿತವಾಗಿಲ್ಲ. ವಿವಾಹವಾದ ಮೊದಲ ೬ ತಿಂಗಳಲ್ಲಿ ಮನೆಯಲ್ಲಿ ಉಪನಯನ ವಿವಾಹಗಳನ್ನು ನಡೆಸುವಂತಿಲ್ಲ. ಆದರೆ ಕಾಲಕ್ಕೆ ತಕ್ಕಂತೆ ನಡಯಲೇಬೇಕಾದ ಷಷ್ಠಿಪೂರ್ತಿ ಶಾಂತಿ ಮೊದಲಾದ ಕಾರ್ಯಕ್ರಮಗಳಿಗೆ ಈ ನಿಯಮ ಅನ್ವಯಿಸುವುದಿಲ್ಲ. ವ್ರತಗಳ ಉದ್ಯಾಪನೆ, ಗ್ರಹಪ್ರವೇಶ ಮೊದಲಾದವುಗಳು ವಿವಾಹವಾದ ವರ್ಷದಲ್ಲಿ ಪ್ರಶಸ್ತವಲ್ಲ. ಅಣ್ಣತಮ್ಮಂದಿರಿಗೆ ಒಂದೇ ವರ್ಷದಲ್ಲಿ ವಿವಾಹ ನಿಷಿದ್ಧ. ಆದರೆ ಅವಳಿಗಳಾಗಿದ್ದಲ್ಲಿ ಇದಕ್ಕೆ ದೋಷವಿಲ್ಲ.

ಅಣ್ಣ ಅಥವಾ ಅಣ್ಣಂದಿರಿಗೆ ವಿವಾಹವಾಗದೆ ತಮ್ಮಂದಿರಿಗೆ ವಿವಾಹವು ನಿಷಿದ್ಧ. ಅಂತಹ ವಿವಾಹವಾಗುವವರು 'ಪರಿವೇತ್ತಾ'[೧] ಎನ್ನಿಸುವರು. ವಿವಾಹವಾಗದ ಅಣ್ಣನಿಗೆ 'ಪರಿವಿತ್ತಿ'[೨] ಎನ್ನುವರು. ಆದರೆ ಯಾವುದೇ ಕಾರಣದಿಂದ ಅಣ್ಣ ಅಥವಾ ಅಕ್ಕ ವಿವಾಹವನ್ನು ಮಾಡಿಕೊಳ್ಳುವ ವಿಚಾರವನ್ನು ತೊರೆದಿದ್ದಲ್ಲಿ ಈ ನಿಯಮ ಅನ್ವಯಿಸದು[೩].

---

೧. ದಾರಾಗ್ನಿಹೋತ್ರಸಂಯೋಗಂ ಕುರುತೇ ಯೋಽಗ್ರಜೇ ಸ್ಥಿತೇ।
ಪರಿವೇತ್ತಾ ಸವಿಜ್ಞೇಯಃ ಪರಿವಿತ್ತಿಸ್ತು ಪೂರ್ವಜಃ॥ -ಮನುಸ್ಮೃತಿ( ೩/೧೭೧)

೨. ಪರಿವಿತ್ತಿಃ ಪರಿವೇತ್ತಾ ಯಯಾ ಚ ಪರಿವಿದ್ಯತೇ।
ಸರ್ವೇ ತೇ ನರಕಂ ಯಾಂತಿ ದಾತೃಯಾಜಕಪಂಚಮಾಃ॥ -ಮನುಸ್ಮೃತಿ(೩/೧೭೨)

೩. ಪಿತೃವ್ಯಪುತ್ರಾನ್ ಸಾಪತ್ನಾನ್ ಪರನಾರೀಸುತಾಂಸ್ತಥಾ।
ದಾರಾಗ್ನಿಹೋತ್ರಯೋಗೇನ ನ ದೋಷಃ ಪರಿವಿಂದನೇ॥ -ವಸಿಷ್ಠಸ್ಮೃತಿ
ಕ್ಲೀಬೇ ದೇಶಾಂತರಸ್ಥೇ ಚ ಪತಿತೇ ಭಿಕ್ಷುಕೇ ತಥಾ।
ಯೋಗಶಾಸ್ತ್ರಾಭಿಯುಕ್ತೇ ಚ ನ ದೋಷಃ ಪರಿವೇದನೇ॥ -ಶಾತಾತಪಸ್ಮೃತಿ.ಲಿಖಿತಸ್ಮೃತಿ(೮೦)
ಯೇ ತು ವಿವಾಹಾಧಿಕಾರಿಣಃ ದೇಶಾಂತರಸ್ಥಾಃ ವಿರಕ್ತವೇಶ್ಯಾತಿಸಕ್ತ ಶೂದ್ರತುಲ್ಯಾನಿ ವೃದ್ಧಕೃಷಿಕ-ರಾಜವೃದ್ಧಿಪ್ರಸಕ್ತ 'ಕಾಮತೋಽಕಾರಿ' ವ್ಯಾಹಕಚೋರಾಃ ತೇಷಾಂ ಕಾಲಪ್ರತೀಕ್ಷಣೇನ ಪರಿವೇದನ - ಆಧಾನಾದೌ - ನ ದೋಷಃ। -ಸ್ಮೃತಿಮುಕ್ತಾವಲೀ
ಅತ್ರಾಪವಾದಃ। ಸಾಪತ್ನೇ ದತ್ತಕೇ ವಾ ಜ್ಯೇಷ್ಠೇ ಕನಿಷ್ಠಸ್ಯ ದಾರಾಗ್ನಿಹೋತ್ರಗ್ರಹಣೇ ದೋಷೋ ನ। ಸೋದರೇಽಪಿ ಕ್ಲೀಬೇ ಮೂಕಬಧಿರವಾಮನಭಗ್ನಪಾದತ್ವಾದಿದೋಷಯುತೇ ದೇಶಾಂತರಸ್ಥೇ ವೇಶ್ಯಾಸಕ್ತೇ ಪತಿತೇ ಮಹಾರೋಗಿಣ್ಯತಿವೃದ್ಧೇ ಕೃಷಿಸಕ್ತೇ ಧನವೃದ್ಧಿರಾಜಸೇವಾದಿವ್ಯಾಪಾರಾಸಕ್ತೇ ಚೌರ್ಯಾದಿಸಕ್ತೇ ಉನ್ಮತ್ತೇ ವಿವಾಹಾಗ್ನಿಹೋತ್ರೇಚ್ಛಾನಿವೃತ್ತೇ ಚ ಜ್ಯೇಷ್ಠೇ ಕನಿಷ್ಠಸ್ಯ ದಾರಾಗ್ನಿ-ಹೋತ್ರಗ್ರಹಣೇ ದೋಷೋ ನ। ದೇಶಾಂತರಗತಂ ಭಿನ್ನಮಾತೃಜತ್ವೇ ಕನಿಷ್ಠಾಯಾ ವಿವಾಹೇ ದೋಷೋ ನ। ಏವಂ ಮೂಕತ್ವಾದಿದೋಷಯುತಾಯಾಂ ಜ್ಯೇಷ್ಠಾಯಾಮೂಹ್ಯಮ್। ಇತಿ ಪರಿವೇತ್ರಾದಿನಿರ್ಣಯಃ। -ಧರ್ಮಸಿಂಧು

ಅದರಂತೆ ಅವರು ವಿವಾಹವಾಗಲು ಸಮ್ಮತಿ ನೀಡಿದರೂ ಸಹ ಅದು ದೋಷವೆನ್ನಿಸದು[೧]. ಹಿಡಿಂಬೆಯು ತನ್ನನ್ನು ವಿವಾಹವಾಗಲು ಭೀಮಸೇನನನ್ನು ಪ್ರಾರ್ಥಿಸಿಕೊಂಡಾಗ, ಇದೇ ಕಾರಣವನ್ನು ನೀಡಿ, ಭೀಮಸೇನ ತನ್ನ ಅಣ್ಣ ಯುಧಿಷ್ಠಿರನಿಗೆ ಇನ್ನೂ ವಿವಾಹ-ವಾಗದಿರುವುದರಿಂದ ತಾನು ಅವಳನ್ನು ವಿವಾಹವಾಗುವುದು ವಿಹಿತವಲ್ಲ ಎಂದು ತಿಳಿಸುವ ವಿವರ ಮಹಾಭಾರತದಲ್ಲಿದೆ. ಮುಂದೆ ವೇದವ್ಯಾಸರು ಬಂದು ದೇವಕಾರ್ಯದ ಹಿನ್ನಲೆಯನ್ನು ತಿಳಿಸಿ, ಆ ವಿವಾಹಕ್ಕೆ ಅನುಮತಿ ನೀಡುವರು. ಆದರೆ ಆ ಕಾರ್ಯ ಪೂರೈಸುತ್ತಲೇ ಹಿಡಿಂಬೆಯು ಭೀಮನ ಜೊತೆಗೆ ವಾಸಿಸದೆ, ತನ್ನ ಪುತ್ರ ಘಟೋತ್ಕಚನೊಂದಿಗೆ ಪ್ರತ್ಯೇಕವಾಗಿ ನೆಲೆಸಲು ತಿಳಿಸುವರು[೨]. ಆದ್ದರಿಂದ ಅದು ಈ ಗುಂಪಿಗೆ ಸೇರುವ ನಿಷಿದ್ಧವಿವಾಹ ಎನ್ನಿಸುವುದಿಲ್ಲ ಎಂಬ ವಿಶೇಷವನ್ನು ತಿಳಿಯಬೇಕು. ಅಜ್ಞಾನವಶಾತ್ ಅಂತಹ ವಿವಾಹ ನಡೆದಲ್ಲಿ ಪರಿವೇತೃ ಪರಿವಿತ್ತಿಗಳಿಗೆ ಎರಡು

---

ಒಂದು ವೇಳೆ ವಿವಾಹಯೋಗ್ಯರಾದ ಅಣ್ಣ ಅಥವಾ ಅಣ್ಣಂದಿರು ದೇಶಾಂತರಕ್ಕೆ ತೆರಳಿ ಅವರ ದಿಕ್ಕು ದೆಶೆಗಳು ಗೊತ್ತಾಗದೇ ಹೋಗುವ ಪ್ರಸಂಗದಲ್ಲಿ ಅವರಿಗಾಗಿ ೮, ೧೦ ಅಥವಾ ೧೨ ವರ್ಷಗಳ ಕಾಲ ನಿರೀಕ್ಷಿಸಿ, ಅನಂತರ ತಮ್ಮ ಅಥವಾ ತಮ್ಮಂದಿರು ವಿವಾಹವಾಗಬಹುದು ಎಂಬ ವಿಶೇಷಾಂಶವೂ ಗಮನಾರ್ಹ.

೧. ಜ್ಯೇಷ್ಠಭ್ರಾತರ್ಯನುಜ್ಞಾತೇ ಪರಿವೇದಾದ್ಯದೂಷಣಮ್ । -ಮರೀಚಿಸ್ಮೃತಿ
ಜ್ಯೇಷ್ಠಭ್ರಾತಾ ಯದಾ ತಿಷ್ಠೇದಾಧಾನಂ ನೈವ ಕಾರಯೇತ್ ।
ಅನುಜ್ಞಾತಸ್ತು ಕುರ್ವೀತ ಶಂಖಸ್ಯ ವಚನಂ ಯಥಾ ॥ -ಸುಮಂತುಸ್ಮೃತಿ

೨. ತಾಂ ಭೀಮ ಆಹ ಕಮನೀಯತನುಂ ನ ಪೂರ್ವಂ
ಜ್ಯೇಷ್ಠಾದುಪೈಮಿ ವನಿತಾಂ ನ ಹಿ ಧರ್ಮ ಏಷಃ ।
ಸಾ ಚಾಹ ಕಾಮವಶಗಾ ಪುನರೇತದೇವ
ಸ್ವಾವೇಶಯುಗ್ ಹಿ ಮರುದಗ್ರ್ಯಪರಿಗ್ರಹಸ್ಯ ॥ -ಮ.ಭಾ.ತಾ.ನಿ.(೧೯/೫೦)
ತಾಭ್ಯಾಮನೂಕ್ತಮಪಿ ಯನ್ನ ಕರೋತಿ ಭೀಮಃ
ಪ್ರಾದುರ್ಬಭೂವ ನಿಖಿಲೋರುಗುಣಾಭಿಪೂರ್ಣಃ ।
ವ್ಯಾಸಾತ್ಮಕೋ ಹರಿರನಂತಸುಖಾಂಬುರಾಶಿ-
ರ್ವಿದ್ಯಾಮರೀಚಿವಿತತಃ ಸಕಲೋತ್ತಮೋಽಲಮ್ ॥
ದೃಷ್ಟ್ವೈವ ತಂ ಪರಮಮೋದಿನ ಆಶು ಪಾರ್ಥಾ
ಮಾತ್ರಾ ಸಹೈವ ಪರಿಪೂಜ್ಯ ಗುರುಂ ವಿರಿಂಚೇಃ ।
ಉಲ್ಲಾಲಿತಾಶ್ಚ ಹರಿಣಾ ಪರಮಾತಿಹಾರ್ದ-
ಪ್ರೋತ್ಫುಲ್ಲಪದ್ಮನಯನೇನ ತದೋಪವಿಷ್ಟಾಃ ॥
ತಾನ್ ಭಕ್ತಿನಮ್ರಶಿರಸಃ ಸಮುದೀಕ್ಷ್ಯ ಕೃಷ್ಣೋ
ಭೀಮಂ ಜಗಾದ ನತ ಆಶು ಹಿಡಿಂಬಯಾ ಚ ।
ಏತಾಂ ಗೃಹಾಣ ಯುವತೀಂ ಸುರಸದ್ಮಶೋಭಾಂ
ಜಾತೇ ಸುತೇ ಸಹಸುತಾ ಪ್ರತಿಯಾತು ಚೈಷಾ ॥ -ಮ.ಭಾ.ತಾ.ನಿ. (೧೯/೫೮-೬೦)

ಕೃಚ್ಛ್ರವ್ರತಗಳ ಪ್ರಾಯಶ್ಚಿತ್ತವನ್ನು ಕನ್ಯೆಗೆ ಒಂದು ಕೃಚ್ಛ್ರವ್ರತವನ್ನು ಕನ್ಯಾದಾನ ಮಾಡಿದ ಪಿತೃವಿಗೆ ಅತಿಕೃಚ್ಛ್ರವ್ರತವನ್ನು ಪುರೋಹಿತರಿಗೆ ಚಾಂದ್ರಾಯಣವ್ರತವನ್ನು ಶಾಸ್ತ್ರಗಳು ವಿಧಿಸಿವೆ. ತಿಳಿದೂ ಇಂತಹ ವಿವಾಹ ನಡೆದಲ್ಲಿ ಎಲ್ಲರಿಗೂ ಒಂದು ವರ್ಷಕಾಲ ಕೃಚ್ಛ್ರವ್ರತದ ಪ್ರಾಯಶ್ಚಿತ್ತ

## ಪ್ರೌಢವಿವಾಹಕ್ಕೆ ಪ್ರಾಯಶ್ಚಿತ್ತ

ವಟುವಿಗೆ ಉಪನಯನಕ್ಕೆ ವಯೋನಿರ್ಬಂಧವಿರುವಂತೆ ಕನ್ಯೆಗೆ ಸಹ ವಯಸ್ಸಿನ ನಿರ್ಬಂಧವಿರುವುದು. ವಟುವಿಗೆ ಉಪನಯನಕ್ಕೆ ೮ ವರ್ಷ ನಿಯಮಿತವಾಗಿರುವಂತೆ ಕನ್ಯೆಗೆ ೮ ವರ್ಷ ಎಂಬುದಾಗಿಯೇ ಶಾಸ್ತ್ರಗಳು ವಿಧಿಸಿವೆ. ಉಪನಯನಕ್ಕೆ ಅನಂತರವೂ ೧೬ರ ವರೆಗೆ ವಿನಾಯಿತಿ ಇರುವಂತೆ ಕನ್ಯೆಗೂ ಪ್ರೌಢೆಯಾಗುವವರೆಗೂ ವಿನಾಯಿತಿ ಇದೆ[1]. ೧೬ರ ನಂತರದ ಉಪನಯನಕ್ಕೆ ಶಾಸ್ತ್ರದ ಅಂಗೀಕಾರವಿಲ್ಲ, ಆ ರೀತಿ ಉಪನೀತರಾದವರು ವ್ರಾತ್ಯ ಎನ್ನಿಸುವರು. ವಟುವಿಗೆ ಉಪನಯನ ಹೇಗೋ ಕನ್ಯೆಗೆ ವಿವಾಹ ಹಾಗೆ ಎಂಬ ವಿಶೇಷ ಬ್ರಹ್ಮಸೂತ್ರಭಾಷ್ಯದಲ್ಲಿದೆ[2].

ಕನ್ಯೆಗೆ ಈ ಮುನ್ನವೇ ತಿಳಿಸಿರುವಂತೆ ಪ್ರೌಢೆಯಾದ ಬಳಿಕವೂ ವಿವಾಹಕ್ಕೆ ಅವಕಾಶವಿದೆ. ಈಗಂತೂ ಅದಕ್ಕೆ ಕಾನೂನಿನ ನಿರ್ಬಂಧವೇ ಇದೆ. ಶಾಸ್ತ್ರಗಳು ಇಂತಹ ಸಂದರ್ಭದಲ್ಲಿ ಪ್ರಾಯಶ್ಚಿತ್ತವಾಗಿ, ಋತುಸಂಖ್ಯೆಯ ಗೋದಾನವನ್ನು ಅಥವಾ ಕನಿಷ್ಠ ಒಂದಾದರೂ ಗೋದಾನವನ್ನು ಇಲ್ಲವಾದಲ್ಲಿ ಯಥಾಶಕ್ತಿ ಬ್ರಾಹ್ಮಣಭೋಜನವನ್ನು ಕನ್ಯಾದಾತೃವಿಗೆ ವಿಧಿಸಿವೆ.

ಅದರೊಂದಿಗೆ ತೈತ್ತಿರೀಯ ಶಾಖೆಯಲ್ಲಿನ ಕೂಷ್ಮಾಂಡಮಂತ್ರಗಳಿಂದ ನಡೆಯುವ ಹೋಮವನ್ನು ವಿಧಿಸಿವೆ. ಹೋಮಕ್ಕೆ ಅವಕಾಶವಿಲ್ಲದಾಗ ಪಾರಾಯಣ[3], ಅದೂ

---

೧. ಸಾಮಾನ್ಯವಾಗಿ ೧೨ನೇ ವರ್ಷದ ವರೆಗೆ ಈ ವಿನಾಯಿತಿ ಎಂಬುದು ಸ್ಮೃತಿಗಳ ನಿಲುವು :
ಪ್ರಾಪ್ತೇ ತು ದ್ವಾದಶೇ ವರ್ಷೇ ಯಃ ಕನ್ಯಾಂ ನ ಪ್ರಯಚ್ಛತಿ ।
ಮಾಸಿ ಮಾಸಿ ರಜಸ್ತಸ್ಯಾಃ ಪಿತಾ ಪಿಬತಿ ಶೋಣಿತಮ್ ॥ ಇತಿ ।
-ಸಂವರ್ತಸ್ಮೃತಿ,ಯಮಸ್ಮೃತಿ(೨೨)ಪರಾಶರಸ್ಮೃತಿ(೭/೭)
ಅಷ್ಟವರ್ಷಾ ಭವೇದ್ ಗೌರೀ ನವವರ್ಷಾ ತು ರೋಹಿಣೀ ।
ದಶವರ್ಷಾ ಭವೇತ್ ಕನ್ಯಾ ಅತ ಊರ್ಧ್ವಂ ರಜಸ್ವಲಾ ।
ಪ್ರಾಪ್ತೇ ತು ದ್ವಾದಶೇ ವರ್ಷೇ ರಜಃ ಸ್ತ್ರೀಣಾಂ ಪ್ರವರ್ತತೇ । ಇತಿ ।
-ಆಪಸ್ತಂಬಸ್ಮೃತಿ,ಪರಾಶರಸ್ಮೃತಿ(೭/೬)ಸಂವರ್ತಸ್ಮೃತಿ(೬೬)

೨. ಸ್ತ್ರೀಣಾಂ ಪ್ರದಾನಕರ್ಮೈವ ಯಥೋಪನಯನಂ ತಥಾ । -ಬ್ರಹ್ಮಸೂತ್ರಭಾಷ್ಯ

೩. ವಿವಾಹಾತ್ಪೂರ್ವಂ ಕನ್ಯಾಯಾ ರಜೋದರ್ಶನೇ ಮಾತೃಪಿತೃಭ್ರಾತೄಣಾಂ ನರಕಪಾತಃ ಕನ್ಯಾಯಾ

ಅಶಕ್ಯವೆನಿಸಿದಾಗ ಶ್ರವಣವನ್ನಾದರೂ ಮಾಡಿದಲ್ಲಿ ಅದಕ್ಕೆ ಪರಿಹಾರ ಲಭಿಸುವುದು. ಇಲ್ಲವಾದಲ್ಲಿ ಅಂತಹ ಕನ್ಯೆಗೆ [೧]ವೃಷಲೀ ಎಂದು ಅವಳನ್ನು ವಿವಾಹವಾಗುವ ವರನಿಗೆ ವೃಷಲೀಪತಿ ಎಂದೂ ಕರೆಯುವರು. ಅಂತಹವರು ಹವ್ಯಕವ್ಯಗಳಿಗೆ ಅರ್ಹತೆ ಪಡೆಯಲಾರರು. ಕೂಷ್ಮಾಂಡಹೋಮದಂತಹ ಸುಲಭದ ಪರಿಹಾರ ವಿಹಿತವಾಗಿರುವಾಗ ಅದರ ಪ್ರಯೋಜನವನ್ನು ಪಡೆಯದೆ ಹವ್ಯಕವ್ಯಗಳಿಗೆ ಅರ್ಹತೆ ಕಳೆದುಕೊಳ್ಳುವುದು ವಿವೇಕ ಎನ್ನಿಸಲಾರದು. ವಿವಾಹದ ಬಳಿಕ ವಧೂವರರಿಬ್ಬರೂ ಸಹ ಸೇರಿ ಈ ಕೂಷ್ಮಾಂಡ-ಹೋಮದಲ್ಲಿ ಪಾಲ್ಗೊಳ್ಳುವುದು ಹೆಚ್ಚು ಸೂಕ್ತ. ಕೆಲವೆಡೆ ವಿವಾಹ ಪೂರ್ವದಲ್ಲಿಯೇ ಇದನ್ನು ಪೂರೈಸುವ ಸಂಪ್ರದಾಯವೂ ಇದೆ.

## ಕನ್ಯೆಯ ಅರ್ಹತೆ

ವರ್ಣೋಚಿತವಾದ ಸಂಸ್ಕಾರವನ್ನು ತೊರೆದ, ಗಂಡುಸಂತತಿ ಇರದ ಮನೆತನದ, ಸ್ವೇಚ್ಛಾಪ್ರವೃತ್ತಿಯ, ಅಪಸ್ಮಾರಾದಿ ರೋಗಗಳಿಂದ ಕೂಡಿದ [೨]ಮನೆತನದ ಕನ್ಯೆ ವಿವಾಹಕ್ಕೆ ಉಚಿತವಲ್ಲ. ಕನ್ಯೆಯು ವಯಸ್ಸು ಹಾಗೂ ಎತ್ತರದಲ್ಲಿ ವರನಿಗಿಂತ ಕಡಿಮೆ ಇರಲೇಬೇಕು ಎಂಬುದು ಮತ್ತೊಂದು ಗಮನಿಸಬೇಕಾದಅಂಶ ಮನುಸ್ಮೃತಿಯಲ್ಲಿದೆ:

---

ವೃಷಲೀತ್ವಂ ತದ್ಭರ್ತುರ್ವೃಷಲೀಪತಿತ್ವಮ್ । ಅತ್ರ ಶುದ್ಧಿಪ್ರಕಾರಃ । ಕನ್ಯಾದಾತಾ ಋತುಸಂಖ್ಯಯಾ ಗೋದಾನಾನಿ ಏಕಂ ವಾ ಗೋದಾನಂ ಯಥಾಶಕ್ತಿ ಬ್ರಾಹ್ಮಣಭೋಜನಂ ವಾ ಕೃತ್ವಾ ಕನ್ಯಾದಾನೇ ಯೋಗ್ಯೋ ಭವೇತ್ । ಕನ್ಯಾ ತೂಪವಾಸತ್ರಯಾಂತೇ ಗವ್ಯಪಯಃ ಪಾನಂ ಕೃತ್ವಾ ವಿಪ್ರಕುಮಾರ್ಯೈ ಸರತ್ನಭೂಷಣಂ ದತ್ತ್ವೋದ್ವಾಹಯೋಗ್ಯಾ ಭವತಿ । ವರಶ್ಚ ಕೂಷ್ಮಾಂಡಹೋಮಪೂರ್ವಕಂ ತಾಮುದ್ವಹನ್ನ ದೋಷೀ ಸ್ಯಾದಿತಿ । ವಿವಾಹಹೋಮಕಾಲೇ ರಜೋದೋಷೇ ತಾಂ ಸ್ನಾಪಯಿತ್ವಾ ಯುಂಜಾನೇತಿ ತೈತ್ತಿರೀಯಮಂತ್ರೇಣ ಪ್ರಾಯಶ್ಚಿತ್ತಂ ಹುತ್ವಾ ಹೋಮತಂತ್ರಂ ಸಮಾಪಯೇತ್ । ಯದಾ ತು ದಾತ್ರಭಾವಾದ್ರಜೋದರ್ಶನಂ ತದಾ ಕನ್ಯಾ ವರ್ಷತ್ರಯಂ ಪ್ರತೀಕ್ಷ್ಯ ಸ್ವಯಂ ವರಂ ವೃಣು ಯಾತ್ । ನಾತ್ರ ವರಸ್ಯಾಪಿ ದೋಷಃ । -ಧರ್ಮಸಿಂಧು

ಋತುಮತಿಯಾದ ದಿನ, ತಿಥಿ, ನಕ್ಷತ್ರ ಮೊದಲಾದವುಗಳ ದೋಷದ ಶಾಂತಿಗಾಗಿ ಭುವನೇಶ್ವರೀ ಹೋಮವು ವಿಹಿತವಾಗಿದ್ದು, ಅದನ್ನುವಿವಾಹದ ಮುನ್ನವೇ ಪೂರೈಸಿರುವುದು ಸೂಕ್ತ

೧. ಅಸೃಗ್ಯೋನಿಗತಂ ತಾವದ್ದದ್ಯಾದ್ ಯಾವನ್ನ ದೃಶ್ಯತೇ ।
ದೃಶ್ಯತೇ ವೃಷಲೀ ಕನ್ಯಾ ಜನಕಃ ಪತಿತಃ ಸ್ಮೃತಃ ॥ -ಬೃಹಸ್ಪತಿಸ್ಮೃತಿ
ವಂಧ್ಯಾ ತು ವೃಷಲೀ ಜ್ಞೇಯಾ ವೃಷಲೀ ಚ ಮೃತಪ್ರಜಾ ।
ಅಪರಾ ವೃಷಲೀ ಜ್ಞೇಯಾ ಕುಮಾರೀ ಯಾ ರಜಸ್ವಲಾ ॥ -ಯಮಸ್ಮೃತಿ(೨೫)

೨. ಸಮಾನಾಮುದ್ವಹೇತ್ ಪತ್ನೀಂ ಕುಲಶೀಲವಯೋಗುಣೈಃ ।
ತಯಾ ಸಹ ಚರೇದ್ಧರ್ಮಂ ಶ್ರೌತಂ ಸ್ಮಾರ್ತಂ ಯಥಾವಿಧಿ ॥ -ಬೃಹಸ್ಪತಿ
ಅನನ್ಯಪೂರ್ವಿಕಾಂ - ಪೂರ್ವಂ ಪುರುಷಾಂತರಾಪರಿಗೃಹೀತಾಮ್, ಕಾಂತಾಂ-ಕಮನೀಯಾಂ ಯವೀಯಸೀಂ - ವಯಸಾ ಪ್ರಮಾಣತಶ್ಚನ್ಯೂನಾಮ್ ॥ -ಧರ್ಮಸಿಂಧು

**ಗುರುಣಾಽನುಮತಃ ಸ್ನಾತ್ವಾ ಸಮಾವೃತ್ತೋ ಯಥಾವಿಧಿ ।**

**ಉದ್ವಹೇತ ದ್ವಿಜೋ ಭಾರ್ಯಾಂ ಸವರ್ಣಾಂ ಲಕ್ಷಣಾನ್ವಿತಾಮ್ ॥ (೩/೪)**

[೧]ತನಗಿಂತ ಹೆಚ್ಚು ಎತ್ತರದ, ಗಯ್ಯಾಳಿ ಸ್ವಭಾವದ ಕನ್ಯೆಯೂ ಸಹ ಉಚಿತವಲ್ಲ. ಲಕ್ಷಣವತಿಯಾದ ಸೌಮ್ಯಹೆಸರಿನ ಹಂಸ, ಗಜಗಳಂತೆ ನಡೆಯುವ ಕನ್ಯೆ ವಿವಾಹಕ್ಕೆ [೨]ವಿಹಿತ.

---

೧. ಅದರಂತೆ ಓದು, ಉದ್ಯೋಗ ಮೊದಲಾದವುಗಳಲ್ಲೂ ಸಹ ವರನು ವಧುವಿಗಿಂತ ಉತ್ತಮನಾಗಿದ್ದಲ್ಲಿ ಮುಂದಿನ ಬದುಕು ಹಸನಾಗಲು ಸಾಧ್ಯ ಎಂಬುದು ಸಹ ಗಮನಾರ್ಹ.

೨. ಶಸ್ತಾ ಸ್ತ್ರೀ ಚಾರುಸರ್ವಾಂಗೀ ಮತ್ತಮಾತಂಗಗಾಮಿನೀ ।
ಗುರೂರುಜಘನಾ ಯಾ ಚ ಮತ್ತಪಾರಾವತೇಕ್ಷಣಾ ॥
ಸುನೀಲಕೇಶೀ ತನ್ವಂಗೀ ಕೋಮಲಾಂಗೀ ಮನೋಹರಾ ।
ಸಮಭೂಮಿಸ್ಪೃಶೌ ಪಾದೌ ಸಂಹತೌ ಚ ತಥಾ ಸ್ತನೌ ।
ನೋದ್ವಹೇತ್ ತಾದೃಶೀಂ ಕನ್ಯಾಂ ಪ್ರಾಜ್ಞಃ ಕಾರ್ಯವಿಶಾರದಃ ॥ -ಅಗ್ನಿಪುರಾಣ(೨೪೩)
ಮಧ್ಯಕ್ಷಾಮಾ ಚ ಸುಭಗಾ ಭೋಗಾಢ್ಯಾ ಸಬಲಿತ್ರಯಾ ।
ಋಜ್ವೀ ತನ್ವೀ ಚ ರೋಮಾಲೀ ಯಸ್ಯಾಃ ಸಾ ಶರ್ಮನರ್ಮಭೂಃ ॥
ಕಪಿಲಾ ಕುಟಿಲಾ ಸ್ಥೂಲಾ ವಿಚ್ಛಿನ್ನಾ ರೋಮರಾಜಿಕಾ ।
ಚೌರವೈಧವ್ಯದೌರ್ಭಾಗ್ಯಂ ವಿದಧ್ಯಾದಿಹ ಯೋಷಿತಾಮ್ ॥
ಸೀಮಂತಃ ಸರಲಃ ಶಸ್ತೋ ಮೌಲಿಃ ಶಸ್ತಃ ಸಮುನ್ನತಃ ।
ಗಜಕುಂಭನಿಭೋ ವೃತ್ತಃ ಸೌಭಾಗ್ಯೈಶ್ವರ್ಯಸೂಚಕಃ ॥
ಸ್ಥೂಲಮೂರ್ಧಾ ಚ ವಿಧವಾ ದೀರ್ಘಶೀರ್ಷಾ ಚ ಬಂಧಕೀ ।
ವಿಶಾಲೇನಾಪಿ ಶಿರಸಾ ಭವೇದ್ದೌರ್ಭಾಗ್ಯಭಾಜನಮ್ ॥
ಕೇಶಾ ಅಲಿಕುಲಚ್ಛಾಯಾಃ ಸೂಕ್ಷ್ಮಾಃ ಸ್ನಿಗ್ಧಾಃ ಸುಕೋಮಲಾಃ ।
ಕಿಂಚಿದಾಕುಂಚಿತಾಗ್ರಾಶ್ಚ ಕುಟಿಲಾಶ್ಚಾತಿಶೋಭನಾಃ ॥
-ಸ್ಕಂದಪುರಾಣ,ಕಾಶೀಖಂಡ(೩೭/೫೩-೫೪,೧೨೧-೧೨೩)
ಯಸ್ಯಾಸ್ತು ರೇಖಾ ಗ್ರೀವಾಯಾಂ ಯಾ ಚ ರಕ್ತಾಂತಲೋಚನಾ ।
ಯಸ್ಯ ಸಾ ಗೃಹಮಾಗಚ್ಛೇತ್ ತದ್ಗೃಹಂ ಸುಖಮೇಧತೇ ॥
ಲಲಾಟೇ ದೃಶ್ಯತೇ ಯಸ್ಯಾಸ್ತ್ರಿಶೂಲಂ ದೇವನಿರ್ಮಿತಮ್ ।
ಬಹೂನಾಂ ಸ್ತ್ರೀಸಹಸ್ರಾಣಾಂ ಸ್ವಾಮಿನೀಂ ತಾಂ ವಿನಿರ್ದಿಶೇತ್ ।
ರಾಜಹಂಸಗತಿರ್ಯಸ್ಯಾ ಮೃಗಾಕ್ಷಿಮೃಗವರ್ಣಕಾ ।
ಸಮಶುಕ್ಲಾಗ್ರದಂತಾ ಚ ಕನ್ಯಾಂ ತಾಮುತ್ತಮಾಂ ವಿದುಃ ॥ -ಭವಿಷ್ಯಪುರಾಣ(೨೮)
ಯಸ್ಯಾಸ್ತು ಕುಂಚಿತಾಃ ಕೇಶಾ ಮುಖಂ ಚ ಪರಿಮಂಡಲಮ್ ।
ನಾಭಿಶ್ಚ ದಕ್ಷಿಣಾವರ್ತಾ ಸಾ ಕನ್ಯಾ ಕುಲವರ್ಧಿನೀ ॥
ಯಾ ಚ ಕಾಂಚನವರ್ಣಾಭಾ ರಕ್ತಹಸ್ತಸರೋರುಹಾ ।
ಸಹಸ್ರಾಣಾಂ ಚ ನಾರೀಣಾಂ ಭವೇತ್ ಸಾಽಪಿ ಪತಿವ್ರತಾ ॥
ಅಂಕುಶಂ ಮಂಡಲಂ ಚಕ್ರಂ ಯಸ್ಯಾಃ ಪಾಣಿತಲೇ ಭವೇತ್ ।

ಕನ್ಯೆಯು ಒಟ್ಟಾಗಿ ರೂಪವತಿಯಾಗಿರಬೇಕು ಎಂಬುದು ತಾತ್ಪರ್ಯ. ರೂಪವಿದ್ದಲ್ಲಿ ಗುಣಗಳೂ ಸಹ ಇರುವವು ಎಂಬುದು ಶಾಸ್ತ್ರಗಳ ಸಂದೇಶ : ಯತ್ರ ರೂಪಂ ತತ್ರ ಗುಣಾಃ (ಮ.ಭಾ.ತಾ.ನಿ.-೨/೩೬). ಆದರೆ ರೂಪವೆಂದರೆ ಕೇವಲ ಬಣ್ಣ ಒನಪು, ವಯ್ಯಾರಗಳೆಂದರ್ಥವಲ್ಲ ; ಲಕ್ಷಣಗಳು ಎಂದರ್ಥ. ಲಕ್ಷಣಗಳು ಪ್ರಧಾನವೆನ್ನಿಸಿ ಬಣ್ಣ ಗೌಣವೆನ್ನಿಸುವುದು. ಲಕ್ಷಣಗಳೂ ಸಹ ಸಹಜವಾದ ಲಕ್ಷಣಗಳಾಗಿರಬೇಕೇ ಹೊರತು ಅಲಂಕಾರ ಅಥವಾ ಕೃತಕಸಾಧನಗಳಿಂದ ಉಂಟಾಗಿರುವ ಲಕ್ಷಣಗಳಾಗಿರಕೂಡದು.

---

ಪುತ್ರಂ ಪ್ರಸೂಯತೇ ನಾರೀ ನರೇಂದ್ರಂ ಲಭತೇ ಪತಿಮ್ ॥
ಮತ್ಸ್ಯಾಂಕುಶಾಬ್ಜಚಿಹ್ನೌ ಚ ಚಕ್ರಲಾಂಗಲಲಕ್ಷಿತೌ ।
ಅಸ್ವೇದಿನೌ ಮೃದುತಲೌ ಪ್ರಶಸ್ತೌ ಚರಣೌ ಸ್ತ್ರಿಯಾಃ ॥
ವಕ್ರಕೇಶಾ ಚ ಯಾ ಕನ್ಯಾ ಮಂಡಲಾಕ್ಷೀ ಚ ಯಾ ಭವೇತ್ ।
ಭರ್ತಾ ಚ ಮ್ರಿಯತೇ ತಸ್ಯಾ ನಿಯತಂ ದುಃಖಭಾಗಿನೀ ॥
ರೇಖಾಭಿರ್ಬಹುಭಿಃ ಕ್ಲೇಶಂ ಸ್ವಲ್ಪಾಭಿರ್ಧನಹೀನತಾ ।
ರಕ್ತಾಭಿಃ ಸುಖಮಾಪ್ನೋತಿ ಕೃಷ್ಣಾಭಿಃ ಪ್ರೇಷ್ಯತಾಂ ವ್ರಜೇತ್ ॥
ಉದ್ಧೃತಾ ಕಪಿಲಾ ಯಸ್ಯಾ ರೋಮರಾಜೀ ನಿರಂತರಮ್ ।
ಅಪಿ ರಾಜಕುಲೇ ಜಾತಾ ದಾಸೀತ್ವಮುಪಗಚ್ಛತಿ ॥ -ಗರುಡಪುರಾಣ(೧/೩೪/೧-೧೬)
ನ ಶ್ಮಶ್ರುವ್ಯಂಜನವತೀಂ ನ ಚೈವ ಪುರುಷಾಕೃತಿಮ್ ।
ನ ಘರ್ಘರಸ್ವರಾಂ ಕ್ಷಾಮಾಂ ತಥಾ ಕಾಕಸ್ವರಾಂ ನ ಚ ॥
ನಾನಿಬದ್ಧೇಕ್ಷಣಾಂ ತದ್ವದ್ವೃತಾಕ್ಷೀಂ ನೋದ್ವಹೇದ್ಬುಧಃ ।
ಯಸ್ಯಾಶ್ಚ ರೋಮಶೇ ಜಂಘೇ ಗುಲ್ಫೌ ಯಸ್ಯಾಸ್ತಥೋನ್ನತೌ ॥
ಗಂಡಯೋಃ ಕೂಪಕೌ ಯಸ್ಯಾ ಹಸಂತ್ಯಾಸ್ತಾಂ ನಚೋದ್ವಹೇತ್ ।
ನಾತಿರೂಕ್ಷಚ್ಛವಿಂ ಪಾಂಡುಕರಜಾಮರುಣೇಕ್ಷಣಾಮ್ ।
ಆಪೀನಹಸ್ತಪಾದಾಂ ಚ ನ ಕನ್ಯಾಮುದ್ವಹೇದ್ಬುಧಃ ।
ನ ವಾಮನಾಂ ನಾತಿದೀರ್ಘಾಂ ನೋದ್ವಹೇತ್ ಸಂಹತಭ್ರುವಮ್ ॥
ನ ಚಾತಿಚ್ಛಿದ್ರದಶನಾಂ ಚ ಕರಾಲಮುಖೀಂ ನರಃ ॥ -ವಿಷ್ಣುಪುರಾಣ(೩/೧೦/೧೮-೨೨)
ಹಂಸಸ್ವನಾಂ ಮೇಘವರ್ಣಾಂ ಮಧುಪಿಂಗಲಲೋಚನಾಮ್ ।
ತಾದೃಶೀಂ ವರಯೇತ್ ಕನ್ಯಾಂ ಗೃಹಸ್ಥಃ ಸುಖಮೇಧತೇ ॥ -ಶಾತಾತಪಸ್ಮೃತಿ
ಬಂಧುಶೀಲಲಕ್ಷಣಸಂಪನ್ನಾಮರೋಗಾಂ ಉಪಯಚ್ಛೇತ । -ಆಪಸ್ತಂಬಸ್ಮೃತಿ
ಅಕ್ಲೀಬಾಽವ್ಯಂಗಿನೀ ಶಸ್ತಾ ಮಹಾರೋಗಾದ್ಯದೂಷಿತಾ ।
ಅನಿಂದಿತಾ ಶುಭಕಲಾ ಚಕ್ಷೂರೋಗವಿವರ್ಜಿತಾ ॥
ಬಾಧಿರ್ಯಹೀನಾ ಚಪಲಾ ಕಂಥಾ ಮಧುರಭಾಷಿಣೀ ।
ದೂಷಣೈರ್ದಶಭಿರ್ಹೀನಾ ವೇದೋಕ್ತವಿಧಿನಾ ನರೈಃ ॥
ವಿವಾಹಿತಾ ಚ ಸಾ ಪತ್ನೀ ಗೃಹಿಣೀ ಯಸ್ಯ ಸರ್ವದಾ ।...
ಪುಣ್ಯಕಾರ್ಯೇಷು ಸರ್ವೇಷು ಪ್ರಥಮಂ ಸಾ ಪ್ರಕೀರ್ತಿತಾ ।
ತಯಾ ಸುವಿಹಿತೋ ಧರ್ಮಃ ಸಂಪೂರ್ಣಫಲದಾಯಕಃ । -ಸ್ಕಂದಪುರಾಣ(೬/೨೪೧/೮-೧೨)

ವರ ಇತ್ಯಾದಿ ಕಾರಣಗಳಿಂದ ದುಷ್ಟಸ್ತ್ರೀಯರಿಗೂ ರೂಪ ಉಂಟಾಗುವ ಸಾಧ್ಯತೆ ಇರುವುದು. ಆದರೆ ಸಹಜಲಕ್ಷಣಗಳಿಂದ ಕೂಡಿದ ರೂಪ ಮಾತ್ರ ಸಹಜವಾದ ಗುಣವತಿಯರಿಗೆ ಮಾತ್ರ ಬರುವುದು ಎಂಬ ವಿಶೇಷಾಂಶ ಶಾಸ್ತ್ರಗಳಲ್ಲಿದೆ[೧].

ಕನ್ಯೆಯಲ್ಲಿ ಅಪೇಕ್ಷಿತವಾದ ಅತ್ಯಂತ ಮುಖ್ಯವಾದ ಗುಣಗಳು ವಿಶೇಷವಾದ ದೈವಭಕ್ತಿ ಗುರುಹಿರಿಯರಲ್ಲಿ ಆದರ, ಅತ್ತೆಮಾವಂದಿರನ್ನು ಗೌರವದಿಂದ ಕಾಣುವ ಮನೋಭಾವ, ಗಂಡನ ಮನೆಯವರಲ್ಲಿ ಆತ್ಮೀಯತೆ, ಮಿತವಾದ ಹಿತವಾದ ಮೃದುವಾದ ಮಾತುಗಾರಿಕೆ[೨] ಹಾಗೂ ಕಷ್ಟಸಹಿಷ್ಣುತೆ ಎಂದು ತಿಳಿಯಬೇಕು.

ಅದರಂತೆ ಅಣ್ಣತಮ್ಮಂದಿರಿಲ್ಲದ ಮನೆಯ ಕನ್ಯೆಯೂ ಸಹ ಅಷ್ಟು ಉಚಿತವಲ್ಲ. ಮುಂದೆ ಮಾವನಾದವನು ಇವನ ಮಗನನ್ನು ತನ್ನ ಮಗನನ್ನಾಗಿ ಸ್ವೀಕರಿಸುವ ಪುತ್ರಿಕಾಧರ್ಮದ ಪ್ರಸಕ್ತಿ ಇದಕ್ಕೆ ಕಾರಣ. ಅದರಂತೆ ಸವರ್ಣಕನ್ಯೆಯೊಂದಿಗೆ ವಿವಾಹ ಹೆಚ್ಚು ಪ್ರಶಸ್ತ. ಇಲ್ಲವಾದಲ್ಲಿ ಭಗವದ್ಗೀತೆಯಲ್ಲಿ ಪ್ರಸ್ತಾಪಿತವಾದ ವರ್ಣಸಾಂಕರ್ಯದ ಪ್ರಸಕ್ತಿ ಒದಗುವ [೩]ಅಪಾಯವಿದೆ.

ಇಂದು ಸವರ್ಣವಿವಾಹಗಳು ಕ್ರಮವಾಗಿ ವಿರಳವಾಗುತ್ತಿವೆ ಎಂಬುದು ಗಮನಾರ್ಹ. ಅದಕ್ಕೆ ಪೋಷಕವಾದ ಪರಿಸರ ಮೊದಲಾದವುಗಳು ಹೆಚ್ಚುತ್ತಿವೆ. ಗಂಡು-ಹೆಣ್ಣು ಎಂಬ ಪರಿಕಲ್ಪನೆಯಷ್ಟೇ ಸಾಕು, ವರ್ಣಚಿಂತನೆ ಅನಗತ್ಯ ಎಂಬ ವಾದ ಮೇಲ್ನೋಟಕ್ಕೆ ರಮಣೀಯ ಎನ್ನಿಸುವುದು. ಆದರೆ ವಿವಾಹ ಒಂದು ವರ್ಣದ ಸಂರಕ್ಷಣೆಯಾಗಿಯೂ ಸಹ ಪ್ರಾಚೀನಸಂಸ್ಕೃತಿಯಲ್ಲಿ ವಿಹಿತವಾಗಿದೆ. ಎಂದರೆ ಆಯಾವರ್ಣದಿಂದ ಲಭಿಸುವ

---

೧. ಯತ್ರ ರೂಪಂ ತತ್ರ ಗುಣಾಃ ಭಕ್ತ್ಯಾದ್ಯಾಃ ಸ್ತ್ರೀಷು ನಿತ್ಯಶಃ ।
ರೂಪಂ ಹಿ ಸ್ಥೂಲದೃಷ್ಟೀನಾಂ ದೃಶ್ಯಂ ವ್ಯಕ್ತಂ ತತೋ ಹಿ ತತ್ ॥
ಪ್ರಾಯೋ ವೇತ್ತುಂ ನ ಶಕ್ಯಂತೇ ಭಕ್ತ್ಯಾದ್ಯಾಃ ಸ್ತ್ರೀಷು ಯತ್ ತತಃ ।
ಯಾಸಾಂ ರೂಪಂ ಗುಣಾಸ್ತಾಸಾಂ ಭಕ್ತ್ಯಾದ್ಯಾ ಇತಿ ನಿಶ್ಚಯಃ ॥
ತಚ್ಚ ನೈಸರ್ಗಿಕಂ ರೂಪಂ ದ್ವಾತ್ರಿಂಶಲ್ಲಕ್ಷಣೈರ್ಯುತಮ್ ।
ನಾಲಕ್ಷಣಂ ವಪುರ್ಮಾತ್ರಂ ಗುಣಹೇತುಃ ಕಥಂಚನ ॥ -ಮ.ಭಾ.ತಾ.ನಿ.(೨/೩೬-೩೮)

೨. ವಾಚಾಲತಾ ನಾತಿತರಾಂ ಹಿ ಶೋಭತೇ ಸ್ತ್ರೀಣಾಮ್ । -ಮ.ಭಾ.ತಾ.ನಿ.(೨೨/೭೫)

೩. ಅಧರ್ಮಾಭಿಭವಾತ್ ಕೃಷ್ಣ ಪ್ರದುಷ್ಯಂತಿ ಕುಲಸ್ತ್ರಿಯಃ ।
ಸ್ತ್ರೀಷು ದುಷ್ಟಾಸು ವಾರ್ಷ್ಣೇಯ ಜಾಯತೇ ವರ್ಣಸಂಕರಃ ॥
ಸಂಕರೋ ನರಕಾಯೈವ ಕುಲಘ್ನಾನಾಂ ಕುಲಸ್ಯ ಚ ।
ಪತಂತಿ ಪಿತರೋ ಹ್ಯೇಷಾ ಲುಪ್ತಪಿಂಡೋದಕಕ್ರಿಯಾಃ ॥
ದೋಷೈರೇತೈಃ ಕುಲಘ್ನಾನಾಂ ವರ್ಣಸಂಕರಕಾರಕೈಃ ।
ಉತ್ಸಾದ್ಯಂತೇ ಜಾತಿಧರ್ಮಾಃ ಕುಲಧರ್ಮಾಶ್ಚ ಶಾಶ್ವತಾಃ ॥
ಉತ್ಸನ್ನಕುಲಧರ್ಮಾಣಾಂ ಮನುಷ್ಯಾಣಾಂ ಜನಾರ್ದನ ।
ನರಕೇ ನಿಯತಂ ವಾಸೋ ಭವತೀತ್ಯನುಶುಶ್ರುಮ ॥ -ಗೀ.(೧/೪೧-೪೪)

ಪೂರ್ಣಪ್ರಯೋಜನ ವರ್ಣಶುದ್ಧಿಯನ್ನು ಅವಲಂಬಿಸಿರುವುದು. ಧಾನ್ಯಗಳಲ್ಲಿ ಶುದ್ಧ-ತಳಿಯ ಧಾನ್ಯಗಳು, ಗೋವುಗಳಲ್ಲಿ ದೇಶೀತಳಿಯ ಗೋವುಗಳು, ಮರಗಿಡಗಳಲ್ಲೂ ಶುದ್ಧತಳಿಯ ಮರಗಿಡಗಳು ಹೊಂದಿರುವ ವಿಶೇಷತೆಯನ್ನು ಸಾಂಕರ್ಯದ ತಳಿಗಳಲ್ಲಿ ನಿರೀಕ್ಷಿಸಲು ಸಾಧ್ಯವಿಲ್ಲ ಎಂಬುದು ಆ ಬಗ್ಗೆ ನಡೆದಿರುವ ಪ್ರಯೋಗಗಳಿಂದ ಸ್ಫುಟಪಟ್ಟಿದೆ. ಇದು ಮಾನವವರ್ಗಕ್ಕೂ ಅನ್ವಯಿಸುವ ವಿಚಾರ ಎಂಬುದು ಪ್ರಾಚೀನರ ಪರಿಕಲ್ಪನೆ. ಸಾಧನೆಯೊಂದಿಗೆ ಗಳಿಸುವ ನೈಪುಣ್ಯದಂತೆ ಜನ್ಮಕ್ರಮದಲ್ಲಿ ಗಳಿಸುವ ನೈಪುಣ್ಯವೂ ಸಹ ಗಮನಾರ್ಹವಾದುದು; ಎಂದರೆ ರಕ್ತಗತವಾಗಿಯೇ ಬರುವ ಆಯಾ ವರ್ಣದ ಗುಣಗಳು ಸಾಧನೆಗೆ ಹೆಚ್ಚಿನ ಪ್ರಮಾಣದಲ್ಲಿ ನೆರವಾಗುವುದು ಸಹಜ ಎಂಬುದು ಇದರ ಹಿನ್ನೆಲೆ.

ಅನೇಕ ಗುಡ್ಡಗಾಡಿನ ಸಂಸ್ಕೃತಿಗಳೂ ಸಹ ನಶಿಸಕೂಡದು ಎಂಬ ವಾದ ಇಂದು ಹೆಚ್ಚು ಜನಪ್ರಿಯ. ಅದರಲ್ಲಿ ಅರ್ಥವಿದೆ ಎಂಬುದು ಸಹ ನಿಜ. ಈ ಪರಿಕಲ್ಪನೆಯನ್ನು ಶುದ್ಧವರ್ಣದ ಸಂರಕ್ಷಣೆಗೂ ಅನ್ವಯಿಸುವಲ್ಲಿ ಹೆಚ್ಚಿನ ವಿವೇಕವಿದೆ. ಅಪವಾದ-ವೆನ್ನಿಸುವಂತೆ ಕೇವಲ ಸಾಧನೆಯಿಂದ ಅಪ್ರತಿಮವಾದ ಸಿದ್ಧಿಯನ್ನು ಗಳಿಸಲು ಸಾಧ್ಯವಿದೆ ಎಂಬುದು ಕೆಲವು ಪ್ರಸಂಗಗಳಲ್ಲಿ ದೃಢಪಟ್ಟಿರುವುದು ನಿಜ; ಆದರೆ ಹೆಚ್ಚಿನ ಪ್ರಸಂಗಗಳಲ್ಲಿ ಆನುವಂಶಿಕತೆಯು ತನ್ನದೇ ಆದ ಪಾತ್ರವನ್ನು ವಹಿಸುವುದು ನಿಶ್ಚಿತ. ಮಧುಮೇಹ ಮೊದಲಾದ ಅನೇಕ ರೋಗರುಜಿನಗಳಲ್ಲಿ ಆನುವಂಶಿಕತೆಯ ಪಾತ್ರ ವೈದ್ಯಕೀಯ ಶಾಸ್ತ್ರದ ಹಿನ್ನೆಲೆಯಲ್ಲಿ ದೃಢಪಟ್ಟಿದೆ. ಇದನ್ನು ಗಮನಿಸಿ, ಕೇವಲ ಶಾಸ್ತ್ರಾಣೆಯ ಆದೇಶ ಎಂದು ಮಾತ್ರವಲ್ಲದೆ, ಶುದ್ಧವರ್ಣದ ಸಂರಕ್ಷಣೆಯ ವಿಚಾರದಿಂದಲಾದರೂ ಸವರ್ಣೀಯ-ವಿವಾಹಕ್ಕೆ ಒಂದು ಬಗೆಯ ಮಹತ್ತ್ವವಿರುವುದನ್ನು ಅಲ್ಲಗಳೆಯಲು ಸಾಧ್ಯವಿಲ್ಲ.

ಆಯುಷ್ಯ, ಆರೋಗ್ಯಗಳು ಸಹ ವಂಶವಾಹಿನಿಯಿಂದ ನಿಯಂತ್ರಿತ ಎಂಬುದು ವೈಜ್ಞಾನಿಕ ಸಂಶೋಧನೆಗಳಿಂದ ಸಿದ್ಧವಾಗಿರುವ ವಿಚಾರ. ಮಧುಮೇಹ ಮೊದಲಾದ ಅನೇಕ ರೋಗಗಳು ವಂಶಪಾರಂಪರ್ಯವಾಗಿ ಮುಂದುವರೆಯುವುದು ಸಹ ದೃಢಪಟ್ಟಿರುವ ವಿವರ. ಅದರಂತೆ ಗುಣ, ಸಂಸ್ಕಾರ ಮೊದಲಾದವುಗಳು ಸಹ ವಂಶಪಾರಂಪರ್ಯವಾಗಿ ಮುಂದುವರೆಯುವುದು ನಿಶ್ಚಿತ. ಇದರಲ್ಲಿ ಸ್ವಪ್ರಯತ್ನದಂತೆ [೧]ಪರಂಪರೆಯ ಕಾಣಿಕೆಯು ಇದ್ದೇ ಇರುವುದು ಎಂಬುದನ್ನು ಮರೆಯುವಂತಿಲ್ಲ. ಆದ್ದರಿಂದ ಸಂಸ್ಕೃತಿಯ ಉಳಿವಿಗಾಗಿ ಸಹ ಸವರ್ಣೀಯವಿವಾಹ ಕಾಲಬಾಧಿತ- ವಾಗದು ಎಂಬುದನ್ನು ಮನಗಾಣಬಹುದು[೨].

---

೧. ಗುಣಾಸ್ತು ಕಾಲಾತ್ ಪಿತೃಮಾತೃದೋಷಾತ್ ಸ್ವಕರ್ಮತೋ ವಾಽಭಿಭವಂ ಪ್ರಯಾಂತಿ।
- ಮ.ಭಾ.ಶಾ.ನಿ.(೩/೩೦)

೨. ವಿವಾಹವಿಧಿನೋಢಾ ಪಿತೃದೇವಾರ್ಥಸಾಧಿನೀ।
ಸುಲಕ್ಷಣಾ ವಿನೀತಾ ಯಾ ವಿವೇಕಾದಿ ಗುಣಾ ಶುಭಾ॥

# ವರನ ಅರ್ಹತೆ

ಕನ್ಯೆಯಂತೆ ವರನೂ ಸಹ ವಿಶೇಷವಾದ ಅರ್ಹತೆಯನ್ನು ಹೊಂದಿರಬೇಕಾದ್ದು ಕಡ್ಡಾಯ. ಸಾಮಾನ್ಯವಾಗಿ [೧]ವರನು ೨೧ರ ಬಳಿಕ ವಿವಾಹಕ್ಕೆ ಅರ್ಹತೆಯನ್ನು ಪಡೆಯುವನು ಎಂಬುದು ಮಹಾಭಾರತದ ವಚನ. ಇದು ಆಧುನಿಕ ಕಾನೂನಿಗೂ ಅನ್ವಯಿಸುವ ವಿಚಾರ ಎಂಬುದೂ ಗಮನಾರ್ಹ.

ಕುಲಂ ಚ ಶೀಲಂ ಚ ವಪುರ್ವಯಶ್ಚ ವಿದ್ಯಾಂ ಚ ವಿತ್ತಂ ಚ ಸನಾತನಾಂ ಚ।
ಏತಾನ್ ಗುಣಾನ್ ಸಪ್ತ ಪರೀಕ್ಷ್ಯ ದೇಯಾ ಕನ್ಯಾಬುಧೈಃ ಶೇಷಮಚಿಂತನೀಯಮ್॥
- ಯಮಸ್ಮೃತಿ

ಕುಲ, ನಡತೆ, ರೂಪ, ವಯಸ್ಸು ವಿದ್ಯೆ, ಸಂಪತ್ತು ಹಾಗೂ ತಂದೆತಾಯಿಗಳ ರಕ್ಷಣೆ ಎಂಬ ಏಳು ಗುಣಗಳನ್ನು ಪರೀಕ್ಷಿಸಿ, ವರನನ್ನು ಆಯ್ಕೆಮಾಡಬೇಕು[೨] ಎಂದು ಭಾವ.

ಶ್ರೀವಾದಿರಾಜಸ್ವಾಮಿಗಳ ರುಗ್ಮಿಣೀಶವಿಜಯದಲ್ಲಿನ ಈ ಕೆಳಗಿನ ಶ್ಲೋಕಗಳಲ್ಲೂ ವರನ ಲಕ್ಷಣಗಳು ಅತ್ಯಂತ ಪರಿಣಾಮಕಾರಿ ರೀತಿಯಲ್ಲಿ ನಿರೂಪಿತವಾಗಿವೆ (೧೬/೩೯,೪೦):

ಉಗ್ರೋಽಯಂ ಸಖಿ ಚಂಚಲೋಽಯಮಮಲೇ ಸೋಽಯಂ ರಮೇ ಗೂಢಪಾತ್
ವೃದ್ಧೋಽಸೌ ಜ್ವಲನೋಽಯಮೇಷ ತಪನಃ ಸದ್ವಕ್ರತುಂಡೋ ಹ್ಯಸೌ।
ಮುಗ್ಧೋಽದಂತಕ ಏಷ ದೇವಿ ಜಲರಾಟ್ ಗೋತ್ರಾಸಹೋಽಸೌ ಕ್ಷಿತಾ-
ವಿತ್ಯಾದ್ಯಾಭಿಧಯೈವ ಧಿಕ್ಕೃತಸುರಾ ಶ್ರೀರಾಸಸಾದಾಚ್ಯುತಮ್॥
ವೇಧಾ ವೈದಿಕಮೌಲಿರೇಷ ಪವನೋ ಮಂತ್ರಂ ಜಪನ್ ಸಂತತಂ
ಶರ್ವೋಽಸೌ ಸುವಿರಕ್ತಧೀಃ ಸ ಮಘವಾ ವ್ಯಾಪಾರಭಾರಾಕುಲಃ।
ಸೂರ್ಯಃ ಪರ್ಯಟನಪ್ರಿಯಃ ಸ ತು ಶಶೀ ದೋಷಾಕರೋಽಸೌ ಸ್ಮರೋಽ-
ನಂಗಶ್ಚೇತ್ಯಖಿಲಾನುಪೇಕ್ಷ್ಯ ಕಮಲಾ ವವ್ರೇ ಯದೂನಾಂ ಪತಿಮ್॥

---

ಸಚ್ಚರಿತ್ರಾ ಪತಿಪರಾ ಸಾ ತೇಭ್ಯೋ ದಾತುಮರ್ಹತಿ।
ವಿಶುದ್ಧಕುಲಜಾ ಕನ್ಯಾ ಧರ್ಮೋಢಾ ಧರ್ಮಚಾರಿಣೀ।
ಸಾ ಪುನಾತಿ ಕುಲಂ ಸರ್ವಂ ಮಾತೃತಃ ಪಿತೃತಸ್ತಥಾ॥ -ಸ್ಕಾಂದಪುರಾಣ(೬/೨೪೧/೩೦-೩೨)

೧. ಅದರಲ್ಲೂ ಕುಲಕ್ಕೆ ಹೆಚ್ಚು ಪ್ರಾಶಸ್ತ್ಯ ಎಂಬುದು ವಿಷ್ಣುಸ್ಮೃತಿಯ ವಚನ:
ಬ್ರಾಹ್ಮಣಸ್ಯ ಕುಲಂ ಗ್ರಾಹ್ಯಂ ನ ವೇದಾಃ ಸಂಪದಃ ಕ್ರಮಾತ್।
ಕನ್ಯಾದಾನೇ ತಥಾ ಶ್ರಾದ್ಧೇ ನ ವಿದ್ಯಾ ತತ್ರ ಕಾರಣಮ್॥
ಬಂಧುಶೀಲಲಕ್ಷಣಸಂಪನ್ನಃ ಶ್ರುತವಾನರೋಗಃ॥ -ಆಪಸ್ತಂಬಸ್ಮೃತಿ
ವಿದ್ಯಾಚಾರಿತ್ರಬಂಧುಶೀಲಸಂಪನ್ನಾಯ ದದ್ಯಾತ್। -ಗೌತಮಸ್ಮೃತಿ
ಕುಲಮಗ್ರೇ ಪರೀಕ್ಷೇತ -ಆಶ್ವಲಾಯನಸ್ಮೃ

೨. ಯಾದೃಗ್ಗುಣೇನ ಭರ್ತ್ರಾ ಸ್ತ್ರೀ ಸಂಯುಜ್ಯೇತ ಯಥಾ ವಿಧಿ।
ತಾದೃಗ್ಗುಣಾ ಸಾ ಭವತಿ ಸಮುದ್ರೇಣೈವ ನಿಮ್ನಗಾ॥ -ಮನುಸ್ಮೃತಿ(೯/೨೨)

ಎಂದರೆ ವರನಾಗುವವನು ಉಗ್ರನಾಗಿರಕೂಡದು, ಚಂಚಲ ಮನಸ್ಕನಾಗಿರಕೂಡದು, ಲಕ್ಷಣವಾದ ಕೈಕಾಲುಗಳನ್ನು ಹೊಂದಿರಬೇಕು, ಹೆಚ್ಚು ವಯಸ್ಸಿನವನಾಗಿರಕೂಡದು ; ಸಿಡುಕಿನ ಸ್ವಭಾವದವನಾಗಿರಕೂಡದು, ಮನಸ್ಸಿಗೆ ನೋವುಂಟುಮಾಡುವವನಾಗಿರಕೂಡದು ; ಲಕ್ಷಣವಾದ ಮುಖ ಹೊಂದಿರಬೇಕು, ದಂತಗಳು ವಿಹಿತರೀತಿಯಲ್ಲಿರಬೇಕು, ವಿವೇಕಿಯಾಗಿರಬೇಕು, [೧]ಸತ್ಕುಲಪ್ರಸೂತನಾಗಿರಬೇಕು ಎಂಬುದಾಗಿದೆ.

ಸಂಗ್ರಹವಾಗಿ ಹೇಳುವುದಾದರೆ ವರನು ಮುಖ್ಯವಾಗಿ ದೈವಭಕ್ತಿಯುಳ್ಳವನು, ಸೌಮ್ಯಸ್ವಭಾವದವನು, ಗುರುಹಿರಿಯರಲ್ಲಿ ಆದರವುಳ್ಳವನು, ತಂದೆತಾಯಿಗಳಲ್ಲಿ ಭಕ್ತಿವುಳ್ಳವನು, ಪರರ ಹಿತದಲ್ಲಿ ಆಸಕ್ತನಾದವನು, ಸ್ವಾರ್ಥವನ್ನು ತೊರೆದವನು ಆಗಿರುವುದು ಅತ್ಯಂತ ಮುಖ್ಯ.

ವರನು ಹೆಚ್ಚೆಂದರೆ ೩೦ವರ್ಷದ ಒಳಗಿರುವುದು ಹೆಚ್ಚು ಅಪೇಕ್ಷಿತ. ಕನ್ಯೆಯಂತೆ ವರನೂ ಸಹ ಸನ್ನಡತೆಯವನೂ, ಉತ್ತಮಸಂಸ್ಕಾರದ ವಂಶದಲ್ಲಿ ಜನಿಸಿದವನೂ, ವಿದ್ಯಾವಂತನೂ, ಕರ್ತವ್ಯಪರಾಯಣನೂ[೨] ಆಗಿರುವುದು ವಿಹಿತ. ಒಟ್ಟಾಗಿ ವಧೂವರರಲ್ಲಿ [೩]ಅನುರೂಪತೆ ಎಂಬುದು ಅತ್ಯಂತ ಪ್ರಮುಖವಾದ ಅಂಶ. ಈ ಅನುರೂಪತೆಯು

---

೧. ಈ ಕೆಳಗಿನ ಪ್ರಸಿದ್ಧ ಸುಭಾಷಿತದಲ್ಲೂ ವಿವಾಹದಲ್ಲಿ ಬಗೆಬಗೆಯ ಜನರಿಗೆ ಪ್ರಿಯವಾದ ವಿಷಯಗಳು ಕೌಶಲಪೂರ್ಣವಾಗಿ ಸಂಗೃಹೀತವಾಗಿವೆ :
ಕನ್ಯಾ ವರಯತೇ ರೂಪಂ ಮಾತಾ ವಿತ್ತಂ ಪಿತಾ ಶ್ರುತಮ್ ।
ಬಾಂಧವಾಃ ಕುಲಮಿಚ್ಛಂತಿ ಮಿಷ್ಟಾನ್ನಮಿತರೇ ಜನಾಃ ॥
ಕನ್ಯೆ ಬಯಸುವುದು ವರನ ರೂಪವನ್ನು ; ತಾಯಿ ಬಯಸುವುದು ಸಂಪತ್ತನ್ನು ; ತಂದೆ ಗಮನಿಸುವುದು ಓದನ್ನು ; ಬಂಧುಗಳ ಚಿತ್ತ ಕುಲದ ಕಡೆಗೆ ; ಇತರ ಜನರಿಗೆ ಮೃಷ್ಟಾನ್ನ ಭೋಜನವಷ್ಟೇ ಪ್ರಿಯ.

೨. ಬಂಧುಲಕ್ಷಣಶೀಲಸಂಪನ್ನಃ ಶ್ರುತವಾನರೋಗಃ ಇತಿ ವರಸಂಪತ್ । -ಆಪಸ್ತಂಬ
ವಿದ್ಯಾಚಾರಿತ್ರ್ಯಬಂಧುಶೀಲಸಂಪನ್ನಾಯ ದದ್ಯಾತ್ । -ಗೌತಮ

ಉನ್ಮತ್ತಃ ಪತಿತಃ ಕುಷ್ಠೀ ತಥಾ ಷಂಡಸ್ಸಗೋತ್ರಜಃ ।
ಚಕ್ಷುಶ್ಶ್ರೋತ್ರವಿಹೀನಶ್ಚ ತಥಾಽಪಸ್ಮಾರದೂಷಿತಃ ॥
ವರದೋಷಾಸ್ಸ್ಮೃತಾ ಹ್ಯೇತೇ ಕನ್ಯಾದೋಷಾಶ್ಚ ಕೀರ್ತಿತಾಃ ।
ದೂರಸ್ಥಾನಾಮವಿದ್ಯಾನಾಂ ಮೋಕ್ಷಮಾರ್ಗಾನುಸಾರಿಣಾಮ್ ।
ಶೂರಾಣಾಂ ನಿರ್ಧನಾನಾಂ ಚ ನ ದೇಯಾ ಕನ್ಯಕಾ ಬುಧೈಃ ॥ -ಕಾತ್ಯಾಯನಸ್ಮೃತಿ

೩. ಸೋದರಮಾವ ಅಥವಾ ಸೋದರತ್ತೆಯ ಮಗಳನ್ನು ವಿವಾಹವಾಗುವ ಬಗ್ಗೆ ಸ್ಮೃತಿಗಳಲ್ಲಿ ಏಕಾಭಿಪ್ರಾಯವಿಲ್ಲ. ಸ್ಮೃತಿಮುಕ್ತಾವಲೀ ಮೊದಲಾದ ಗ್ರಂಥಗಳಲ್ಲಿ ನಿಷೇಧ ವಚನಗಳನ್ನು ಅನ್ಯಪರತಯಾ ಅರ್ಥಮಾಡಿರುವುದುಂಟು. ಇತರ ವಿಷಯಗಳಲ್ಲಿ ಸಂಪೂರ್ಣ ಅನುರೂಪತೆ ಇದ್ದಲ್ಲಿ ಇಂತಹ ವಿವಾಹ ಧರ್ಮಬಾಹಿರವೆನ್ನಿಸದು ಎಂಬುದು ಮತ್ತೊಂದು ಪಕ್ಷ:
ತೃತೀಯಾಂ ಮಾತೃತಃ ಕನ್ಯಾಂ ತೃತೀಯಾಂ ಪಿತೃತಸ್ತಥಾ ।

ವಯಸ್ಸು, ರೂಪ, ಗುಣ, ವಿದ್ಯೆ, ಮೊದಲಾದ ಸಕಲ ವಿಷಯಗಳಿಗೂ ಅನ್ವಯಿಸು-ವಂತಿದ್ದರೆ ಅದು ಅತ್ಯಂತ ಸಮುಚಿತವೆನ್ನಿಸುವುದು:

ಆಪಸ್ತಂಬೋಽಪಿ - ಯಸ್ಯಾಂ ಮನಶ್ಚಕ್ಷುಷೋರ್ನಿರ್ಬಂಧಃ ತಸ್ಯಾಂ ವೃದ್ಧಿಃ ।

-ಸ್ಮೃತಿಚಂದ್ರಿಕಾ

ಎಲ್ಲಕ್ಕಿಂತ ಮುಖ್ಯವಾಗಿ ವಧುವಿಗೆ ವರನೂ, ವರನಿಗೆ ವಧುವೂ 'ಅನುರೂಪ' ಎನ್ನಿಸುವುದು ಮುಖ್ಯ. ಮನೋಘಟನೆ ಎಂದರೆ ಇದೇ. ಅವರಿಬ್ಬರಿಗೂ ಪರಸ್ಪರ ಮೆಚ್ಚುಗೆಯಾದಲ್ಲಿ ಸಗೋತ್ರ, ಸಪ್ರವರ, ಇತ್ಯಾದಿ ಮುಖ್ಯ ದೋಷಗಳು ಇಲ್ಲದಿದ್ದಲ್ಲಿ ಇತರ ಸಂಗತಿಗಳು ಗೌಣವೆನ್ನಿಸುವುವು ಎಂದು ತಿಳಿಯಬಹುದು.

ಸಾಮಾನ್ಯವಾಗಿ ಕನ್ಯೆಗೆ ಪ್ರೌಢಳಾಗುವ ಮುನ್ನವೇ ವಿವಾಹ ಉಚಿತ ಎನ್ನುವುದು ಶಾಸ್ತ್ರಗಳ ಪರಿಕಲ್ಪನೆ. ಅದು ಇಂದು ಕಾಲಬಾಧಿತವಾಗಿರುವುದು ಸರ್ವರಿಗೂ ವೇದ್ಯ. ಹಿಂದೆ ಹೇಳಿದಂತೆ ಶಾಸ್ತ್ರಗಳು ಸಹ ಪ್ರೌಢವಿವಾಹವನ್ನು ಸರ್ವಥಾ ಶಾಸ್ತ್ರವಿರುದ್ಧ ಎಂದೇನೂ ಪ್ರತಿಪಾದಿಸಿಲ್ಲ ಎಂಬುದೂ ಗಮನಿಸಬೇಕಾದ ಸಂಗತಿ. ಕಾಲ ಹಾಗೂ ಕಾನೂನುಗಳಿಗೆ ಅನುಗುಣವಾಗಿ ನಡೆಯುವ ಬದ್ಧತೆ ಪ್ರತಿಯೊಬ್ಬ ನಾಗರಿಕನಿಗೂ ಇರುವುದರಿಂದ ಅದರ ಪಾಲನೆಗೆ ಸಂಕೋಚಪಡುವುದು ಅನಗತ್ಯ. ಕನ್ಯೆ ಪ್ರೌಢಳಾಗುವ ಮುನ್ನವೇ ವಿವಾಹವನ್ನು ವಿಧಿಸುವ ಸ್ಮೃತಿಗಳೂ ಸಹ ಕೂಷ್ಮಾಂಡಮಂತ್ರದ ಹೋಮದಿಂದ ಪ್ರೌಢವಿವಾಹದ ದೋಷವನ್ನು ಪರಿಹರಿಸುವ ಪರಿಹಾರವನ್ನು ನೀಡಿವೆ; ಎಂದಮೇಲೆ

---

ವಿವಾಹಯೇನ್ಮನುಃ ಪ್ರಾಹ ಪಾರಾಶರ್ಯೋ ಅಂಗಿರಾ ಯಮಃ ॥ -ಷಟ್‌ತ್ರಿಂಶನ್ಮತ

ಮಾತುಲಸ್ಯ ಸುತಾಂ ಕೇಚಿತ್ ಪೈತೃಷ್ವಸ್ರುಸುತಾದಿಕಮ್ ।
ಉದ್ವಹಂತಿ ಕ್ವಚಿದ್ದೇಶೇ ಸಂಕೋಚ್ಯಾಪಿ ಸಪಿಂಡತಾಮ್ ॥ -ಸ್ಮೃತಿಸಾರ

ಈ ಬಗ್ಗೆ ಮತ್ತೊಂದು ವಿಶೇಷ ಹೀಗಿದೆ :

ಪಿತೃವ್ಯಭಾರ್ಯಾಭಗಿನೀಂ ತತ್ಸುತಾಂ ಪರಿವರ್ಜಯೇತ್ ।
ಸಾಪತ್ನ್ಯಮಾತೃಭಗಿನೀಂ ತತ್ಸುತಾಂ ಪರಿವರ್ಜಯೇತ್ ॥ -ಸ್ಮೃತಿ

ಏವಂ ಶಿಷ್ಟಾಚಾರೋಽಪಿ ತತ್ರ ಪ್ರಮಾಣಮ್ । ತಥಾಹಿ, ವೇದಾರ್ಥಾನುಷ್ಠಾನರತಾಃ ತ್ರೈವಿದ್ಯವೃದ್ಧಾಃ ದಾಕ್ಷಿಣಾತ್ಯಾಃ ಶಿಷ್ಟಾ ಏವ ಕುರ್ವಂತಿ ಮಾತುಲಸುತಾದಿಪರಿಣಯನಮ್ ।... ಏವಂ ಚ ಶ್ರುತಿಸ್ಮೃತಿಶಿಷ್ಟಾಚಾರೈಃ ಸಿದ್ಧಂ ಮಾತುಲಾಸುತಾಪರಿಣಯನಂ ಇತಿ ಸರ್ವಮನವದ್ಯಮ್ ।

-ಸ್ಮೃತಿಮುಕ್ತಾವಲೀ

ಭೃಗು ಮತ್ತು ಆಂಗೀರಸ ಗೋತ್ರರಿಗೆ ಸಗೋತ್ರ ನಿಷೇಧವಿಲ್ಲ, ಆದರೆ ಸಮಾನಪ್ರವರ ನಿಷೇಧ ಅವರ ಪಕ್ಷದಲ್ಲೂ ಉಂಟು ಎಂಬುದು ವಿಶೇಷ ಎಂಬ ವಚನಗಳೂ ಉಂಟು.

ಏಕ ಏವ ಋಷಿರ್ಯಾವತ್ ಪ್ರವರೇಷ್ವನುವರ್ತತೇ ।
ತಾವತ್ ಸಮಾನಗೋತ್ರತ್ವಮನ್ಯತ್ರಾಂಗೀರಸೋ ಭೃಗೋಃ ॥ -ಬೋಧಾಯನಸ್ಮೃತಿ

ಪಂಚಾನಾಂ ತ್ರಿಷು ಸಾಮಾನ್ಯಾದವಿವಾಹಸ್ತ್ರಿಷು ದ್ವಯೋಃ ।
ಭೃಗ್ವಂಗಿರೋ ಗಣೇಷ್ವೇವ ಶೇಷೇಷ್ವೇಕೋಽಪಿ ವಾರಯೇತ್ ॥ -ಸಂಗ್ರಹಕಾರಃ

ಅನಗತ್ಯವಾಗಿ ಬಾಲ್ಯವಿವಾಹವನ್ನು ಗುಟ್ಟಾಗಿ ಮಾಡುವ ಪ್ರವೃತ್ತಿ ವಿವೇಕವೆನ್ನಿಸದು. ಅನುರೂಪನಾದ ವರ ದೊರೆಯದಿದ್ದಲ್ಲಿ ಜೀವನಪೂರ್ತಿಯಾಗಿ ಕನ್ಯೆಯಾಗಿಯೇ ಉಳಿಯುವುದು ಸಹ ಅಪಚಾರವೇನಲ್ಲ ಎಂಬ ಮನುಸ್ಮೃತಿಯ ಮಾತು ಗುಣಹೀನನಾದ ವರನಿಗೆ ಕನ್ಯೆಯನ್ನು ಧಾರೆಯೆರೆಯಕೂಡದು ಎಂಬ ವಿಶೇಷಾಂಶವನ್ನು ನಿರೂಪಿಸಿದೆ :

**ಕಾಮಮಾಮರಣಾತ್ ತಿಷ್ಠೇತ್ ಗೃಹೇ ಕನ್ಯಾರ್ತುಮತ್ಯಪಿ ।**
**ನ ಚೈವೈನಾಂ ಪ್ರಯಚ್ಛೇತ್ ತು ಗುಣಹೀನಾಯ ಕರ್ಹಿಚಿತ್ ॥**

ಇದು ಕನ್ಯೆಗೆ ವಿವಾಹನಿಷೇಧದ ವಿಧಿಯಾಗಿರದೆ ವರನು ಮಾತ್ರ ಅನುರೂಪ-ನಾಗಿರಲೇ ಬೇಕು ಎಂಬ ಅಂಶಕ್ಕೆ ಒತ್ತು ಕೊಡುವ ವಿಚಾರ.

ಕನ್ಯಾಪ್ರಾಪ್ತಿಗಾಗಿ ವರನ ಕಡೆಯವರು ಮುಂದಾಗಬೇಕೋ ಅಥವಾ ವರಪ್ರಾಪ್ತಿಗಾಗಿ ಕನ್ಯೆಯ ಕಡೆಯವರು ಮುಂದಾಗಬೇಕೋ ಎಂಬುದು ಮತ್ತೊಂದು ಗೊಂದಲ. ಇದರಲ್ಲಿಯೂ ಮುಖ್ಯವಾಗಿ ಪ್ರತಿಷ್ಠೆಗೆ ಆದ್ಯತೆ. ಲೋಕರೂಢಿಯಂತೆ ಇಂದಿನ ದಿನದಲ್ಲಿ ಕನ್ಯೆಯ ಕಡೆಯವರೇ ಮುಂದಾಗುವುದು ಕಂಡುಬರುತ್ತಿದೆ. ವರನ ಕಡೆಯವರು ಮುಂದಾಗುವುದು ಅವರ ಹಿರಿಮೆಗೆ ಧಕ್ಕೆ ಉಂಟುಮಾಡುವುದು ಎಂಬ ಭಾವನೆ ಹೆಚ್ಚಿನ ಜನರಲ್ಲಿ ಇದೆ. ಆದರೆ ವಸ್ತುಸ್ಥಿತಿ ಅದಲ್ಲ. ಯೋಗ್ಯವರನ ಅನ್ವೇಷಣೆ ಕನ್ಯಾಪಿತೃಗಳ ಕರ್ತವ್ಯವೆನ್ನಿಸಿರುವಂತೆ ಯೋಗ್ಯ ಕನ್ಯೆಯ ಅನ್ವೇಷಣೆ ವರನ ಕಡೆಯವರ ಕರ್ತವ್ಯವೂ ಆಗಿದೆ. ಇದರಲ್ಲಿ ಯಾರು ಮುಂದಾಗಬೇಕು ಎಂಬ ಪ್ರಶ್ನೆ ಗೌಣ. ಸಂದರ್ಭಕ್ಕನುಗುಣವಾಗಿ ಯಾರು ಮುಂದಾದರೂ ಸರಿಯೇ. ರಾಘವೇಂದ್ರವಿಜಯವು ದಾಖಲಿಸಿರುವ ಪ್ರಸಂಗ ಇಲ್ಲಿ ಉಲ್ಲೇಖನಾರ್ಹ :

**ಕೃತೋಪನೀತೇಃ ಸುಕೃತಾಕೃತೇರಯಂ ಸುತಸ್ಯ ವೈವಾಹಿಕಶೋಭನೋದಯಮ್ ।**
**ಚಿಕೀರ್ಷುರಾಗಾತ್ ಕಿಲ ಯತ್ರ ಸಂಸ್ಥಿತೌ ಸುತಾವಿವಾಹೋತ್ಸವಕಾರಿದಂಪತೀ ॥**
**ಸಮಾಗತಂ ಸದ್ಮ ಸುತೋಚಿತಂ ವರಂ ಸ್ವಕೀಯವಂಶಾನುಗುಣಾನ್ವಯೋದ್ಭವಮ್ ।**
**ಸುತಾಕರಂ ಗ್ರಾಹಯತಿ ಸ್ಮ ಮಾನ್ಯಧೀರಪೂಜಯತ್ ತತ್ಪಿತರೌ ಸಬಾಂಧವೌ ॥**

-ರಾಘವೇಂದ್ರವಿಜಯ(೪/೫,೬)

ತಿಮ್ಮಣ್ಣಭಟ್ಟರ ಹಿರಿಯ ಮಗಳು ವೆಂಕಮ್ಮ ; ಅವರ ಗುಣಗಳ ಬಗ್ಗೆ ಕೇಳಿ ಆಸಕ್ತಿ ಹೊಂದಿದ ವರನ ಕಡೆಯವರು ಮಧುರೆಯವರು, ಅಂತಹ ಗುಣವತಿಯಾದ ಕನ್ಯೆ ತಮ್ಮ ಪುತ್ರ ಲಕ್ಷ್ಮೀನರಸಿಂಹ ಆಚಾರ್ಯರಿಗೆ ಅಗತ್ಯವೆಂದು ಭಾವಿಸಿ[೧], ವರನ

---

೧. ಅದರ ಫಲವಾಗಿ ಮುಂದೆ ಆನಂದತೀರ್ಥಾಚಾರ್ಯ ಹಾಗೂ ನಾರಾಯಣಾಚಾರ್ಯ ಎಂಬ ಇಬ್ಬರು ಸತ್ಪುತ್ರರನ್ನು ಪಡೆಯುವ ಭಾಗ್ಯ ಲಕ್ಷ್ಮೀನರಸಿಂಹಾಚಾರ್ಯರದಾಯಿತು. ಇವರ ಪೈಕಿ, ಆನಂದತೀರ್ಥಾಚಾರ್ಯರು ಸುಮಧ್ವವಿಜಯಕ್ಕೆ ಅಪೂರ್ವ ವ್ಯಾಖ್ಯಾನವನ್ನು ರಚಿಸಿದ ಹಿರಿಮೆಗೆ ಪಾತ್ರರಾದರೆ ನಾರಾಯಣಾಚಾರ್ಯರು ಕಲಿಯುಗದ ಕಲ್ಪವೃಕ್ಷ ಕಾಮಧೇನುಎನ್ನಿಸಿದ

ವಯಸ್ಸು, ರೂಪ, ಗುಣ, ವಿದ್ಯೆ, ಮೊದಲಾದ ಸಕಲ ವಿಷಯಗಳಿಗೂ ಅನ್ವಯಿಸು-ವಂತಿದ್ದರೆ ಅದು ಅತ್ಯಂತ ಸಮುಚಿತವೆನ್ನಿಸುವುದು:

ಆಪಸ್ತಂಬೋಽಪಿ - ಯಸ್ಯಾಂ ಮನಶ್ಚಕ್ಷುಷೋರ್ನಿರ್ಬಂಧಃ ತಸ್ಯಾಂ ವೃದ್ಧಿಃ ।

-ಸ್ಮೃತಿಚಂದ್ರಿಕಾ

ಎಲ್ಲಕ್ಕಿಂತ ಮುಖ್ಯವಾಗಿ ವಧುವಿಗೆ ವರನೂ, ವರನಿಗೆ ವಧುವೂ 'ಅನುರೂಪ' ಎನ್ನಿಸುವುದು ಮುಖ್ಯ. ಮನೋಘಟನೆ ಎಂದರೆ ಇದೇ. ಅವರಿಬ್ಬರಿಗೂ ಪರಸ್ಪರ ಮೆಚ್ಚುಗೆಯಾದಲ್ಲಿ ಸಗೋತ್ರ, ಸಪ್ರವರ, ಇತ್ಯಾದಿ ಮುಖ್ಯ ದೋಷಗಳು ಇಲ್ಲದಿದ್ದಲ್ಲಿ ಇತರ ಸಂಗತಿಗಳು ಗೌಣವೆನ್ನಿಸುವುವು ಎಂದು ತಿಳಿಯಬಹುದು.

ಸಾಮಾನ್ಯವಾಗಿ ಕನ್ಯೆಗೆ ಪ್ರೌಢಳಾಗುವ ಮುನ್ನವೇ ವಿವಾಹ ಉಚಿತ ಎನ್ನುವುದು ಶಾಸ್ತ್ರಗಳ ಪರಿಕಲ್ಪನೆ. ಅದು ಇಂದು ಕಾಲಬಾಧಿತವಾಗಿರುವುದು ಸರ್ವರಿಗೂ ವೇದ್ಯ. ಹಿಂದೆ ಹೇಳಿದಂತೆ ಶಾಸ್ತ್ರಗಳು ಸಹ ಪ್ರೌಢವಿವಾಹವನ್ನು ಸರ್ವಥಾ ಶಾಸ್ತ್ರವಿರುದ್ಧ ಎಂದೇನೂ ಪ್ರತಿಪಾದಿಸಿಲ್ಲ ಎಂಬುದೂ ಗಮನಿಸಬೇಕಾದ ಸಂಗತಿ. ಕಾಲ ಹಾಗೂ ಕಾನೂನುಗಳಿಗೆ ಅನುಗುಣವಾಗಿ ನಡೆಯುವ ಬದ್ಧತೆ ಪ್ರತಿಯೊಬ್ಬ ನಾಗರಿಕನಿಗೂ ಇರುವುದರಿಂದ ಅದರ ಪಾಲನೆಗೆ ಸಂಕೋಚಪಡುವುದು ಅನಗತ್ಯ. ಕನ್ಯೆ ಪ್ರೌಢಳಾಗುವ ಮುನ್ನವೇ ವಿವಾಹವನ್ನು ವಿಧಿಸುವ ಸ್ಮೃತಿಗಳೂ ಸಹ ಕೂಷ್ಮಾಂಡಮಂತ್ರದ ಹೋಮದಿಂದ ಪ್ರೌಢವಿವಾಹದ ದೋಷವನ್ನು ಪರಿಹರಿಸುವ ಪರಿಹಾರವನ್ನು ನೀಡಿವೆ; ಎಂದಮೇಲೆ

---

ವಿವಾಹಯೇನ್ಮನುಃ ಪ್ರಾಹ ಪಾರಾಶರ್ಯೋ ಅಂಗಿರಾ ಯಮಃ ॥ -ಷಟ್‌ತ್ರಿಂಶನ್ಮತ

ಮಾತುಲಸ್ಯ ಸುತಾಂ ಕೇಚಿತ್ ಪೈತೃಷ್ವಸ್ರುಸುತಾದಿಕಮ್ ।
ಉದ್ವಹಂತಿ ಕ್ವಚಿದ್ದೇಶೇ ಸಂಕೋಚ್ಯಾಪಿ ಸಪಿಂಡತಾಮ್ ॥ -ಸ್ಮೃತಿಸಾರ

ಈ ಬಗ್ಗೆ ಮತ್ತೊಂದು ವಿಶೇಷ ಹೀಗಿದೆ :

ಪಿತೃವ್ಯಭಾರ್ಯಾಭಗಿನೀಂ ತತ್ಸುತಾಂ ಪರಿವರ್ಜಯೇತ್ ।
ಸಾಪತ್ನ್ಯಮಾತೃಭಗಿನೀಂ ತತ್ಸುತಾಂ ಪರಿವರ್ಜಯೇತ್ ॥ -ಸ್ಮೃತಿ

ಏವಂ ಶಿಷ್ಟಾಚಾರೋಽಪಿ ತತ್ರ ಪ್ರಮಾಣಮ್ । ತಥಾಹಿ, ವೇದಾರ್ಥಾನುಷ್ಠಾನರತಾಃ ತ್ರೈವಿದ್ಯವೃದ್ಧಾಃ ದಾಕ್ಷಿಣಾತ್ಯಾಃ ಶಿಷ್ಟಾ ಏವ ಕುರ್ವಂತಿ ಮಾತುಲಸುತಾದಿಪರಿಣಯನಮ್ ।... ಏವಂ ಚ ಶ್ರುತಿಸ್ಮೃತಿಶಿಷ್ಟಾಚಾರೈಃ ಸಿದ್ಧಂ ಮಾತುಲಾಸುತಾಪರಿಣಯನಂ ಇತಿ ಸರ್ವಮನವದ್ಯಮ್ ।

-ಸ್ಮೃತಿಮುಕ್ತಾವಲೀ

ಭೃಗು ಮತ್ತು ಆಂಗೀರಸ ಗೋತ್ರರಿಗೆ ಸಗೋತ್ರ ನಿಷೇಧವಿಲ್ಲ. ಆದರೆ ಸಮಾನಪ್ರವರ ನಿಷೇಧ ಅವರ ಪಕ್ಷದಲ್ಲೂ ಉಂಟು ಎಂಬುದು ವಿಶೇಷ ಎಂಬ ವಚನಗಳೂ ಉಂಟು.

ಏಕ ಏವ ಋಷಿರ್ಯಾವತ್ ಪ್ರವರೇಷ್ವನುವರ್ತತೇ ।
ತಾವತ್ ಸಮಾನಗೋತ್ರತ್ವಮನ್ಯತ್ರಾಂಗೀರಸೋ ಭೃಗೋಃ ॥ -ಬೋಧಾಯನಸ್ಮೃತಿ

ಪಂಚಾನಾಂ ತ್ರಿಷು ಸಾಮಾನ್ಯಾದವಿವಾಹಸ್ತ್ರಿಷು ದ್ವಯೋಃ ।
ಭೃಗ್ವಂಗಿರೋ ಗಣೇಷ್ವೇವ ಶೇಷೇಷ್ವೇಕೋಽಪಿ ವಾರಯೇತ್ ॥ -ಸಂಗ್ರಹಕಾರಃ

ಅನಗತ್ಯವಾಗಿ ಬಾಲ್ಯವಿವಾಹವನ್ನು ಗುಟ್ಟಾಗಿ ಮಾಡುವ ಪ್ರವೃತ್ತಿ ವಿವೇಕವೆನ್ನಿಸದು. ಅನುರೂಪನಾದ ವರ ದೊರೆಯದಿದ್ದಲ್ಲಿ ಜೀವನಪೂರ್ತಿಯಾಗಿ ಕನ್ಯೆಯಾಗಿಯೇ ಉಳಿಯುವುದು ಸಹ ಅಪಚಾರವೇನಲ್ಲ ಎಂಬ ಮನುಸ್ಮೃತಿಯ ಮಾತು ಗುಣಹೀನನಾದ ವರನಿಗೆ ಕನ್ಯೆಯನ್ನು ಧಾರೆಯೆರೆಯಕೂಡದು ಎಂಬ ವಿಶೇಷಾಂಶವನ್ನು ನಿರೂಪಿಸಿದೆ :

> ಕಾಮಮಾಮರಣಾತ್ ತಿಷ್ಠೇತ್ ಗೃಹೇ ಕನ್ಯಾರ್ತುಮತ್ಯಪಿ ।
> ನ ಚೈವೈನಾಂ ಪ್ರಯಚ್ಛೇತ್ ತು ಗುಣಹೀನಾಯ ಕರ್ಹಿಚಿತ್ ॥

ಇದು ಕನ್ಯೆಗೆ ವಿವಾಹನಿಷೇಧದ ವಿಧಿಯಾಗಿರದೆ ವರನು ಮಾತ್ರ ಅನುರೂಪನಾಗಿರಲೇ ಬೇಕು ಎಂಬ ಅಂಶಕ್ಕೆ ಒತ್ತು ಕೊಡುವ ವಿಚಾರ.

ಕನ್ಯಾಪ್ರಾಪ್ತಿಗಾಗಿ ವರನ ಕಡೆಯವರು ಮುಂದಾಗಬೇಕೋ ಅಥವಾ ವರಪ್ರಾಪ್ತಿಗಾಗಿ ಕನ್ಯೆಯ ಕಡೆಯವರು ಮುಂದಾಗಬೇಕೋ ಎಂಬುದು ಮತ್ತೊಂದು ಗೊಂದಲ. ಇದರಲ್ಲಿಯೂ ಮುಖ್ಯವಾಗಿ ಪ್ರತಿಷ್ಠೆಗೆ ಆದ್ಯತೆ. ಲೋಕರೂಢಿಯಂತೆ ಇಂದಿನ ದಿನದಲ್ಲಿ ಕನ್ಯೆಯ ಕಡೆಯವರೇ ಮುಂದಾಗುವುದು ಕಂಡುಬರುತ್ತಿದೆ. ವರನ ಕಡೆಯವರು ಮುಂದಾಗುವುದು ಅವರ ಹಿರಿಮೆಗೆ ಧಕ್ಕೆ ಉಂಟುಮಾಡುವುದು ಎಂಬ ಭಾವನೆ ಹೆಚ್ಚಿನ ಜನರಲ್ಲಿ ಇದೆ. ಆದರೆ ವಸ್ತುಸ್ಥಿತಿ ಅದಲ್ಲ. ಯೋಗ್ಯವರನ ಅನ್ವೇಷಣೆ ಕನ್ಯಾಪಿತೃಗಳ ಕರ್ತವ್ಯವೆನ್ನಿಸಿರುವಂತೆ ಯೋಗ್ಯ ಕನ್ಯೆಯ ಅನ್ವೇಷಣೆ ವರನ ಕಡೆಯವರ ಕರ್ತವ್ಯವೂ ಆಗಿದೆ. ಇದರಲ್ಲಿ ಯಾರು ಮುಂದಾಗಬೇಕು ಎಂಬ ಪ್ರಶ್ನೆ ಗೌಣ. ಸಂದರ್ಭಕ್ಕನುಗುಣವಾಗಿ ಯಾರು ಮುಂದಾದರೂ ಸರಿಯೇ. ರಾಘವೇಂದ್ರವಿಜಯವು ದಾಖಲಿಸಿರುವ ಪ್ರಸಂಗ ಇಲ್ಲಿ ಉಲ್ಲೇಖನಾರ್ಹ :

> ಕೃತೋಪನೀತೇಃ ಸುಕೃತಾಕೃತೇರಯಂ ಸುತಸ್ಯ ವೈವಾಹಿಕಶೋಭನೋದಯಮ್ ।
> ಚಿಕೀರ್ಷುರಾಗಾತ್ ಕಿಲ ಯತ್ರ ಸಂಸ್ಥಿತೌ ಸುತಾವಿವಾಹೋತ್ಸವಕಾರಿದಂಪತೀ ॥
> ಸಮಾಗತಂ ಸದ್ಮ ಸುತೋಚಿತಂ ವರಂ ಸ್ವಕೀಯವಂಶಾನುಗುಣಾನ್ವಯೋದ್ಭವಮ್ ।
> ಸುತಾಕರಂ ಗ್ರಾಹಯತಿ ಸ್ಮ ಮಾನ್ಯಧೀರಪೂಜಯತ್ ತತ್ಪಿತರೌ ಸಬಾಂಧವೌ ॥
>
> -ರಾಘವೇಂದ್ರವಿಜಯ(೪/೫,೬)

ತಿಮ್ಮಣ್ಣಭಟ್ಟರ ಹಿರಿಯ ಮಗಳು ವೆಂಕಮ್ಮ; ಅವರ ಗುಣಗಳ ಬಗ್ಗೆ ಕೇಳಿ ಆಸಕ್ತಿ ಹೊಂದಿದ ವರನ ಕಡೆಯವರು ಮಧುರೆಯವರು, ಅಂತಹ ಗುಣವತಿಯಾದ ಕನ್ಯೆ ತಮ್ಮ ಪುತ್ರ ಲಕ್ಷ್ಮೀನರಸಿಂಹ ಆಚಾರ್ಯರಿಗೆ ಅಗತ್ಯವೆಂದು ಭಾವಿಸಿ[೧], ವರನ

---

೧. ಅದರ ಫಲವಾಗಿ ಮುಂದೆ ಆನಂದತೀರ್ಥಾಚಾರ್ಯ ಹಾಗೂ ನಾರಾಯಣಾಚಾರ್ಯ ಎಂಬ ಇಬ್ಬರು ಸತ್ಪುತ್ರರನ್ನು ಪಡೆಯುವ ಭಾಗ್ಯ ಲಕ್ಷ್ಮೀನರಸಿಂಹಾಚಾರ್ಯರದಾಯಿತು. ಇವರ ಪೈಕಿ, ಆನಂದತೀರ್ಥಾಚಾರ್ಯರು ಸುಮಧ್ವವಿಜಯಕ್ಕೆ ಅಪೂರ್ವ ವ್ಯಾಖ್ಯಾನವನ್ನು ರಚಿಸಿದ ಹಿರಿಮೆಗೆ ಪಾತ್ರರಾದರೆ ನಾರಾಯಣಾಚಾರ್ಯರು ಕಲಿಯುಗದ ಕಲ್ಪವೃಕ್ಷ ಕಾಮಧೇನುಎನ್ನಿಸಿದ

ಕಡೆಯವರೇ ಸ್ವತಃ ಕಾವೇರೀಪಟ್ಟಣಕ್ಕೆ ತೆರಳಿ, ತಾವು ಕನ್ಯಾರ್ಥಿಗಳೆಂಬುದನ್ನು ತಿಳಿಸಿ, ವಿವಾಹ ನಿಶ್ಚಯ ಮಾಡಿದ ಅಲ್ಲಿಯ ಘಟನೆ ಅಪೂರ್ವವೆನ್ನಿಸುವುದು.

## ಕನ್ಯಾದಾನದ ಫಲ

ಶಾಸ್ತ್ರೋಕ್ತವಾಗಿ ಕನ್ಯಾದಾನ ಮಾಡುವುದು ಮಹಾಫಲಕ್ಕೆ ಕಾರಣ. ಅದಕ್ಕೆಂದೇ ಷೋಡಶ ಮಹಾದಾನಗಳಲ್ಲಿ ಕನ್ಯಾದಾನವೂ ಒಂದು ಎಂಬುದಾಗಿ ಪರಿಗಣಿತವಾಗಿದೆ. ಅಗ್ನಿಹೋತ್ರ ಮೊದಲಾದ ಇತರ ಯಾವ ಸಾಧನದಿಂದಲೂ ದೊರೆಯದ ಮಹತ್ತರ-ವಾದ ಫಲ[೧] ಕನ್ಯಾದಾನದಿಂದ ಲಭಿಸುವುದು. ವಿಶ್ವಜಿತ್ ಯಾಗಕ್ಕೆ ಸಮನಾದ ದಾನ ಎಂದರೆ ಕನ್ಯಾದಾನ. ಇತರ ದಾನಗಳಿಗಿಂತ ಧೇನುದಾನ, ಅದಕ್ಕಿಂತ ಮಿಗಿಲಾಗಿ ವಾಹನದಾನ, ಅದರಲ್ಲೂ ಅಶ್ವದಾನ ; ಅದಕ್ಕಿಂತ ಮಿಗಿಲಾದುದು ಕನ್ಯಾದಾನ, ಅದು ಭೂಮಿದಾನಕ್ಕೆ ಸಮಾನ. ಹತ್ತುಸಹಸ್ರ ಯಾಗಗಳಿಗಿಂತ ಮಿಗಿಲಾದುದು ಸತ್ಪಾತ್ರರಿಗೆ ನೀಡುವ ಕನ್ಯಾದಾನ; ಬ್ರಹ್ಮಲೋಕಪ್ರಾಪ್ತಿಗೆ ಸಾಧನವೂ ಸಹ ಕನ್ಯಾದಾನ[೨].

---

. ಶ್ರೀರಾಘವೇಂದ್ರಸ್ವಾಮಿಗಳ ದಿವ್ಯ ಜೀವನವನ್ನು ಚಿತ್ರಿಸುವ ಶ್ರೀರಾಘವೇಂದ್ರವಿಜಯ ಎಂಬ ಮಹಾಕಾವ್ಯವನ್ನು ಬರೆದ ವಿದ್ವನ್ಮಣಿಗಳು.

೧. ನಾಗ್ನಿಹೋತ್ರಾದಿಭಿಸ್ತತ್ ಸ್ಯಾದಕ್ಷಯಂ ಬ್ರಾಹ್ಮಣಸ್ಯ ವಾ ।
ಯತ್ಕನ್ಯಾಂ ವಿಧಿವದ್ದತ್ವಾ ಫಲಮಾಪ್ನೋತಿ ಮಾನವಃ ॥ -ಮನುಸ್ಮೃತಿ
ನಾಗ್ನಿಚಿನ್ನರಕಂ ಯಾತಿ ನ ಕನ್ಯಾದೋ ನ ತತ್ಸುತಃ ।
ವಿಶ್ವಜಿತ್ಸಮ್ಮಿತೋ ಯಜ್ಞಃ ಕನ್ಯಾದಾನಂ ಮಹಾಫಲಮ್ ॥ -ಮರೀಚಿಸ್ಮೃತಿ
ಜ್ಯೋತಿಷ್ಟೋಮಾತಿರಾತ್ರಾಣಾಂ ಶತಂ ಶತಗುಣೀಕೃತಮ್ ।
ಪ್ರಾಪ್ನೋತಿ ಕನ್ಯಕಾಂ ದತ್ವಾ ಹೋಮಮಂತ್ರೈಶ್ಚ ಸಂಸ್ಕೃತಾಮ್ ॥ -ಸಂವರ್ತಸ್ಮೃತಿ(೬೩)
ಸಹಸ್ರಸಮ್ಮಿತಾ ಧೇನುರನಡ್ವಾಂದಶ ಧೇನವಃ ।
ದಶಾನಡುತ್ಸಮಂ ಯಾನಂ ದಶಯಾನಸಮೋ ಹಯಃ ॥
ದಶವಾಜಿಸಮಾ ಕನ್ಯಾ ಭೂಮಿದಾನಂ ಚ ತತ್ಸಮಮ್ ।
ಕನಕಾಶ್ವತಿಲಾ ನಾಗಾ ದಾಸೀರಥಮಹೀಗ್ರಹಾಃ ।
ಕನ್ಯಾ ಚ ಕಪಿಲಾ ಧೇನುರ್ಮಹಾದಾನಾನಿ ವೈ ದಶ ॥ -ಬೃಹಸ್ಪತಿಸ್ಮೃತಿ

೨. ದಶಾನಾಂ ತು ಸಹಸ್ರಾಣಾಂ ಯಜ್ಞಾನಾಂ ಧುರ್ಯವಾಹಿನಾಮ್ ।
ಸುಪಾತ್ರೇ ವಿನಿಯುಕ್ತಾನಾಂ ಕನ್ಯಾ ವಿದ್ಯಾ ಚ ತತ್ಸಮಮ್ ॥
ಗೌರೀಂ ದದನ್ನಾಕಪೃಷ್ಠಂ ವೈಕುಂಠಂ ರೋಹಿಣೀಂ ದದತ್ ।
ಕನ್ಯಾಂ ದದದ್ಬ್ರಹ್ಮಲೋಕಂ ರೌರವಂ ತು ರಜಸ್ವಲಾಮ್ ॥ -ಯಮಸ್ಮೃತಿ
ಹತ್ತುಗೋದಾನಕೆ ಸಮ ಹರಿಗೆ ವೃಷದಾನ
ಹತ್ತುವೃಷಭಕೆ ಸಮ ಹಾರುವ ಕುದುರೆ ಕಾಣರೋ
ಹತ್ತುಕುದುರೆಗೆ ಸಮ ಹಸ್ತಿದಾನ ಕಾಣರೋ

# ವಿವಾಹದಲ್ಲಿ ಗುರುಹಿರಿಯರ ಪಾತ್ರ

ವಧೂವರರ ಜಾತಕ ಹೊಂದಾಣಿಕೆಯಷ್ಟೇ ಮುಖ್ಯವಾದುದು ಉಭಯಪಂಗಡಗಳ ಅಂತಸ್ತು, ವಿದ್ಯೆ ಮೊದಲಾದವುಗಳ ಹೊಂದಾಣಿಕೆ. ಅಂತಸ್ತುಗಳಲ್ಲಿ ಇರುವ ಅಂತರ ಅನೇಕ ರೀತಿಯಲ್ಲಿ ವಿವಾಹವು ಸುಖಾಂತವಾಗುವುದಕ್ಕೆ ಅಡ್ಡಿಯಾಗುತ್ತದೆ. ಇದು ಲೋಕದೃಷ್ಟಿಯಲ್ಲಿ ಮಾತ್ರವಲ್ಲದೆ ಶಾಸ್ತ್ರದೃಷ್ಟಿಯಲ್ಲೂ ವಿಹಿತವಾದ ವಿಚಾರವೇ ಆಗಿದೆ :

> ಯಯೋರೇವ ಸಮಂ ವಿತ್ತಂ ಯಯೋರೇವ ಸಮಂ ಕುಲಮ್ ।
> ತಯೋರ್ವಿವಾಹೋ ಮೈತ್ರೀ ಚ ನೋತ್ತಮಾಧಮಯೋಃ ಕ್ವಚಿತ್ ॥
> ವಿವಾಹಶ್ಚ ವಿವಾದಶ್ಚ[1] ಸಮಯೋರೇವ ಶೋಭತೇ ॥[2]

ಇಲ್ಲಿ ಗಮನಿಸಬೇಕಾದ ಮತ್ತೊಂದು ಅಂಶವಿದೆ. ವಧೂವರರ ಆಯ್ಕೆ ಇಂದು ಕೇವಲ ಅವರಿಬ್ಬರಿಗಷ್ಟೇ ಸೀಮಿತ ಎಂಬ ಪ್ರವೃತ್ತಿ ಹೆಚ್ಚಾಗಿ ಕಂಡುಬರುತ್ತಿದೆ. ವಾಸ್ತವವಾಗಿ ಶಾಸ್ತ್ರೀಯ ವಿಧಿವಿಧಾನದಂತೆ ಗುರುಹಿರಿಯರ ಸಮ್ಮತಿ ಇದಕ್ಕೆ ಅತ್ಯಗತ್ಯ. ವಧೂವರರು ಕೈಗೊಳ್ಳುವ ನಿಶ್ಚಯ ಅವರ ವಯಸ್ಸು, ವಿದ್ಯೆ, ಅನುಭವಗಳ ಸೀಮಿತ ಪರಿಧಿಯಿಂದಾಗಿ, ಅಷ್ಟಾಗಿ ದೂರದೃಷ್ಟಿಯನ್ನು ಹೊಂದಿರುವುದು ಅಸಾಧ್ಯ. ಅವರ ನಿರ್ಣಯ ಆತ್ಯಂತಿಕವಾಗಿರುವ ಸಂಭವ ಕಡಿಮೆಯೇ. ಆದರಿಂದಾಗಿಯೇ ಗುರುಹಿರಿಯರ ಪಾತ್ರ ಇದರಲ್ಲಿ ಪ್ರಧಾನವೆನ್ನಿಸುವುದು. ಅವರು ವಂಶ, ಅಂತಸ್ತು, ವಿದ್ಯೆ ಮೊದಲಾದ ಅನೇಕ ಹಿನ್ನೆಲೆಗಳಲ್ಲಿ ಪರಸ್ಪರರ ಸಂಬಂಧವನ್ನು ವಿಶ್ಲೇಷಿಸುವುದರಿಂದ ಅವರ ತೀರ್ಮಾನಕ್ಕೆ ಹೆಚ್ಚಿನ ಮಹತ್ತ್ವವಿರುವುದು ಸಹಜ.

ಒಂದು ರೀತಿಯಲ್ಲಿ ಇದನ್ನು ಶಾಲಾಕಾಲೇಜು ಮೊದಲಾದ ಸಂಸ್ಥೆಗಳಿಗೆ ಇರುವ ಪರಿಣತರನ್ನು ಒಳಗೊಂಡ ಆಯ್ಕೆಯ ವ್ಯವಸ್ಥೆಗೆ ಹೋಲಿಸಬಹುದು. ಅಭ್ಯರ್ಥಿಯನ್ನು ಸಾಮಾನ್ಯವಾಗಿ ಏಕಸದಸ್ಯ ಆಯ್ಕೆ ಸಮಿತಿಯಿಂದ ಆಯ್ಕೆಮಾಡುವುದು ಅತ್ಯಂತ ವಿರಳ. ಹುದ್ದೆಯು ತಾತ್ಕಾಲಿಕವಾಗಿದ್ದಲ್ಲಿ ಒಮ್ಮೊಮ್ಮೆ ಅಂತಹ ಆಯ್ಕೆ ನಡೆಯಬಹುದು, ಆದರೆ ಶಾಶ್ವತಹುದ್ದೆಗಳಿಗೆ ಅಧಿಕೃತವಾದ ಆಯ್ಕೆಯೇ ಪ್ರಧಾನವೆನ್ನಿಸುವುದು. ಆಯ್ಕೆ ಸಮಿತಿಯ

---

ಹತ್ತು ಹಸ್ತಿಗೆ ಸಮ ಒಂದು ಕ್ರತುವು
ಹತ್ತು ಕ್ರತುವಿಗೆ ಸಮ ಹರಿಭಕ್ತರಿಗೆ ಕನ್ಯಾದಾನ ಕಾಣಿರೊ
ಹತ್ತು ಕನ್ಯಾದಾನಕೆ ಸಮ ಹಸಿದವಗೆ ಅನ್ನ ಕಾಣಿರೊ
ಹತ್ತು ಅನ್ನದಾನಕೆ ಸಮ ಉದಕದಾನ ಕಾಣಿರೊ
ನಿತ್ಯ ಪುರಂದರವಿಠಲನ ನೆನೆವ ಪುಣ್ಯಕೆಣೆಯಿಲ್ಲ ಕಾಣಿರೊ ॥

೧. ಉತ್ತಮೈರುತ್ತಮೈರ್ನಿತ್ಯಂ ಸಂಬಂಧಾನಾಚರೇತ್ ಸಹ ।
ನಿನೀಷುಃ ಕುಲಮುತ್ಕರ್ಷಮಧಮಾನಧಮಾಂಸ್ತ್ಯಜೇತ್ ॥ -ಮನುಸ್ಮೃತಿ

೨. ಶ್ರೀವೇಂಕಟೇಶಮಾಹಾತ್ಮ್ಯ, ಭವಿಷ್ಯೋತ್ತರ ಪುರಾಣ (೧೦/೫,೬)

ಬಹುಮತವಿಲ್ಲದೆ ಆಯ್ಕೆ ಸಿಂಧುವೆನ್ನಿಸಲಾರದು. ಪ್ರಸ್ತುತ ವಿವಾಹವು ತಾತ್ಕಾಲಿಕ ವ್ಯವಸ್ಥೆಯಾಗಿರದೆ ಜೀವನಪೂರ್ತಿಯ ಶಾಶ್ವತವ್ಯವಸ್ಥೆಯಾಗಿರುವುದರಿಂದ ವಧೂವರರ ಆಯ್ಕೆ ಉಭಯಪಂಗಡಗಳ ಹಿರಿಯರ ನೇತೃತ್ವದಲ್ಲಿ ನಡೆದಾಗ ಮಾತ್ರವೇ ನಿಜ ಅರ್ಥದಲ್ಲಿ ಸಿಂಧುವೆನ್ನಿಸಲು ಸಾಧ್ಯ. ಅಭ್ಯರ್ಥಿಯು ಒಬ್ಬ ವ್ಯಕ್ತಿಗೆ ಎಷ್ಟೇ ಅರ್ಹ ಎನ್ನಿಸಿದರೂ ಸಮಿತಿಯ ಹೆಚ್ಚಿನ ಸದಸ್ಯರು ಅದನ್ನು ವಿರೋಧಿಸಿದಾಗ ಒಬ್ಬನ ಆಯ್ಕೆಗೆ ಮಹತ್ವ ಲಭಿಸಲಾರದು. ಅದೇಕೆ? ಸಂಸ್ಥೆಯ ಮುಖ್ಯಸ್ಥನೂ ಸಹ ತನ್ನ ಮಗ, ಮಗಳು ಮೊದಲಾದ ತೀರ ಹತ್ತಿರದ ಸಂಬಂಧಿಗಳನ್ನು ಸಹ ಕೇವಲ ತನ್ನ ಒಬ್ಬನ ಇಚ್ಛೆಗನುಗುಣವಾಗಿ ಆಯ್ಕೆ ಮಾಡುವುದು ಇಂದಿನ ವ್ಯವಸ್ಥೆಯಲ್ಲಿ ಸರ್ವಥಾ ಅಸಾಧ್ಯ.

ಆದರಿಂದಾಗಿಯೇ ವಿವಾಹದಂತಹ ಜೀವನಪೂರ್ತಿಯ ಪವಿತ್ರಸಂಬಂಧಕ್ಕೆ ಇತರರ ಒಪ್ಪಿಗೆಯೂ ಸಹ ಸಹಜವಾಗಿಯೇ ಅಗತ್ಯವೆನ್ನಿಸುವುದು. ವಿಶೇಷ ಕಾರಣಗಳಿರದ ಹೊರತು ಹಿರಿಯರ ಮಾತಿಗೆ ಗಮನ ನೀಡುವ ಪದ್ಧತಿ ಅರ್ಥವತ್ತಾದುದು ಎಂಬುದನ್ನು ಒಪ್ಪಲೇಬೇಕಾಗುವುದು. ಆದರೆ ಇಂದು ಇದು ಹೆಚ್ಚುಕಡಿಮೆ ಲುಪ್ತವಾಗಿದೆ ಎನ್ನುವ ಹಂತ ತಲುಪಿದೆ. ವಧೂವರರ ಸ್ವೇಚ್ಛೆಯ ಆಯ್ಕೆಗೆ ಪ್ರಾಧಾನ್ಯ ಲಭಿಸಿ, ವರ್ಣ ಮೊದಲಾದ ಎಲ್ಲವನ್ನೂ ಮೀರಿ ವಿವಾಹ ನಡೆಯುವುದು ಸಾಮಾನ್ಯವೆನಿಸುತ್ತಿದೆ. ಎರಡು ವಿಭಿನ್ನ ವರ್ಗಗಳ ವರ್ಣಗಳ ನಡುವೆ ನಡೆಯುವ ವಿವಾಹವು ಆರಂಭದ ಒಂದು ಹಂತದವರೆಗೆ ರೋಚಕ ಎನ್ನಿಸಬಹುದು. ದಿನಕಳೆದಂತೆ ವಿಭಿನ್ನ ಸಂಸ್ಕೃತಿಗಳಲ್ಲಿನ ಅಪಾರ ಅಂತರದಿಂದಾಗಿ ಪರಸ್ಪರರ ಹೊಂದಾಣಿಕೆಯು ಸುಲಭಸಾಧ್ಯವೆನ್ನಿಸದೇ ಹೋಗುವ ಸಂದರ್ಭಗಳೇ ಹೆಚ್ಚು. ಅಂತಹ ವಿರಸ ಕ್ರಮೇಣ ಹೆಚ್ಚುತ್ತಾ ವಿಚ್ಛೇದನದಂತಹ ದುರಂತದಲ್ಲಿ ಪರ್ಯವಸಾನವಾಗುವುದು ಅಪರೂಪವೇನಲ್ಲ. ಗುರುಹಿರಿಯರ ಒಪ್ಪಿಗೆಯ ಹಿನ್ನೆಲೆಯಲ್ಲಿ ನಡೆಯದ ವಿವಾಹಗಳಲ್ಲಿ ಅವರ ಬಾಧ್ಯತೆಗೆ ಅವಕಾಶವಿಲ್ಲದಿರುವುದರಿಂದ ಇಂತಹ ವಿರಸಪ್ರಸಂಗಗಳ ಪರಿಹಾರ ಅಸಾಧ್ಯವೆನ್ನಿಸುವುದೂ ಸಹಜವೇ. ಆದರೆ ಗುರುಹಿರಿಯರ ನೇತೃತ್ವದಲ್ಲಿ ನಡೆಯುವ ವಿವಾಹಸಂಬಂಧವು ಯಾವುದೇ ಕಾರಣಕ್ಕೂ ಬಿರುಕಿಗೆ ಅವಕಾಶ ನೀಡದೆ, ಸುಲಲಿತವಾಗಿ ನಡೆಯುವ ಸಂದರ್ಭ ಹೆಚ್ಚು ಎಂಬುದು ಪ್ರಾಚೀನಕಾಲದ ಕುಟುಂಬ ವ್ಯವಸ್ಥೆಯ ಅಧ್ಯಯನದಿಂದ ಬೆಳಕಿಗೆ ಬರುವ ವಿಚಾರ. ಅಂತಹ ಸಂದರ್ಭಗಳಲ್ಲಿ ಗುರುಹಿರಿಯರ ನೇತೃತ್ವದ ಸಾಮಾಜಿಕಪ್ರಜ್ಞೆ ವಧೂವರರ ವೈಯಕ್ತಿಕ ಬೇಕುಬೇಡಗಳನ್ನು ಮೀರಿ, ಸೂಕ್ತರೀತಿಯ ಹೊಂದಾಣಿಕೆಯನ್ನು ಯೋಜಿಸಲು ನೆರವಾಗುತ್ತದೆ. ಇತ್ತೀಚಿನ ದಿನಗಳಲ್ಲಿ ಗುರು-ಹಿರಿಯರ ಒಪ್ಪಿಗೆ ಅನಗತ್ಯ ಎಂಬಂತೆ ಭಾವಿಸುವ ವಿವಾಹಗಳು ಒಂದೆಡೆಯಾದರೆ, ಅವರ ವಿರೋಧವನ್ನು ಕಡೆಗಣಿಸಿ ನಡೆಯುವ ವಿವಾಹಗಳೇ ಹೆಚ್ಚಿನವು. ಆದರಿಂದ ಜೀವನದಲ್ಲಿ ಸಂಭವಿಸುವ ದುರಂತ ಅವರ ಮಕ್ಕಳ ಕಾಲಕ್ಕೂ ಮುಂದುವರೆದು

ಸಮಾಜದ ಭದ್ರವ್ಯವಸ್ಥೆಯೇ ಕುಸಿಯುವಂತಾಗಿ, ಜೀವನದ ಪ್ರಬಲಸಂಸ್ಕಾರವೊಂದಕ್ಕೆ ಇನ್ನಿಲ್ಲದ ಆಘಾತ ಉಂಟಾಗುವಂತಾಗಿದೆ. ಭಾವೋದ್ವೇಗದ ಹಂತದಲ್ಲಿ ಇದಾವು-ದನ್ನೂ ಲೆಕ್ಕಿಸದ ವಧೂವರರ ಸಂಖ್ಯೆ ಮಿತಿಮೀರುತ್ತಿರುವುದರಿಂದ ಅವರದು ಎಷ್ಟೇ ಸಾಮರಸ್ಯದ ಸಂಸಾರವಾದರೂ ಗುರುಹಿರಿಯರ ಸಂಪರ್ಕ, ಸಲಹೆ, ಸಹಾಯಗಳಿಂದ ವಂಚಿತವಾಗಿ ಅತೃಪ್ತಿಯ ಹಂತದಲ್ಲಿಯೇ ಕೊನೆಗೊಳ್ಳುವುದು ಅನಿವಾರ್ಯ.

ಪ್ರೇಮವಿವಾಹಕ್ಕೆ ಗುರುಹಿರಿಯರ ಒಪ್ಪಿಗೆ ಪಡೆಯುವ ವಿವೇಕವಿದ್ದಲ್ಲಿ ಒಂದು ರೀತಿಯಲ್ಲಿ ಪರಿಹಾರ ಸಾಧ್ಯ. ಆದರೆ ಅಂತಹ ಒಪ್ಪಿಗೆಯನ್ನು ಬೆದರಿಕೆಯನ್ನೊಡ್ಡಿ ಪಡೆಯುವ ತಂತ್ರಗಾರಿಕೆ ಮಾತ್ರ ಸಾಧುವೆನ್ನಿಸದು.

## ಕನ್ಯಾದಾನಕ್ಕೆ ಅರ್ಹತೆ

ಕನ್ಯಾದಾನ ಮಾಡುವ ಮೊದಲ ಅರ್ಹತೆ ತಂದೆಯದು, ಆ ಬಳಿಕ ಕ್ರಮವಾಗಿ ತಾತ, ಸೋದರ, ತಾಯಿ ಅರ್ಹರೆನ್ನಿಸುವರು. ಇದು ಉಪನಯನದಲ್ಲಿ ಗಾಯತ್ರೀ ಉಪದೇಶದ ಮೊದಲ ಅರ್ಹತೆ ತಂದೆಗೆ ಹೇಗೋ ಹಾಗೆ ಎಂದು ತಿಳಿಯಬೇಕು. ಕಾರಣಾಂತರದಿಂದ ಮೊದಲನೆಯವರು ಅಲಭ್ಯರು ಅಥವಾ ಅನರ್ಹರು ಎನ್ನಿಸಿದಾಗ ಅನಂತರದವರು ಕ್ರಮವಾಗಿ ಈ ಕಾರ್ಯಕ್ಕೆ ಅರ್ಹತೆ ಪಡೆಯುವರು[೧].

## ವರದಕ್ಷಿಣೆಯ ಪಿಡುಗು

ಇತ್ತೀಚಿನ ದಿನಗಳಲ್ಲಿ ವರದಕ್ಷಿಣೆ ವಿವಾಹಕ್ಕೆ ಸಂಬಂಧಿಸಿದಂತಹ ದೊಡ್ಡ ಪಿಡುಗಾಗಿ ಕಾಣಿಸಿಕೊಂಡಿದೆ. ಅದನ್ನು ಶಾಸ್ತ್ರೀಯವೆಂಬಂತೆ ಬಿಂಬಿಸುವ ಅರೆಬರೆ ಜ್ಞಾನದ ಪಂಡಿತರು ಸಿಗುತ್ತಾರೆ. ಆದರೆ ಶಾಸ್ತ್ರಗಳು ಎಲ್ಲೂ ಸಹ ವರದಕ್ಷಿಣೆಯನ್ನು ಆಧುನಿಕ ಪರಿಕಲ್ಪನೆಯ ಹಕ್ಕಿನ ಒತ್ತಾಯವೆಂಬಂತೆ ಬಿಂಬಿಸಿಲ್ಲ. ಬದಲಿಗೆ ದಕ್ಷಿಣೆಯೆಂಬ ಹೆಸರಿನಲ್ಲಿಯೇ ಅದರ ಅರ್ಥವನ್ನು ಸಹ ಸ್ಫುಟಪಡಿಸಿವೆ. ದಕ್ಷಿಣೆ ಯಾವಾಗಲೂ ಸಹ ದಾನನೀಡುವವರ ಸಾಮರ್ಥ್ಯವನ್ನು ಅವಲಂಬಿಸಿರುತ್ತದೆಯೇ ಹೊರತು ಸ್ವೀಕರಿಸುವವರ ಒತ್ತಡವನ್ನಲ್ಲ.

---

೧. ಪಿತಾ ಪಿತಾಮಹೋ ಭ್ರಾತಾ ಸಕುಲ್ಯೋ ಜನನೀ ತಥಾ ।
ಕನ್ಯಾಪ್ರದಃ ಪೂರ್ವನಾಶೇ ಪ್ರಕೃತಿಸ್ಥಃ ಪರಃ ಪರಃ ॥ -ಯಾಜ್ಞವಲ್ಕ್ಯಸ್ಮೃತಿ(೧/೬೩)
ಪಿತಾ ದದ್ಯಾತ್ ಸ್ವಯಂ ಕನ್ಯಾಂ ಭ್ರಾತಾ ವಾಽನುಮತೌ ಪಿತುಃ ।
ಮಾತಾಮಹೋ ಮಾತುಲಶ್ಚ ಸ ಕುಲ್ಯೋ ಬಾಂಧವಸ್ತಥಾ ॥
ಮಾತಾ ತ್ವಭಾವೇ ಸರ್ವೇಷಾಂ ಪ್ರಕೃತೌ ಯದಿ ವರ್ತತೇ ।
ತಸ್ಯಾಮಪ್ರಕೃತಿಸ್ಥಾಯಾಂ ದದ್ಯುಃ ಕನ್ಯಾಂ ಸ್ವಜಾತಯಃ ॥ -ನಾರದಸ್ಮೃತಿ(೧೩/೨೦)
ಯದಾ ತು ನೈವ ಕಶ್ಚಿತ್ ಸ್ಯಾತ್ ಕನ್ಯಾ ರಾಜಾನಮಾವ್ರಜೇತ್ । -ನಾರದಸ್ಮೃತಿ (೧೩/೨೨)
ಗಮ್ಯಂ ತ್ವಭಾವೇ ದಾತೃಣಾಂ ಕನ್ಯಾ ಕುರ್ಯಾತ್ ಸ್ವಯಂವರಮ್ । -ಯಾಜ್ಞವಲ್ಕ್ಯಸ್ಮೃತಿ(೧/೬೪)

ದಾನಸ್ವೀಕರಿಸುವವನಿಗೆ ದಕ್ಷಿಣೆಯ ನಿಬಂಧನೆ ಹೇರುವ ಹಕ್ಕು ಸರ್ವಥಾ ಇರುವುದಿಲ್ಲ. ಈ ಅರ್ಥದಲ್ಲಿ ವರದಕ್ಷಿಣೆ ಎನ್ನುವ ಪದ ಶಾಸ್ತ್ರಸಮ್ಮತವಾದರೂ ಇಂದಿನ ಬಳಕೆಯಲ್ಲಿನ ಅದರ ಅನ್ವಯ ಮಾತ್ರ ಅತ್ಯಂತ ಅಶಾಸ್ತ್ರೀಯ. ಕೇಳಿಪಡೆದಾಗ ಅದು ದಕ್ಷಿಣೆ ಎನ್ನಿಸದೆ ಅದು ಭಿಕ್ಷೆ ಎನ್ನಿಸುವುದು ಎನ್ನುವುದನ್ನು ಇಂತಹ ಜನ ತಿಳಿಯುವ ಅಗತ್ಯವಿದೆ. ಲೌಕಿಕವಾಗಿಯೂ ಇದು ಅಸಹ್ಯಭಾವನೆ ಹುಟ್ಟಿಸುವ ಪರಿಕಲ್ಪನೆ. ತನ್ನ ಸ್ವಂತ ಸಾಮರ್ಥ್ಯವನ್ನು ಅವಲಂಬಿಸದೆ, ಕನ್ಯೆಯಿಂದ ಬರಬಹುದಾದ ಧನಕನಕಗಳನ್ನು ನಿರೀಕ್ಷಿಸುವವನು ವರ ಎನ್ನಿಸುವ ಅರ್ಹತೆಯನ್ನೇ ಕಳೆದುಕೊಳ್ಳುವನು ಎಂಬ ಸತ್ಯವನ್ನು ಅರಿಯಬೇಕಿದೆ. ಅದು ಸ್ವಾಭಿಮಾನದ ಪ್ರಶ್ನೆಯಾಗಿಯೂ ಸಹ ವಿವೇಕದ ನಡೆ ಎನ್ನಿಸದು. ಅಂತಹ ಆಮಿಷವನ್ನು ಒಡ್ಡುವ ಕನ್ಯಾಪಿತೃಗಳನ್ನು ಧಿಕ್ಕರಿಸುವ ಪ್ರವೃತ್ತಿಯಲ್ಲಿ ವಿವೇಕವಿದೆ. ಯಾವುದೇ ದಾನನೀಡುವವನು ಎಲ್ಲರೀತಿಯಲ್ಲೂ ಅಶಕ್ತನಾದಾಗ, ಅದನ್ನು ಅವನು ನಿವೇದಿಸಿಕೊಂಡಲ್ಲಿ ಒಪ್ಪಿಕೊಳ್ಳಲೇಬೇಕಾದ ವಿಧಿಯನ್ನು ತಂತ್ರಸಾರ ನಿರೂಪಿಸಿದೆ : ನಿಸ್ವೋ ಭಕ್ತ್ಯಾ ಕ್ಷಮಾಪಯೇತ್. ಆಧುನಿಕ ಪರಿಕಲ್ಪನೆಯ ವರದಕ್ಷಿಣೆಯು ಕಾನೂನಿನಂತೆಯೂ ಸಹ ಶಿಕ್ಷಾರ್ಹವಾದ ಅಪರಾಧ ಎಂಬುದು ಗಮನಿಸಬೇಕಾದ ಸಂಗತಿ.

ವರದಕ್ಷಿಣೆಯ ಪಿಡುಗು ಹಿಂದೆ ಹೇಳಿದ ಅನೇಕ ಕಾರಣಗಳೊಂದಿಗೆ ಅನಪೇಕ್ಷಿತ ವಿವಾಹಗಳಿಗೆ ಕಾರಣವೂ ಸಹ ಆಗಿದೆ; ಎಂದರೆ ಕಾರಣಾಂತರಗಳಿಂದ ವರನು ಅಪೇಕ್ಷಿಸುವ ದಕ್ಷಿಣೆ ಎಂದರೆ ಭಿಕ್ಷೆಯನ್ನು ಸಲ್ಲಿಸಲಾಗದ ಸ್ಥಿತಿಯಲ್ಲಿನ ಅವರು ತಮ್ಮ ಹೆಣ್ಣುಮಕ್ಕಳ ವಿವಾಹವನ್ನು ನಡೆಸಲಾಗದಂತಹ ಪರಿಸ್ಥಿತಿಗೆ ಒಳಗಾಗುವರು. ಅದರಿಂದಾಗಿ ಅನಿವಾರ್ಯವೆಂಬಂತೆ ಸಮಾಜಬಾಹಿರವೆನ್ನಿಸುವ ವಿವಾಹವು ನಡೆದು, ಅನಪೇಕ್ಷಿತ ಪರಿಣಾಮಕ್ಕೆ ಕಾರಣವಾಗುತ್ತದೆ. ಎಷ್ಟೋ ಜನ ಅರ್ಹ ಕನ್ಯೆಯರು ಇಂತಹ ಹೀನ ಪರಿಸ್ಥಿತಿಯಿಂದಾಗಿ ಸರ್ವಥಾ ಅನುರೂಪರಲ್ಲದ ವರರೊಂದಿಗೆ ವಿವಾಹವಾಗಿ ಜೀವನಪೂರ್ತಿ ಸಂಕಷ್ಟಕ್ಕೆ ಒಳಗಾದ ನಿದರ್ಶನಗಳು ಅಪಾರ ಸಂಖ್ಯೆಯಲ್ಲಿ ಕಾಣಸಿಗುತ್ತವೆ.

ವರದಕ್ಷಿಣೆಯ ಹಾವಳಿ ಕೇವಲ ವಿವಾಹಸಮಯಕ್ಕೆ ಮಾತ್ರ ಸೀಮಿತ ಎಂದೇನೂ ಅಲ್ಲ. [೧]ಹಣಕಾಸುಗಳೊಂದಿಗೆ ಮನೆ, ವಾಹನ ಮೊದಲಾದ ಬಗೆಬಗೆಯ ಬೇಡಿಕೆಗಳನ್ನು ವರೋಪಚಾರ ಎಂಬ ಹೆಸರಿನಲ್ಲಿ ಮುಂದಿಡುವುದು ಇದರೊಂದಿಗೆ

---

೧. ಶ್ರೀಕೃಷ್ಣನು ರುಕ್ಮಿಣೀವಿವಾಹಕಾಲದಲ್ಲಿ ವರದಕ್ಷಿಣೆಯನ್ನು ಅಪೇಕ್ಷಿಸಲಿಲ್ಲ ಎಂಬ ರುಗ್ಮಿಣೀಶವಿಜಯದ ವಿವರಗಳು ಇಲ್ಲಿ ಗಮನಾರ್ಹ:

ನ ಪಾರಿಬರ್ಹಂ ಬಹು ದಾತುಮೀಶಾ ರಥಾಶ್ವಹಸ್ತ್ಯಾದಿಬಲಾನಿ ಚಾಸ್ಮೈ ।
ಇಮಾಂ ಪರಂ ಪದ್ಮಮುಖೀಂ ದಿಶಾಮಸ್ತಿಥಿಜ್ಞಮಾಹೂಯ ತಿಥಿರ್ವಿಚಾರ್ಯತಾಮ್ ॥
ನ ಪಾರಿಬರ್ಹಂ ಸ ವೃಣೋತಿ ಪೂರ್ಣಸುಖಃ ಪರಂ ಕಾಂಕ್ಷತಿ ತತ್ಕಟಾಕ್ಷಮ್ ।
ವಿರಿಂಚಿವೈರಿಂಚಿಮುಖಾಮರಾಣಾಮಗಣ್ಯಭಾಗ್ಯಂ ಹಿ ಯತೋ ಬಭೂವ ॥ -೧೫/೪೫,೪೬

ಸೇರಿಕೊಂಡಿರುವ ಮತ್ತೊಂದು ಅನಿಷ್ಟ. ಎಷ್ಟೋ ವಿವಾಹಗಳು ವಿವಾಹಮಂಟಪದಲ್ಲಿ ಈ ಕಾರಣಕ್ಕಾಗಿಯೇ ಮುರಿದುಬಿದ್ದಿರುವುದುಂಟು. ಇದು ಸಾಲದೆಂಬಂತೆ ದೀಪಾವಳಿ ಮೊದಲಾದವುಗಳಿಗಾಗಿ, ಹೊಸಹೊಸ ಬೇಡಿಕೆಗಳು, ಅನಂತರ ಉದ್ಯೋಗ, ವ್ಯಾಪಾರ, ವ್ಯವಹಾರ ಮೊದಲಾದ ಅನೇಕ ಕಾರಣಗಳಿಗಾಗಿ ಜೀವನಪೂರ್ತಿ ಮಾವನನ್ನು ಪತ್ನಿಗೆ ಕಿರುಕುಳ ಕೊಡುವ ಮೂಲಕ ಪೀಡಿಸುವ ದುಷ್ಟ ಹವ್ಯಾಸ ಇನ್ನೂ ಅಪಾರ ಪ್ರಮಾಣದಲ್ಲಿಯೇ ಕಾಣಸಿಗುತ್ತದೆ. ಇದಕ್ಕಾಗಿಯೇ ಎಂಬಂತೆ ಜಾಮಾತಾ ದಶಮೋ ಗ್ರಹಃ (ಅಳಿಯನೆಂದರೆ ಹತ್ತನೆಯ ಗ್ರಹ) ಎಂಬ ಮಾತು ರೂಢಿಯಲ್ಲಿ ಬಂದಿದೆ. ನವಗ್ರಹಗಳಲ್ಲಿ ಪ್ರತಿಯೊಂದು ಗ್ರಹಕ್ಕೂ ಇಂತಿಷ್ಟು ಅವಧಿ ಎಂಬ ಮೀಸಲಿದ್ದರೆ ಅಳಿಯನೆಂಬ ಗ್ರಹ ಜೀವನಪೂರ್ತಿ ಕಾಡುವ ಗ್ರಹ. ನವಗ್ರಹಗಳಿಗೆ ಹೋಮಹವನ, ಜಪ ಮೊದಲಾದವುಗಳ ಮೂಲಕ ಕಡಿಮೆ ವೆಚ್ಚದಲ್ಲಿ ಶಾಂತಿ ಸಾಧ್ಯ. ಈ ಅಳಿಯನೆಂಬ ೧೦ನೆಯ ಗ್ರಹಕ್ಕೆ ಮಾತ್ರ ಎಂದೂ ಶಾಂತಿಯೇ ಇಲ್ಲ ಎಂಬಂತಾಗಿರುವುದು ಸಮಾಜಕ್ಕೆ ಸರ್ವಥಾ ಭೂಷಣವಲ್ಲ. ಎಷ್ಟೋ ಪ್ರಸಂಗಗಳಲ್ಲಿ ಮಗಳ ಮದುವೆ ಇತ್ಯಾದಿಗಳಿಗಾಗಿ ಮಾಡುವ ಸಾಲವನ್ನು ಜೀವನಪೂರ್ತಿಯಾದರೂ ತೀರಿಸದೆ, ದುರಂತದಲ್ಲಿ ಪರ್ಯ-ವಸಾನಗೊಳ್ಳುವ ಸಂಖ್ಯೆಯೂ ಗಣನೀಯವಾಗಿಯೇ ಇದೆ. ''ಅಳಿಯ ಮನೆತೊಳಿಯ'' ಎಂಬ ಗಾದೆಯ ಮಾತಿನಲ್ಲಿ ಈ ಅನಾಹುತದ ಪರಿಣಾಮಕಾರಿಯಾದ ಚಿತ್ರಣವನ್ನು ಕಾಣಬಹುದು. ಪುರುಷವರ್ಗ, ಅದರಲ್ಲೂ ಯುವವರ್ಗ ಈ ಬಗ್ಗೆ ಎಚ್ಚೆತ್ತು ಯಾವುದೇ ಕಾರಣಕ್ಕೂ ಇಂತಹ ಹೀನ ಪ್ರವೃತ್ತಿಗೆ ಮನಸ್ಸು ಹಾಕಲಾರೆವು ಎಂಬ ಸಂಕಲ್ಪಶಕ್ತಿಯನ್ನು ಬೆಳೆಸಿಕೊಂಡಲ್ಲಿ ಸಮಾಜದಲ್ಲಿ ವಿಶಿಷ್ಟ ಬಗೆಯ ಕ್ರಾಂತಿ ನಡೆದು ಅರ್ಥವತ್ತಾದ ವಿವಾಹಗಳು ನಡೆಯಲು ಸಾಧ್ಯವೆನ್ನಿಸುವುದು. ಮನುಷ್ಯನಿಗೆ ಸ್ವಾಭಿಮಾನಕ್ಕಿಂತ ಮಿಗಿಲಾದ ಆಸ್ತಿ ಬೇರೊಂದಿಲ್ಲ. ವರದಕ್ಷಿಣೆಯ ನೆಪದಲ್ಲಿ ಕೈಚಾಚಿ ತೆಗೆದುಕೊಳ್ಳುವುದು ಅಂತಹ ಸ್ವಾಭಿಮಾನಕ್ಕೆ ತಗಲುವ ಧಕ್ಕೆ ಎಂಬ ತಿಳುವಳಿಕೆ ಅತ್ಯಗತ್ಯ. ಇದರ ಅರಿವಿರುವ ಯಾವ ವಿವೇಕಿಯು ವರದಕ್ಷಿಣೆ ಕೇಳುವಂತಹ ಅವಿವೇಕವನ್ನು ತೋರಲಾರ.

ಹಾಗೆಂದು ವರದಕ್ಷಿಣೆಯನ್ನು ಕನ್ಯೆಯ ಪೋಷಕರು ತಾವಾಗಿ ನೀಡಿದಲ್ಲಿ ನಿರಾಕರಿಸಬೇಕೆಂದೇನಿಲ್ಲ ಎಂಬುದು ಶಾಸ್ತ್ರಗಳ ನಿಲುವು. ಅವರು ಸ್ವಂತ ಇಚ್ಛೆಯಿಂದ ಕನ್ಯೆಯ ಅನುಕೂಲ ಮೊದಲಾದ ಕಾರಣಕ್ಕಾಗಿ ತಾವಾಗಿಯೇ ನೀಡುವ ಕಾಣಿಕೆಗಳು ಉಭಯತ್ರರಿಗೂ ಸಂತೋಷನೀಡುವ ಸಂಗತಿಯಾದ್ದರಿಂದ ಅದನ್ನು ಸ್ವೀಕರಿಸುವುದು ಅನಪೇಕ್ಷಿತವೇನಲ್ಲ. ಒಬ್ಬಳೇ ಮಗಳು ಎಂಬ ಕಾರಣದಿಂದ ಅಥವಾ ಅಪಾರ ಸಿರಿವಂತಿಕೆಯ ಕಾರಣದಿಂದ ಕೆಲವರು ವರನ ಅರ್ಹತೆ ಮೊದಲಾದವುಗಳಿಗಿಂತ ಹೆಚ್ಚಿನ ಕಾಣಿಕೆಯನ್ನು ತಾವಾಗಿ ಕೆಲವೊಮ್ಮೆ ಒತ್ತಾಯಪೂರ್ವಕವಾಗಿಯೇ ನೀಡುವುದು ಅಪರೂಪವೇನಲ್ಲ. ಆದರೆ ಇಂತಹ ಪ್ರಸಂಗಗಳು ಇತರರ ಒತ್ತಾಯದ ಸ್ವೀಕಾರಕ್ಕೆ ಕಾರಣವಾಗದಂತೆ ಎಚ್ಚರವಹಿಸಬೇಕಾದದ್ದು ಅಗತ್ಯ.

ಅದರ ಬದಲಾಗಿ ಈ ಮುನ್ನವೇ ಹೇಳಿದಂತೆ ಒತ್ತಾಯ, ಬೆದರಿಕೆ, ಮೊದಲಾದವುಗಳ ಮೂಲಕ ಪಡೆಯುವ ಕಾಣಿಕೆಯು ದಕ್ಷಿಣೆ ಎನ್ನಿಸದೆ ಆಧುನಿಕ ಪರಿಕಲ್ಪನೆಯ ಲಂಚರೂಪದ ಭ್ರಷ್ಟಾಚಾರವೆನ್ನಿಸುವುದು ಖಚಿತ. ಹಾಗೆ ಒತ್ತಾಯ, ಬೆದರಿಕೆಗಳಿಗೆ ಮಣಿದು, ನೀಡುವ ಕಾಣಿಕೆಗಳ ಹಿಂದೆ ನಲಿವಿನ ಬದಲು ಅಪಾರ ನೋವು ತುಂಬಿರುವುದರಿಂದ ಅದರ ಸ್ವೀಕಾರ ಯಾವುದೇ ರೀತಿಯ ಒಳಿತಿಗೆ ಕಾರಣವಾಗದೆ ಜೀವನದಲ್ಲಿ ಬಗೆಬಗೆಯ ಸಂಕಟಗಳಿಗೆ ಕಾರಣವಾಗುವುದು ನಿಶ್ಚಿತ.

## ಕನ್ಯಾಶುಲ್ಕದ ವಿವಾಹವು ನಿಷಿದ್ಧ

ಕನ್ಯಾಶುಲ್ಕ ಮತ್ತೊಂದು ಬಗೆಯ ಪಿಡುಗು. ತಮ್ಮ ಕನ್ಯೆಯನ್ನು ಧಾರೆ ಎರೆಯಲು ಕನ್ಯೆಯ ಪೋಷಕವರ್ಗದವರು ವರನ ಕಡೆಯವರಿಂದ ಅಪೇಕ್ಷಿಸುವ ಧನಕನಕಗಳು [೧]ಕನ್ಯಾಶುಲ್ಕ ಎನ್ನಿಸುವವು. ಇದು ಒಂದು ಬಗೆಯ ಆಮಿಷವನ್ನು ಒಡ್ಡಿ ವಿವಾಹ-ವಾಗುವ ಕುತಂತ್ರವೇ ಸರಿ. ಇದರಿಂದಾಗಿ ವಿವೇಕ ರಹಿತವಾದ ಕನ್ಯೆಯ ಪೋಷಕವರ್ಗ ಅನಪೇಕ್ಷಿತನಾದ ವರನಿಗೆ ಕನ್ಯಾಶುಲ್ಕದ ಆಮಿಷದಿಂದಾಗಿ ಯೋಗ್ಯ- ಕನ್ಯೆಯನ್ನು ಅಯೋಗ್ಯವರನಿಗೆ ನೀಡುವ ಪ್ರಮಾದ ಮಾಡುವ ಹಂತವನ್ನು ತಲುಪುವುದು. ವಯಸ್ಸಿನಲ್ಲಿ ಅಪಾರ ಅಂತರವಿದ್ದರೆ ವರನ ಅಂತಸ್ತು ಮೊದಲಾದ ಕಾರಣಗಳಿಂದ ತೀರ ಚಿಕ್ಕ ವಯಸ್ಸಿನ ಕನ್ಯೆಯರನ್ನು ಅಂತಹವರಿಗೆ ಧಾರೆ ಎರೆಯುವ ಅವಿವೇಕವನ್ನು ತೋರುವ ಅಪಾರ ಸಂಖ್ಯೆಯ ನಿದರ್ಶನಗಳನ್ನು ಇತಿಹಾಸ ದಾಖಲಿಸಿದೆ. ಕನ್ಯಾದಾನ ಎಂಬ ಪರಿಕಲ್ಪನೆಯಲ್ಲಿಯೇ ಕನ್ಯಾಶುಲ್ಕದ ನಿಷೇಧ ಸ್ಫುಟವಾಗಿ ಬಂದಿದೆ. ದಾನವು ಪಾತ್ರನ ಯೋಗ್ಯತೆಯನ್ನರಿತು ಮಾಡುವ ಸಮರ್ಪಣೆಯ ಕಾರ್ಯ. ಶುಲ್ಕ ಪಡೆದಾಗ ಅದು ದಾನವೆನ್ನಿಸದೆ, ಮಾರಾಟವೆನ್ನಿಸುವುದು ಎಂದ ಮೇಲೆ ಕನ್ಯಾಶುಲ್ಕದ ವಿವಾಹ ಅದೆಷ್ಟು ಅರ್ಥಹೀನ ಎಂಬುದು ಸ್ಫುಟಪಡುವುದು. ಶುಲ್ಕ ನೀಡಿ ಪಡೆದ ಕನ್ಯೆಯು ದಾಸಿ ಎನ್ನಿಸುವಳೇ ಹೊರತು ಪತ್ನಿ ಎಂದಲ್ಲ ಎಂದಿದೆ ಸ್ಕಂದಪುರಾಣ[೨].

---

೧. ನ ಕನ್ಯಾಯಾಃ ಪಿತಾ ವಿದ್ವಾನ್ ಗೃಹ್ಣೀಯಾಚ್ಛುಲ್ಕಮಣ್ವಪಿ ।
ಗೃಹ್ಣಂಚ್ಛುಲ್ಕಂ ಹಿ ಲೋಭೇನ ಸ್ಯಾನ್ನರೋಽಪತ್ಯವಿಕ್ರಯೀ ॥ -ಮನುಸ್ಮೃತಿ(೩,೫೧)
ಕ್ರೀತಾ ದ್ರವ್ಯೇಣ ಯಾ ನಾರೀ ಸಾ ನ ಪತ್ನೀ ವಿಧೀಯತೇ ।
ಸಾ ನ ದೈವೇ ನ ಸಾ ಪಿತ್ರ್ಯೇ ದಾಸೀಂ ತಾಂ ಕಾಶ್ಯಪೋಽಬ್ರವೀತ್ ॥
ಶುಲ್ಕೇನ ಯೇ ಪ್ರಯಚ್ಛಂತಿ ಸ್ವಸುತಾಂ ಲೋಭಮೋಹಿತಾಃ ।
ಆತ್ಮವಿಕ್ರಯಿಣಃ ಪಾಪಾ ಮಹಾಕಿಲ್ಬಿಷಕಾರಕಾಃ ॥
ಪತಂತಿ ನರಕೇ ಘೋರೇ ಘ್ನಂತಿ ಚಾಸಪ್ತಮಂ ಕುಲಮ್ ॥
-ಬೋಧಾಯನಧರ್ಮಸೂತ್ರ(೧೧/೨೦-೨೨)

೨. ಕ್ರಯಕ್ರೀತಾ ಚ ಯಾ ಕನ್ಯಾ ದಾಸೀ ಸಾ ಪರಿಕೀರ್ತಿತಾ । -ಅತ್ರಿಸ್ಮೃತಿ(೩೮೭)

ಕನ್ಯೆಯಿಂದ ದಕ್ಷಿಣೆ ಪಡೆಯುವುದನ್ನು ಮಾತ್ರವಲ್ಲದೇ ಕನ್ಯೆಯ ಸಂಪಾದನೆಯಿಂದ ಅಥವಾ ಅವಳಿಗೆ ಸೇರಿದ ಸಂಪತ್ತಿನಿಂದ ಜೀವಿಸುವುದನ್ನೂ ಸಹ ಶಾಸ್ತ್ರಗಳು ಉಗ್ರವಾಗಿ ಖಂಡಿಸಿವೆ. ಅಂತಹ ಬದುಕನ್ನು ಮೋಹ ಎಂದು ಕರೆಯುತ್ತ , ಅಂತಹ ಪಾಪದ ಫಲವಾಗಿ ಅಧೋಗತಿಯೇ ಕಾದಿರುತ್ತದೆ ಎಂಬ ಎಚ್ಚರಿಕೆಯನ್ನೂ ನೀಡಿವೆ[1].

ಒಟ್ಟಾಗಿ ಈ ಎರಡು ಬಗೆಯ ವಿವಾಹಗಳಲ್ಲೂ ಸಹ ವಧೂವರರ ಯೋಗ್ಯತೆಗಿಂತ ಧನಕನಕಗಳ ಪಾತ್ರವೇ ಪ್ರಧಾನವೆನ್ನಿಸಿ, ಅವರ ಭಾವೀಜೀವನಕ್ಕೆ ಕಂಟಕವೆನ್ನಿಸುವುದು ತಪ್ಪಿದ್ದಲ್ಲ. ಸುಸಂಸ್ಕೃತವೆನ್ನಿಸತೊಡಗಿರುವ ಇಂದಿನ ನಾಗರಿಕ ಪ್ರಪಂಚದಲ್ಲೂ ಈ ಪಿಡುಗು ಉಳಿದುಕೊಂಡು ಬಂದಿದೆ ಎನ್ನುವುದು ಸಣ್ಣಪ್ರಮಾದವೇನಲ್ಲ. ಈ ಬಗ್ಗೆ ಕಾನೂನು ಸಹ ಉಗ್ರನಿಲುವನ್ನೇ ಹೊಂದಿರುವುದು ಶ್ಲಾಘನೀಯ. ಇಂದಿನವರೆಗೆ ವರದಕ್ಷಿಣೆ ನಿಮಿತ್ತದಿಂದ ಕನ್ಯೆಯ ಪ್ರಾಣಕ್ಕೆ ಸಂಚಕಾರ ನೀಡುವ ವರ್ಗಕ್ಕೆ ಕನಿಷ್ಠ ಏಳು ವರ್ಷಗಳ ತೀಕ್ಷ್ಣ ಸಜೆಯನ್ನು ಸರಕಾರ ನಿಗದಿಪಡಿಸಿತ್ತು. ಆದರೆ ಇತ್ತೀಚೆಗಷ್ಟೇ ಪ್ರಕಟವಾಗಿರುವ ಸರ್ವೋಚ್ಚ-ನ್ಯಾಯಾಲಯದ ತೀರ್ಪಿನಂತೆ ಈ ಶಿಕ್ಷೆ ಇನ್ನು ಮುಂದೆ ಜೀವಾವಧಿಯದಾಗಿರುತ್ತದೆ ಎಂಬುದು ಸಂತೋಷಿಸಬೇಕಾದ ಸಂಗತಿ. ಈ ಮಧ್ಯೆಯೂ ಸಹ ವರದಕ್ಷಿಣೆಯ ನಿಮಿತ್ತದ ಸಾವು ಗಮನಾರ್ಹ ಸಂಖ್ಯೆಯಲ್ಲೇ ನಡೆದಿರುವುದು ನಾಗರಿಕ ಸಮಾಜಕ್ಕೆ ಸರ್ವಥಾ ಶೋಭಿಸುವ ಸಂಗತಿಯಲ್ಲ. ಈ ಬಗ್ಗೆ ಶಿಕ್ಷಕವರ್ಗ, ಪೋಷಕವರ್ಗವೂ ಸಹ ಕಾಲಕಾಲಕ್ಕೆ ತರುಣವರ್ಗಕ್ಕೆ ವಿವೇಕ ಹೇಳುವ ಕಾರ್ಯವನ್ನು ಒತ್ತುಕೊಟ್ಟು ನಡೆಸಿದಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಪರಿಹಾರವನ್ನು ನಿರೀಕ್ಷಿಸಬಹುದು.

## ವಧುವಿನ ಬಗ್ಗೆ ಅನಾದರವು ತರವಲ್ಲ

ಹಿಂದಿನಕಾಲದಿಂದಲೂ ಸಾಮಾನ್ಯವಾಗಿ ಕಂಡುಬರುವ ಸಾಂಪ್ರದಾಯಿಕ ಹಿನ್ನೆಲೆಯ ಕುಟುಂಬಗಳಲ್ಲಿನ ಒಂದು ದೋಷ ಎಂದರೆ ಮನೆತುಂಬಿಸಿಕೊಂಡ ಸೊಸೆಯನ್ನು ಗಂಡನ

---

೧. ಸ್ತ್ರೀಧನಾನಿ ತು ಯೇ ಮೋಹಾದುಪಜೀವಂತಿ ಬಾಂಧವಾಃ ।
ನಾರೀ ಯಾನಾನಿ ವಸ್ತ್ರಂ ವಾ ತೇ ಪಾಪಾ ಯಾಂತ್ಯಧೋಗತಿಮ್ ॥ -ಮನುಸ್ಮೃತಿ(೩/೫೨)
ನಾನುಶುಶ್ರುಮ ಜಾತ್ವೇತತ್ಪೂರ್ವೇಷ್ವಪಿ ಹಿ ಜನ್ಮಸು ।
ಶುಲ್ಕಸಂಜ್ಞೇನ ಮೂಲ್ಯೇನ ಛನ್ನಂ ದುಹಿತೃವಿಕ್ರಯಮ್ ॥ -ಮನುಸ್ಮೃತಿ(೯/೧೦೦)
ಯೋ ಮನುಷ್ಯೋ ಮನುಷ್ಯಸ್ಯ ವಿಕ್ರಯಾದ್ಧನಮಿಚ್ಛತಿ ।
ತಸ್ಯ ಮೂತ್ರಂ ಪುರೀಷಂ ಚ ಸ ಪರತ್ರೋಪಜೀವತಿ ॥
ಕನ್ಯಾವಿಕ್ರಯಿಣೋ ಮೂರ್ಖಾ ಇಹ ಕಿಲ್ಬಿಷಕಾರಿಣಃ ।
ಪತಂತಿ ನರಕೇ ಘೋರೇ ದಹತ್ಯಾ ಸಪ್ತಮಂ ಕುಲಮ್ ॥ -ಯಮಸ್ಮೃತಿ
ಯಾಸಾಂ ನಾದದತೇ ಶುಲ್ಕಂ ಜ್ಞಾತಯೋ ನ ಸ ವಿಕ್ರಯಃ ।
ಅರ್ಹಣಂ ತತ್ಕುಮಾರೀಣಾಮಾನೃಶಂಸ್ಯಂ ಚ ಕೇವಲಮ್ ॥ -ಮನುಸ್ಮೃತಿ(೩/೫೪)

ಮನೆಯವರು ಅನಾದರದಿಂದ ಕಾಣುವುದು. ಅದರಲ್ಲೂ ಅತ್ತೆ-ಸೊಸೆಯರ ಸಂಬಂಧ ಸಾಮಾನ್ಯವಾಗಿ ಹಾವು-ಮುಂಗುಸಿಯ ಸಂಬಂಧದಂತೆ ಎಂಬುದು ಗಾದೆಯ ಮಾತಿನಂತಾಗಿಬಿಟ್ಟಿದೆ. ಇದು ನಿಶ್ಚಿತವಾಗಿಯೂ ಅನಪೇಕ್ಷಿತವಾದ ಅಂಶ. ಯಾವುದೇ ಕಾರಣಕ್ಕೂ ಸೊಸೆಯನ್ನು ಹಾಗೆ ಕಾಣುವುದನ್ನು ನಮ್ಮ ಸಂಸ್ಕೃತಿ ಒಪ್ಪುವುದಿಲ್ಲ; ಬದಲಿಗೆ ಅವಳನ್ನು ಆದರದಿಂದ ಸ್ವಂತ ಮಗಳಂತೆ ಪ್ರೀತಿ-ವಿಶ್ವಾಸದಿಂದ ಕಾಣಬೇಕು ಎಂಬುದೇ ನಿಜವಾದ ವಿವೇಕ. ಅದರಿಂದ ಅವಳಿಗೆ ಮಾತ್ರವಲ್ಲದೆ ತಮಗೂ ಸಹ ಎಲ್ಲ ಬಗೆಯಲ್ಲಿಯೂ ಹಿತವೆನ್ನಿಸುವುದು ಎಂಬ ತಿಳುವಳಿಕೆ ಇವರಿಗೆ ಇರಬೇಕು. [೧]ಮಾವಂದಿರು, ಗಂಡನ ಅಣ್ಣ-ತಮ್ಮಂದಿರು ಮೊದಲಾಗಿ ಪ್ರತಿಯೊಬ್ಬರೂ ಮನೆಗೆ ಬಂದ ವಧುವನ್ನು , ಅವಳು ಬಯಸುವ ಅನುಕೂಲತೆಗಳನ್ನು ಒದಗಿಸಿ ನೋಡಿ-ಕೊಳ್ಳಬೇಕು. ಆಭರಣ-ವಸ್ತ್ರಾದಿಗಳನ್ನೂ ಸಹ ನೀಡಬೇಕು. ಇದು ಎಲ್ಲರ ಒಳಿತಿಗೂ ಕಾರಣ ಎಂಬುದೇ [೨]ಶಾಸ್ತ್ರಗಳ ನಿಲುವು. ಸ್ತ್ರೀಯರು ಗೋಳಿಡುವ ಮನೆಯಲ್ಲಿ ಎಂದೂ ಸುಖಶಾಂತಿಗಳು ನೆಲೆಸವು ಎಂಬ ಎಚ್ಚರಿಕೆಯನ್ನು ಧರ್ಮಶಾಸ್ತ್ರಗಳು ವಿಧಿಸಿವೆ.

ತಾಯಿಗೆ ತನ್ನ ಮಗ ಹೆಂಡತಿಯ ವಶವಾಗಿ ತನ್ನಿಂದ ದೂರಾಗುವನು ಎಂಬ ಅಂಜಿಕೆ ಸೊಸೆಯನ್ನು ದ್ವೇಷಿಸಲು ಕಾರಣವಾದರೆ, ತಾಯಿಯ ಪ್ರೀತಿಗೆ ವಶವಾಗಿ ಪತಿ ತನ್ನನ್ನು ದೂರಮಾಡಿಯಾನು ಎಂಬ ಭಯ ಸೊಸೆ ಅತ್ತೆಯನ್ನು ದ್ವೇಷಿಸುವಂತೆ ಮಾಡುವುದು. ವಾಸ್ತವವಾಗಿ ತಾಯಿಯ ಸ್ಥಾನವೇ ಬೇರೆ ; ಪತ್ನಿಯ ಸ್ಥಾನವೇ ಬೇರೆ. ಪುರುಷನಿಗೆ ಅವರಿಬ್ಬರಿಗೂ ಸಹ ಉಚಿತವಾದ ಸ್ಥಾನವನ್ನು ಕೊಡುವುದು ಅಗತ್ಯ ಕರ್ತವ್ಯ. ತನ್ನ ಗಂಡನಿಗೆ ಜನ್ಮವಿತ್ತವಳು ಎಂಬ ವಾಸ್ತವವನ್ನು ಅರಿತಲ್ಲಿ, ಸೊಸೆ ಅತ್ತೆಯನ್ನು ಆದರಿಸುವಲ್ಲಿ ಸಂಕೋಚ ಹುಟ್ಟಲಾರದು ; ಅದರಂತೆ ತನ್ನ ಮಗನ ಬಾಳಿಗೆ ಪೂರ್ಣತೆಯನ್ನಿತ್ತು ವಂಶವನ್ನು ಬೆಳೆಸುವ ಗೃಹಲಕ್ಷ್ಮಿ ಎಂಬುದಾಗಿ ಸೊಸೆಯ ಸ್ಥಾನವನ್ನು ಅರಿತಲ್ಲಿ ಅವಳನ್ನು ಆದರದಿಂದ ಕಾಣುವಲ್ಲಿ ಅತ್ತೆಗೂ ಆತಂಕವಿರದು. ಇವಾವುದನ್ನೂ ಗಮನಿಸದೆ, ನಿಷ್ಕಾರಣವಾಗಿ ಅವರಿಬ್ಬರೂ ಒಬ್ಬರನ್ನೊಬ್ಬರು ಸಂಶಯದಿಂದ ಕಾಣುವುದು ಅವರಿಗೆ ಮಾತ್ರವಲ್ಲದೇ, ಇಡೀ ಕುಟುಂಬಕ್ಕೆ ಆಘಾತವನ್ನುಂಟು ಮಾಡುವುದು. ಇವರಿಬ್ಬರ

---

೧. ಪಿತೃಭಿರ್ಭ್ರಾತೃಭಿಶ್ಚೈತಾಃ ಪತಿಭಿರ್ದೇವರೈಸ್ತಥಾ ।
ಪೂಜ್ಯಾ ಭೂಷಯಿತವ್ಯಾಶ್ಚ ಬಹುಕಲ್ಯಾಣಮೀಪ್ಸುಭಿಃ ॥ -ಮನುಸ್ಮೃತಿ(೩,೫೫)

೨. ಶೋಚಂತಿ ಜಾಮಯೋ ಯತ್ರ ವಿನಶ್ಯತ್ಯಾಶು ತತ್ಕುಲಮ್ ।
ನ ಶೋಚಂತಿ ತು ಯತ್ರೈತಾ ವರ್ಧತೇ ತದ್ಧಿ ಸರ್ವದಾ ॥
ಜಾಮಯೋ ಯಾನಿ ಗೇಹಾನಿ ಶಪಂತ್ಯಪ್ರತಿಪೂಜಿತಾಃ ।
ತಾನಿ ಕೃತ್ಯಾಹತಾನೀವ ವಿನಶ್ಯಂತಿ ಸಮಂತತಃ ॥
ತಸ್ಮಾದೇತಾಃ ಸದಾ ಪೂಜ್ಯಾ ಭೂಷಣಾಚ್ಛಾದನಾಶನೈಃ ।
ಭೂತಿಕಾಮೈರ್ನರೈರ್ನಿತ್ಯಂ ಸತ್ಕಾರೇಷೂತ್ಸವೇಷು ಚ ॥ - ಮನುಸ್ಮೃತಿ(೩/೫೭-೫೯)

ಮಧ್ಯೆ ನಲುಗುವ ಗಂಡನೆಂಬ ಪ್ರಾಣಿ ಸಮಸ್ಯೆಯಿಂದ ಹೊರಬರಲಾರದೆ, ಹೆಚ್ಚಿನ ಸಂದರ್ಭಗಳಲ್ಲಿ ದುಶ್ಚಟಗಳಿಗೆ ಬಲಿಯಾಗಿ ಇಡೀ ಕುಟುಂಬವನ್ನೇ ದುರಂತದತ್ತ ತಳ್ಳುವನು. ಒಟ್ಟಾಗಿ ಗೃಹಸ್ಥಾಶ್ರಮದ ಹಿರಿಮೆಯನ್ನು ಅರ್ಥಮಾಡಿಕೊಳ್ಳುವಲ್ಲಿ ವಿಫಲರಾಗುವುದೇ ಈ ಎಲ್ಲ ಬಗೆಯ ಅನರ್ಥಗಳಿಗೂ ಮೂಲ ಎಂಬ ಸತ್ಯವನ್ನು ಮನಗಾಣಬೇಕಿದೆ.

ಬೇರೊಂದು ಮನೆಗೆ ಸೊಸೆಯಾಗಿ ತೆರಳುವ ತಮ್ಮ ಮಗಳು ಅಲ್ಲಿ ಸುಖ-ದಿಂದಿರಬೇಕು ಎಂದು ಅಪೇಕ್ಷಿಸುವ ತಂದೆತಾಯಿಗಳು ತಮ್ಮ ಮನೆಗೆ ಬರುವ ಸೊಸೆಯನ್ನು ಮಾತ್ರ ಹಾಗೆ ನೋಡಿಕೊಳ್ಳದೆ ಇರುವುದು ಎಂತಹ ಆಭಾಸ. ಇದರ ಮುಂದುವರೆದ ಭಾಗ ಎಂಬಂತೆ ಸೊಸೆಯೂ ಸಹ ಮುಂದೆ ಅತ್ತೆಯಾದಾಗ, ತನ್ನ ಸೊಸೆಯನ್ನೂ ಸಹ ಕೆಟ್ಟದಾಗಿ ನಡೆಸಿಕೊಳ್ಳುವುದು ಒಂದು ಸಂಪ್ರದಾಯ ಎಂಬಂತೆ ಅನೇಕ ಕಡೆ ನಡೆದುಬಂದಿರುವುದು ಕುಟುಂಬಕ್ಕಾಗಲೀ, ಸಮಾಜಕ್ಕಾಗಲೀ ಗೌರವ ತರುವ ಸಂಗತಿಯಲ್ಲ. ತೋರಿಕೆಗೆ ಹೆಚ್ಚು ನಾಗರಿಕ, ಸುಸಂಸ್ಕೃತ ಎನ್ನಿಸುತ್ತಿರುವ ಇತ್ತೀಚಿನದಿನಗಳಲ್ಲೂ ಈ ಪಿಡುಗು ಗಣನೀಯವಾಗಿಯೇ ಉಳಿದುಕೊಂಡಿದೆ ಎಂಬುದು ಖೇದದ ಸಂಗತಿ. ಇದರಿಂದಾಗಿಯೇ ಆಧುನಿಕ ತರುಣಿಯರು ಅತ್ತೆ- ಮಾವಂದಿರಿಲ್ಲದ ಮನೆಯೇ ಹಿತ ಎಂಬ ಭಾವವನ್ನು ಹೊಂದಲು ಕಾರಣವಾಗಿದೆ ಎಂದು ತಿಳಿಯಬಹುದು. ಆದರೆ ಇದು ವಿವೇಕದಿಂದ ಪರಿಹರಿಸಿಕೊಳ್ಳಬಹುದಾದ ವಿಷಯ ಎಂಬುದನ್ನು ಎಲ್ಲರೂ ಮನಗಾಣಬೇಕು. ಯಶಸ್ವೀ ವಿವಾಹಜೀವನಕ್ಕೆ ಅಗತ್ಯವಾದ ಅಂಶಗಳಲ್ಲಿ ಇದೂ ಸಹ ಒಂದು ಎಂಬ ಜಾಗೃತಿ ಮೂಡುವ ಅಗತ್ಯ ಎದ್ದುಕಾಣುತ್ತದೆ.

## ಸ್ತ್ರೀಧನವು ಅಗ್ರಾಹ್ಯ

ಸ್ತ್ರೀಯರಿಗೆ ವಿವಾಹದ ಸಮಯದಿಂದ ಪ್ರಾರಂಭಿಸಿ, ವಿವಿಧ ಪ್ರಸಂಗಗಳಲ್ಲಿ ಲಭಿಸುವ ಧನವು ಸ್ತ್ರೀಧನ ಎನ್ನಿಸುವುದು. ಅಂತಹ ಸ್ತ್ರೀಧನವು ಆ ಸ್ತ್ರೀಯ ಸ್ವತ್ತೇ ಆಗಿದ್ದು, ಅವಳ ಅನುಮತಿಯನ್ನು ಪಡೆಯದೆ ಅದನ್ನು ಇತರರು ಉಪಯೋಗಿಸುವಂತಿಲ್ಲ. ಇದು ಸಹ ಸ್ತ್ರೀಯರಿಗೆ ಮತ್ತೊಂದು ಬಗೆಯಲ್ಲಿ ಮಹತ್ತ್ವವನ್ನು ನೀಡುವ ಪರಿ ಎನ್ನಬಹುದು.

ಅಧ್ಯಗ್ನ್ಯಧ್ಯಾವಾಹನಿಕಂ ದತ್ತಂ ಚ ಪ್ರೀತಿಕರ್ಮಣಿ।
ಭ್ರಾತೃಮಾತೃಪಿತೃಪ್ರಾಪ್ತಂ ಷಡ್ವಿಧಂ ಸ್ತ್ರೀಧನಂ ಸ್ಮೃತಮ್ ॥ -ಮನುಸ್ಮೃತಿ(೯/೧೯೪)

ವಿವಾಹಕಾಲೇ ಯತ್ ಸ್ತ್ರೀಭ್ಯೋ ದೀಯತೇ ಹ್ಯಗ್ನಿಸನ್ನಿಧೌ।
ತದಧ್ಯಗ್ನಿಕೃತಂ ಸದ್ಭಿಃ ಸ್ತ್ರೀಧನಂ ಪರಿಕೀರ್ತಿತಮ್ ॥ -ಕಾತ್ಯಾಯನಸ್ಮೃತಿ

ಯತ್ಪುನರ್ಲಭತೇ ನಾರೀ ನೀಯಮಾನಾ ತು ಪೈತೃಕಾತ್।
ಅಧ್ಯಾವಾಹನಿಕಂ ನಾಮ ತತ್ ಸ್ತ್ರೀಧನಮುದಾಹೃತಮ್ ॥

ಅನ್ವಾಧೇಯಂ ಯದ್ದತ್ತಂ ಪತ್ಯಾ ಪ್ರೀತೇನ ಚೈವ ಯತ್ ।
ಪತ್ಯೌ ಜೀವತಿ ವೃತ್ತಾಯಾಃ ಪ್ರಜಾಯಾಸ್ತದ್ಧನಂ ಭವೇತ್ ॥ -ಕಾತ್ಯಾಯನಸ್ಮೃತಿ(೩)

ವಿವಾಹಾತ್ ಪರತೋ ಯತ್ತು ಲಬ್ಧಂ ಭರ್ತೃಕುಲೇ ಸ್ತ್ರಿಯಾ ।
ಅನ್ವಾಧೇಯಂ ತದುಕ್ತಂ ತು ಸರ್ವಬಂಧುಕುಲೇ ತಥಾ ॥ -ಕಾತ್ಯಾಯನಸ್ಮೃತಿ

ಪಿತೃಮಾತೃಪತಿಭ್ರಾತೃದತ್ತಮಧ್ಯಾಸ್ಯುಪಾಗತಮ್ ।
ಆಧಿವೇದನಿಕಂ ಚೈವ ಸ್ತ್ರೀಧನಂ ಪರಿಕೀರ್ತಿತಮ್ ॥ -ಅಗ್ನಿಪುರಾಣ

ವಿವಾಹದ ಸಮಯದಲ್ಲಿ ಅಗ್ನಿಸನ್ನಿಧಿಯಲ್ಲಿ ವಧುವಿಗೆ ಲಭಿಸುವ ಬಗೆಬಗೆಯ ಕಾಣಿಕೆ 'ಅಧ್ಯಗ್ನಿರ್ಕತಾ' ಎನ್ನಿಸುವುದು; ತಂದೆಯ ಮನೆಯಿಂದ ತೆರಳುವಾಗ ತನ್ನೊಂದಿಗೆ ತರುವ ಸಂಪತ್ತು 'ಅಧ್ಯಾವಾಹನಿಕ' ಎನ್ನಿಸುವುದು; ಪತಿಯು ಪ್ರೀತಿಯಿಂದ ನೀಡುವ 'ಅನ್ವಾಧೇಯ' ಎನ್ನಿಸುವುದು; ಅದರಂತೆ ಗಂಡನ ಮನೆಯಲ್ಲಿದ್ದಾಗ ಅವಳಿಗೆ ಬಂಧುಬಾಂಧವರಿಂದ ಸಂಪತ್ತು ಸಹ ಅನ್ವಾಧೇಯವೇ. ತಂದೆ, ತಾಯಿ, ಪತಿ ಹಾಗೂ ಸಹೋದರರು ಮೊದಲಾದವರು ನೀಡುವ ಸಂಪತ್ತು 'ಆಧಿವೇದನಿಕ' ಎನ್ನಿಸುವುದು;

## ಮರೆಯಾಗುತ್ತಿರುವ ಅವಿಭಕ್ತ ಕುಟುಂಬಗಳು

ಅವಿಭಕ್ತಕುಟುಂಬಗಳಲ್ಲಿ ಉಂಟಾಗುವ ಮತ್ತೊಂದು ಬಗೆಯ ಸಮಸ್ಯೆ ಎಂದರೆ ಅಣ್ಣ-ತಮ್ಮಂದಿರ ಪತ್ನಿಯರಲ್ಲಿ ಪರಸ್ಪರ ಮಾತ್ಸರ್ಯ. ಹಿಂದೆ ಪುರುಷರು ವಿಶೇಷವಾಗಿ ರಾಜಮಹಾರಾಜರು ಅನೇಕ ಪತ್ನಿಯರನ್ನು ಹೊಂದುವ ಪದ್ಧತಿ ಇತ್ತು . ಅಂತಹ ಸಂದರ್ಭಗಳಲ್ಲಿ ಅವನ ಪತ್ನಿಯರು ಪರಸ್ಪರ ಸವತಿಯರೆನ್ನಿಸಿ, ಅವರಲ್ಲಿ ಮಾತ್ಸರ್ಯಭಾವ ಸಹಜವಾಗಿಯೇ ಉಂಟಾಗುತ್ತಿತ್ತು. ಉತ್ತಾನಪಾದರಾಜನ ಪತ್ನಿಯರಾದ ಸುನೀತಿ ಸುರುಚಿಯರಲ್ಲಿ ಇದ್ದ ಈ ಬಗೆಯ ಮಾತ್ಸರ್ಯ ಸರ್ವವಿದಿತ. ಅದರ ಫಲವಾಗಿ ಧ್ರುವ ಕಾಡುಪಾಲಾಗಬೇಕಾಯಿತು. ಆದರೆ ತಾಯಿ ನೀಡಿದ ಉಪದೇಶದ ಹಿನ್ನೆಲೆಯಿಂದಾಗಿ ಧ್ರುವ ಭಗವಂತನನ್ನು ಸಾಕ್ಷಾತ್ಕರಿಸಿಕೊಂಡು ಲೋಕವಿಖ್ಯಾತನಾದ. ಕೈಕೇಯಿಯ ಸವತಿ ಮಾತ್ಸರ್ಯ ಶ್ರೀರಾಮನ ವನವಾಸಕ್ಕೆ ಕಾರಣಗಳಲ್ಲಿ ಒಂದೆನಿಸಿತು ಎಂಬುದು ರಾಮಾಯಣದಿಂದ ತಿಳಿದುಬರುವ ವಿವರ. ಮಂಥರೆಯ ದುರ್ಬೋಧನೆಗೆ ಒಳಗಾದ ಕೈಕೇಯಿ, ಶ್ರೀರಾಮನಿಗೆ ಪಟ್ಟಾಭಿಷೇಕವಾದಲ್ಲಿ ತನ್ನ ಸವತಿ ಕೌಸಲ್ಯೆಯು ರಾಜಮಾತೆ ಎನ್ನಿಸುವ ಗೌರವಕ್ಕೆ ಪಾತ್ರಳಾಗುವಳು ಎಂಬ ಮಾತ್ಸರ್ಯದಿಂದ ಶ್ರೀರಾಮನ ವನವಾಸವನ್ನು ವರವನ್ನಾಗಿ ದಶರಥನನ್ನು ಕೇಳಿಕೊಂಡಳು. ಈ ದಿನಗಳಲ್ಲಿ ಬಹುಪತ್ನಿತ್ವ ಕಾನೂನುಬಾಹಿರ- ವೆನ್ನಿಸಿರುವುದರಿಂದ ಇಂತಹ ಪ್ರಸಂಗಗಳಿಗೆ ಅವಕಾಶವಿಲ್ಲ. ಆದರೆ ಅಣ್ಣ-ತಮ್ಮಂದಿರ ಪತ್ನಿಯರೂ ಸಹ ಒಂದುರೀತಿಯಲ್ಲಿ ಸವತಿಯರಿದ್ದಂತೆ. ಅವರಲ್ಲಿ ನಡೆಯುವ ಪರಸ್ಪರ ಮೇಲಾಟ ಇಡೀ ಕುಟುಂಬದಲ್ಲಿ ಅಶಾಂತಿಯ ವಾತಾವರಣಕ್ಕೆ

ಕಾರಣವಾಗುವುದು ಅಪರೂಪವೇನಲ್ಲ. ಆದರೆ ಈ ಕಾರಣದಿಂದ ಅವಿಭಕ್ತ ಕುಟುಂಬದ ಪರಿಕಲ್ಪನೆಯನ್ನು ತೊರೆಯಬೇಕಿಲ್ಲ. ಪರಸ್ಪರರನ್ನು ಸರಿಯಾಗಿ ಅರ್ಥಮಾಡಿಕೊಂಡು ವಿವೇಕದಿಂದ ವರ್ತಿಸಿದಲ್ಲಿ ಯಾವುದೇ ಬಗೆಯ ಭಿನ್ನಾಭಿಪ್ರಾಯಕ್ಕೂ ಅವಕಾಶವಿರದೆ ಹೆಚ್ಚಿನ ರೀತಿಯಲ್ಲಿ ಅನುಕೂಲಕರವಾದ ವಾತಾವರಣವೇ ಮೂಡುವುದು.

## ಜಾತಕಗಳ ಹೊಂದಾಣಿಕೆ

ಕನ್ಯಾವರರ ಪ್ರಸ್ತಾಪದ ಬಳಿಕ ಮುಖ್ಯವಾದ ಕಾರ್ಯ ಅವರಿಬ್ಬರ ಜಾತಕಗಳ ಹೊಂದಾಣಿಕೆ. ಇದು ಜ್ಯೋತಿಃಶಾಸ್ತ್ರದ ಹಿನ್ನೆಲೆಯಲ್ಲೇ ನಡೆಯಬೇಕಾದ ಕಾರ್ಯ. ಇದಕ್ಕಾಗಿ ಸಮರ್ಥ ಜ್ಯೋತಿಷ್ಕರನ್ನು ಸಂಪರ್ಕಿಸುವುದು ಅಗತ್ಯ. ಇಂದಿನ ದಿನಗಳಲ್ಲಿ ಹೆಚ್ಚಿನ ಜ್ಯೋತಿಷ್ಕರು ಇಂತಹ ಕಾರ್ಯವನ್ನು ಪ್ರಾಮಾಣಿಕವಾಗಿ ನಿರ್ವಹಿಸದೇ ತಮ್ಮ ಸ್ವಂತ ಲಾಭದ ದೃಷ್ಟಿಯಿಂದ ಇಲ್ಲಸಲ್ಲದ ದೋಷಗಳನ್ನು ಉತ್ಪ್ರೇಕ್ಷಿಸಿ, ಉಭಯಪಕ್ಷದವರನ್ನು ನಿರಾಶೆಗೊಳಿಸುವುದುಂಟು ; ಅಥವಾ ಸುಲಿಗೆಯ ಸಾಧನವನ್ನಾಗಿ ಸಲ್ಲದ ಭಯಹುಟ್ಟಿಸಿ ಬಗೆಬಗೆಯ ಅನಗತ್ಯ ಪರಿಹಾರಗಳನ್ನು ಸೂಚಿಸುವುದುಂಟು.

ಜ್ಯೋತಿಷ್ಯದ ಅಗತ್ಯ ವೈದಿಕಸಂಸ್ಕೃತಿಯಲ್ಲಿ ಅನಿವಾರ್ಯ. ಜ್ಯೋತಿಃಶಾಸ್ತ್ರವು ಆರು ವೇದಾಂಗಗಳಲ್ಲಿ ಒಂದು ಎಂಬುದಾಗಿ ಪರಿಗಣಿತವಾಗಿದೆ (ಶಿಕ್ಷಾ, ವ್ಯಾಕರಣ, ಛಂದಸ್ಸು ನಿರುಕ್ತ ಹಾಗೂ ಕಲ್ಪ - ಉಳಿದ ೫ ವೇದಾಂಗಗಳು). ಆದರೆ ಈ ಶಾಸ್ತ್ರ ಅಷ್ಟು ಸುಲಭವಾಗಿ ನಿಲುಕವಂತಹುದಲ್ಲ. ಶಾಸ್ತ್ರದಲ್ಲಿನ ಅಪಾರ ವೈದುಷ್ಯದೊಂದಿಗೆ ಅದನ್ನು ಸಮಾಜದ ಹಿತಕ್ಕಾಗಿ ಪ್ರಜ್ಞಾವಂತಿಕೆಯಿಂದ ಬಳಸಬೇಕಾದ ವಿಶೇಷ ಅರ್ಹತೆಯು ಜ್ಯೋತಿಷ್ಕರಿಗೆ ಇರಲೇಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ಜಾತಕದ ಪರಿಶೀಲನೆಯ ಕಾರ್ಯ ಹೆಚ್ಚು ಜವಾಬ್ದಾರಿಯುತ ಕಾರ್ಯಗಳಲ್ಲಿ ಒಂದೆನ್ನಿಸದೆ. ವೈದ್ಯರು ಶಸ್ತ್ರಚಿಕಿತ್ಸೆಯ ಮುನ್ನ ರೋಗಿಗೆ ಹಿತವಾಗುವಂತೆ ಅವನ ರಕ್ತದೊತ್ತಡ ಮೊದಲಾದವುಗಳ ಸಮಗ್ರಮಾಹಿತಿಯನ್ನು ವಿಶ್ಲೇಷಿಸಿ, ನಿರ್ಣಯ ಕೈಗೊಳ್ಳುವ ಪ್ರಸಂಗವನ್ನು ಇದಕ್ಕೆ ನಿದರ್ಶನವನ್ನಾಗಿ ಗಮನಿಸಬಹುದು.

ಜ್ಯೋತಿಃಶಾಸ್ತ್ರದ ಅಗತ್ಯ ಜಾತಕಗಳ ಹೊಂದಾಣಿಕೆಗೆ ಸಂಬಂಧಿಸಿದಂತೆ ಹೆಚ್ಚಾಗಿ ಕಾಣುವುದು ಹಿಂದೆ ತಿಳಿಸಿದಂತೆ ಅಪ್ರೌಢರ ವಿವಾಹ ಪ್ರಸಂಗಗಳಲ್ಲಿ, ಕಾರಣ ಅವರು ಮಾನಸಿಕವಾಗಿಯೂ ಸಹ ಅಪ್ರೌಢರಾಗಿರುವುದರಿಂದ ಮುಂದಿನ ದಾಂಪತ್ಯದ ಯಶಸ್ಸಿನ ಬಗ್ಗೆ ಸೂಕ್ತ ನಿರ್ಧಾರವನ್ನು ಕೈಗೊಳ್ಳುವ ಪಕ್ವತೆಯನ್ನು ಪಡೆದಿರುವ ಸಂಭವ ತುಂಬ ಕಡಿಮೆ. ಆ ಹಿನ್ನೆಲೆಯಲ್ಲಿ ಅದನ್ನು ನಿರ್ಧರಿಸಲು ಇರುವ ಸಮರ್ಥ ಮಾರ್ಗವನ್ನಾಗಿ ಜ್ಯೋತಿಃಶಾಸ್ತ್ರವನ್ನವಲಂಬಿಸುವುದು ಅನಿವಾರ್ಯವಾಗಿತ್ತು. ಆದರೆ ಇಂದು ಕಾಲ ಬದಲಾಗಿದೆ. ಹೆಚ್ಚಿನ ಪ್ರಸಂಗಗಳಲ್ಲಿ ನಡೆಯುವುದು ಪ್ರೌಢವಿವಾಹವೇ. ಅದಕ್ಕೆ ಕಾನೂನಿನ ಬೆಂಬಲವೂ ಇದೆ. ಈ ಹಂತದಲ್ಲಿ ವಧೂವರರು ಪರಸ್ಪರರನ್ನು ಅರಿತು,

ನಿರ್ಧರಿಸಲು ಅಗತ್ಯವಾದ ಪಕ್ವತೆಯನ್ನು ಪಡೆದಿರುವುದರಿಂದ ಜ್ಯೋತಿಃಶಾಸ್ತ್ರದ ಪ್ರಯೋಜನ ಹಿಂದಿನ ಕಾಲದಷ್ಟು ಇಲ್ಲ ಎನ್ನಬಹುದು. ಅದರೊಂದಿಗೆ ಇಂದಿನ ಕಾಲದಲ್ಲಿ ಅನುಪಾತದಲ್ಲಿ ಕನ್ಯೆಯರ ಸಂಖ್ಯೆ ಗಣನೀಯವಾಗಿ ಕುಸಿದಿರುವುದರಿಂದ ವಿವಾಹ ಘಟನೆಗೆ ಧನಾತ್ಮಕ ಚಿಂತನೆಯ ಜ್ಯೋತಿಃಶಾಸ್ತ್ರದ ಪರಿಣತಿ ಹೆಚ್ಚು ಅಗತ್ಯವೆನ್ನಿಸುತ್ತದೆ.

ಇದರಿಂದ ಸಾಧ್ಯವಾದಷ್ಟು ಜಾತಕಗಳ ಹೊಂದಾಣಿಕೆಯತ್ತ ಹೆಚ್ಚು ಗಮನ ಹರಿಸುವುದು ಸೂಕ್ತ. ಈ ಹೊಂದಾಣಿಕೆ ಮೂರು ಬಗೆಯಾದುದು : ಕೂಟಘಟನೆ, ದೋಷಘಟನೆ ಹಾಗೂ ಮನೋಘಟನೆ ಎಂಬುದಾಗಿ ಮೂರು ಬಗೆ. ಸಾಮಾನ್ಯ ಹಂತದಲ್ಲಿ ಕೂಟಘಟನೆ ಸಾಕು ಎನ್ನಿಸುವುದು. ಹೆಚ್ಚಿನ ಪಂಚಾಂಗಗಳಲ್ಲಿ ಈ ಲೆಕ್ಕದಲ್ಲಿ ಕೋಷ್ಟಕಗಳನ್ನು ನೀಡಿರುತ್ತಾರೆ. ಅದರಂತೆ ೩೬ ಗುಣಗಳಲ್ಲಿ ೧೮ ಗುಣಗಳು ಬಂದರೂ ಸಾಕು ಎನ್ನಿಸುವುದು. ಹೆಚ್ಚಿನ ಜನ ಇದಕ್ಕೆ ಹೆಚ್ಚು ಮಹತ್ತ್ವ ನೀಡಿ ಈ ಹಂತದಲ್ಲಿ ಕಾರಣಾಂತರದಲ್ಲಿ ೧೮ಕ್ಕಿಂತ ಕಡಿಮೆ ಬಂದಲ್ಲಿ ಆ ಜಾತಕಗಳು ಹೊಂದುವುದಿಲ್ಲ ಎಂದು ತೀರ್ಮಾನಿಸಿ, ಸಂಬಂಧ ಬೆಳೆಸಲು ಇಚ್ಛಿಸದೆ ಹೋಗುವುದುಂಟು. ಆದರೆ ಇದರಲ್ಲಿ ದೋಷಘಟನೆಯ ಅಂಶವನ್ನು ಇಂತಹ ಜನ ಮರೆಯುವರು. ವಧೂವರರ ಜಾತಕಗಳಲ್ಲಿ ಕುಜದೋಷ ಮೊದಲಾದವುಗಳು ಇರುವುದರ ಬಗ್ಗೆ ಅನ್ವೇಷಣೆ ಅಗತ್ಯ. ಇಬ್ಬರ ಜಾತಕಗಳಲ್ಲಿ ಸಮಾನದೋಷಗಳಿದ್ದಲ್ಲಿ ಅದೂ ಸಹ ಗುಣವೇ ಎನ್ನಿಸಿ, ಜಾತಕಗಳ ಹೊಂದಾಣಿಕೆ ಸೂಕ್ತವೆನ್ನಿಸುವುದು. ವರನ ಜಾತಕದಲ್ಲಿನ ದೋಷಗಳಿಗಿಂತ ಕನ್ಯೆಯ ಜಾತಕದಲ್ಲಿನ ದೋಷಗಳು ಹೆಚ್ಚಿದ್ದಲ್ಲಿ ಸಾಮಾನ್ಯವಾಗಿ ಗಮನಿಸಬೇಕಾದ ಅಂಶ-ವೆನ್ನಿಸುವುದು. ಆ ಸಮಯದಲ್ಲೂ ಆ ದೋಷಗಳ ಪರಿಹಾರಕ್ಕೆ ಶಾಂತಿರೂಪದ ಪರಿಹಾರಗಳು ವಿಹಿತವಾಗಿರುವುದನ್ನು ಗಮನಿಸಬೇಕು. ದೋಷವೆಂದ ಮಾತ್ರಕ್ಕೆ ತ್ಯಾಜ್ಯ ಎಂದೇನೂ ಭಾವಿಸಬೇಕಿಲ್ಲ. ಹೆಚ್ಚಿನ ಸಂದರ್ಭಗಳಲ್ಲಿ ಸುಲಭ ರೀತಿಯಲ್ಲೇ ಶಾಂತಿಪ್ರಕ್ರಿಯೆಗೆ ಅವಕಾಶವಿದ್ದು ಜಾತಕಗಳ ಹೊಂದಾಣಿಕೆ ಶಕ್ಯವೆನ್ನಿಸುವುದು.

ಇನ್ನು ಪ್ರಧಾನವಾಗಿ ಗಮನಿಸಬೇಕಾದ ಮತ್ತೊಂದು ಹೊಂದಾಣಿಕೆ ನಕ್ಷತ್ರಗಳದ್ದು. ಮೂಲ, ಆಶ್ಲೇಷ, ಜ್ಯೇಷ್ಠ ಹಾಗೂ ವಿಶಾಖ - ಈ ನಕ್ಷತ್ರಗಳ ಕನ್ಯೆಯರ ಘಟನೆಯಾದಲ್ಲಿ ಕ್ರಮವಾಗಿ ಮಾವ, ಅತ್ತೆ, ಭಾವ, ಮೈದುನರಿಗೆ ಅಪಾಯ ಎಂಬ ಮಾತು ಜ್ಯೋತಿಃ ಶಾಸ್ತ್ರದಲ್ಲಿದೆ[1]. ಇದನ್ನು ಆಧರಿಸಿ, ಅನೇಕರು ಆ ನಕ್ಷತ್ರಗಳ ಹೆಸರು ಕೇಳುತ್ತಲೇ ಜಾತಕದ ಹೊಂದಾಣಿಕೆಯ ಯೋಚನೆಯನ್ನೂ ಸಹ ಕೈಬಿಡುವುದುಂಟು. ಇಲ್ಲೂ ಒಂದು ಪ್ರಧಾನ ಅಂಶವನ್ನು ಕೆಲವರು ಗಮನಿಸದೇ ಹೋಗುವುದುಂಟು. ಇಂತಹ ಸಂದರ್ಭದಲ್ಲಿ ಆಯಾದೋಷಕ್ಕೆ ಪಾತ್ರರೆನ್ನಿಸುವ ಮಾವ ಮೊದಲಾದವರು ಇಲ್ಲವಾಗಿದ್ದಲ್ಲಿ ಆ ದೋಷ

---

೧. ಮೂಲಜಾ ಶ್ವಶುರಂ ಹಂತಿ ವ್ಯಾಲಜಾ ತು ತದಂಗನಾಮ್ ।
ಜ್ಯೇಷ್ಠಜಾ ಭಾವುಕಂ ಹಂತಿ ದೇವರಂ ತು ದ್ವಿದೈವಜಾ ॥ -ಜ್ಯೋತಿಶ್ಶಾಸ್ತ್ರ

ಪರಿಹಾರವಾದಂತೆಯೇ ಅರ್ಥ ಎಂಬುದು ಮೊದಲಿಗೆ ಗಮನಿಸಬೇಕಾದ ಸಂಗತಿ. ಎರಡನೆಯದು ಈ ಎಲ್ಲ ನಕ್ಷತ್ರಗಳೂ ಸಮಗ್ರವಾಗಿಯೇ ನಿಷಿದ್ಧವೆನ್ನಿಸಿಲ್ಲ. ಮೂಲನಕ್ಷತ್ರ ೪ನೇ ಪಾದ, ಆಶ್ಲೇಷನಕ್ಷತ್ರದ ೧ನೇ ಪಾದ, ವಿಶಾಖ ಹಾಗೂ ಜ್ಯೇಷ್ಠನಕ್ಷತ್ರಗಳ ೧,೨,೩ನೇ ಪಾದಗಳಿಗೂ, ದೋಷವಿಲ್ಲ ಎಂಬುದನ್ನು ತಪ್ಪದೆ ಗಮನಿಸಬೇಕು. ಇನ್ನು ದೋಷವಿರುವ ಪಾದಗಳಿಗೂ ಸಹ ಶಾಂತಿಯ ಮೂಲಕ ಪರಿಹಾರ ಪಡೆಯುವ ಅವಕಾಶವನ್ನು ಶಾಸ್ತ್ರಗಳು ನೀಡಿವೆ. ಅಲ್ಲದೆ ಇಲ್ಲಿ ಅತ್ತೆ ಮೊದಲಾದವರಿಗೆ ಅನಿಷ್ಟವೆಂದರೆ ಮರಣವೇ ಎಂದೇನೂ ಆಗಬೇಕಿಲ್ಲ. ಕೆಲವು ಬಗೆಯ ಕ್ಲೇಶಗಳು ಮಾತ್ರ ಎಂಬ ಅರ್ಥವನ್ನು ತಿಳಿಯಬಹುದು. ಕನ್ಯೆಯು ಇತರ ಎಲ್ಲ ದೃಷ್ಟಿಯಿಂದಲೂ ಯೋಗ್ಯಳೆನ್ನಿಸಿದ್ದಲ್ಲಿ ಇಂತಹ ದೋಷಗಳನ್ನು ಶಾಂತಿಪ್ರಕ್ರಿಯೆಯಿಂದ ಕಳೆದುಕೊಳ್ಳಲು ಸಾಧ್ಯವಿರುವುದರಿಂದ ಸಂಪೂರ್ಣ ತ್ಯಾಜ್ಯ ಎಂಬ ಭಾವವನ್ನು ಈ ಕಾರಣದಿಂದ ಮಾತ್ರವೇ ತಳೆಯಬೇಕಿಲ್ಲ. ಸಾಮಾನ್ಯವಾಗಿ ಇಂತಹ ನಕ್ಷತ್ರಗಳ ಶಾಂತಿಯನ್ನು ಜನನ ಸಮಯದಲ್ಲೇ ಮಾಡುವುದು ಇನ್ನೂ ಹೆಚ್ಚು ಪರಿಣಾಮಕಾರಿ.

ಅಂತೂ ಈ ಕಾರಣಕ್ಕಾಗಿಯೇ ಜಾತಕಗಳು ಹೊಂದುವುದಿಲ್ಲ ಎಂಬ ತಪ್ಪು ಕಲ್ಪನೆಯನ್ನು ಆದಷ್ಟು ತೊರೆಯುವುದು ವಿಹಿತ ಎಂಬುದು ಮಾತ್ರ ಇಲ್ಲಿಯ ಮುಖ್ಯ ಆಶೆ.

ಮೂರನೆಯದು ಹಾಗೂ ಅತ್ಯಂತ ಮುಖ್ಯವಾದುದು ಎಂದರೆ ವಧೂವರರ ಮನೋಘಟನೆ :ಯಸ್ಯಾಂ ಮನಶ್ಚಕ್ಷುಷೋರ್ನಿರ್ಬಂಧಸ್ತಸ್ಯಾಮೃದ್ಧಿಃ -(ಆಪಸ್ತಂಬ). ವಧೂವರರು ಪರಸ್ಪರ ಮೆಚ್ಚಿದಲ್ಲಿ ಅದು ಪ್ರಧಾನವಾದ ಜಾತಕಘಟನೆ ಎಂದೇ ಭಾವಿಸಬೇಕು. ಆದರೆ ಇದು ಕೊನೆಯ ಹಂತದ ನಿರ್ಣಯವೇ ಹೊರತು ಮೊದಲ ಹಂತದ್ದಲ್ಲ; ಎಂದರೆ ಪ್ರೇಮವೆಂಬ ಹೆಸರಿನ ಕಾಮವಿವಾಹಕ್ಕಲ್ಲ ಎಂಬ ಎಚ್ಚರಿಕೆಯನ್ನು ಮಾತ್ರ ಮರೆಯಕೂಡದು[೧].

ಇದು 'ವೇದಃ ಸ್ಮೃತಿಃ ಸದಾಚಾರಃ ಸ್ವಸ್ಯ ಚ ಪ್ರಿಯಮಾತ್ಮನಃ' ಎಂಬ ಸ್ಮೃತಿವಾಕ್ಯ (೨/೧೨)ದಲ್ಲಿನ ಆತ್ಮತೃಪ್ತಿ ಎಂಬ ಮಾತಿಗೆ ವೇದಾದಿಗಳ ಅನಂತರದ ಸ್ಥಾನ ಹೇಗೋ ಹಾಗೆ ಎಂಬ ಮಾತಿಗೆ ಅನುಗುಣವಾದುದು ಎಂದು ಸಹ ತಿಳಿಯಬೇಕು.

ಇಂತಹ ಸಂದರ್ಭಗಳಲ್ಲಿ ಸಮಸ್ಯೆ ಅಪರಿಹಾರ್ಯವೆನ್ನಿಸಿದರೆ ದೈವಿಕವಾದ ಪರಿಹಾರವನ್ನು ಸಹ ಸಂಪ್ರದಾಯ ವಿಧಿಸಿದೆ. ಅದೆಂದರೆ ಸಮರ್ಥ ಜ್ಞಾನಿಗಳ ಮೂಲಕ ಮಹಾಭಾರತತಾತ್ಪರ್ಯನಿರ್ಣಯ ಪ್ರಶ್ನೆಯನ್ನು ಹಾಕಿ ಉತ್ತರ ಪಡೆಯುವುದು. ಅದು ಅನುಕೂಲವಾಗಿ ಬಂದಲ್ಲಿ ಬೇರೆ ಯಾವುದೇ ಬಗೆಯ ಯೋಚನೆಯನ್ನು ಮಾಡದೆ ಜಾತಕಘಟನೆ ಸೂಕ್ತ ಎಂದು ತಿಳಿಯಬಹುದು. ಅಥವಾ ಶಾಸ್ತ್ರಬಲ್ಲ ಜ್ಞಾನಿಗಳು ಅದನ್ನು

---

೧. ಧರ್ಮ್ಯೇಷು ವಿವಾಹೇಷು ಕಾಲಪರೀಕ್ಷಣಂ, ನಾಧರ್ಮ್ಯೇಷು। -ಗೃಹ್ಯಪರಿಶಿಷ್ಟ

ಅನುಮೋದಿಸಿದರೂ ಅದು ಮತ್ತೊಂದು ರೀತಿಯ ಪರಿಹಾರವೇ. ಮತ್ತೆ ಕೆಲವುಕಡೆಗಳಲ್ಲಿ ದೈವನಿರ್ಣಯವನ್ನು ಕೇಳುವ ಪದ್ಧತಿ ರೂಢಿಯಲ್ಲಿದೆ. ಅದರಂತೆ ತಮ್ಮ ಇಷ್ಟದೈವ ಅಥವಾ ಕುಲದೈವಗಳ ಬಳಿ ಪ್ರಾರ್ಥಿಸಿ, ಅವು ಪುಷ್ಪ ಮೊದಲಾದವುಗಳ ಮೂಲಕ ನೀಡುವ ಸೂಚನೆಯನ್ನು ಆಧರಿಸಿ ಮುಂದುವರೆಯುವುದು. ಆದರೆ ಇದೆಲ್ಲ ಏನಿದ್ದರೂ ಸಗೋತ್ರವಿವಾಹ ಮೊದಲಾದ ನಿಷಿದ್ಧವಿವಾಹಗಳಿಗೆ ಅನ್ವಯಿಸುವ ನಿರ್ಣಯ-ಗಳಾಗಲಾರವು ಎಂಬ ಎಚ್ಚರವನ್ನು ಎಂದೂ ಮರೆಯಕೂಡದು.

ಈವರೆಗಿನ ಚಿಂತನೆಯ ಭಾವ ಜ್ಯೋತಿಃಶಾಸ್ತ್ರವನ್ನು ಕಡೆಗಣಿಸಿ ವಿವಾಹವನ್ನು ನಿಶ್ಚಯಿಸುವುದು ಎಂದಲ್ಲ. ಆದರೆ ಶಾಸ್ತ್ರದಲ್ಲಿಯೇ ವಿಹಿತವಾಗಿರುವ ಪರಿಹಾರಕ್ಕೆ ಅವಕಾಶವಿರುವ ಸಂದರ್ಭಗಳಲ್ಲಿ ವಿವೇಚನೆಯನ್ನು ತೋರದೆ, ಜಾತಕಗಳ ಹೊಂದಾಣಿಕೆಯ ಕಾರಣವನ್ನು ಮುಂದಿಟ್ಟು ವಿವಾಹ ಘಟನೆಯನ್ನು ತಪ್ಪಿಸುವ ಪ್ರಸಂಗಗಳು ಉಚಿತವಲ್ಲ ಎಂದಷ್ಟೇ ಅಭಿಪ್ರಾಯ. ಯಾವುದೇ ಪರಿಹಾರವೂ ಇರದ ದೋಷಗಳಿರುವ ಪ್ರಸಂಗಗಳಲ್ಲಿ ಘಟಿತಾರ್ಥವು ಅನುಚಿತ ಎಂದು ಹೇಳುವಲ್ಲಿ ಯಾವ ದೋಷವೂ ಇರದು.

## ನಿಶ್ಚಯತಾಂಬೂಲ

ಹೀಗೆ ನಿಶ್ಚಯದ ಹಂತವನ್ನು ತಲುಪಿದ ಬಳಿಕ ಮುಖ್ಯಕಾರ್ಯಕ್ರಮ ಶಾಸ್ತ್ರೀಯ ರೀತಿಯಂತೆ ವಿವಾಹವೇ ಆಗಿದೆ[೧]. ಆದರೆ ಈ ನಿಶ್ಚಯದ ಹಂತವನ್ನು ನಿಶ್ಚಯ-

---

೧. ಶ್ರೀರುಗ್ಮಿಣೀಶವಿಜಯದಲ್ಲಿ ಬಂದಿರುವ ಕೃಷ್ಣರುಗ್ಮಿಣಿಯರ ವಿವಾಹದ ಸಂದರ್ಭದಲ್ಲಿನ ವಾಗ್ದಾನ ಕಾರ್ಯದ ರೋಚಕ ವಿವರಗಳು ಇಲ್ಲಿ ಗಮನಾರ್ಹ:(೧೫/೩೦-೪೪, ೧೫/೫೦,೫೧)

ತಾಂಬೂಲಪತ್ರಂ ಕಿಲ ಪೂಗಯುಕ್ತಮಾಸೀದ್ವಿವಾಹೋತ್ಸವನಿರ್ಣಯಾಯ ।
ಚೇತಃ ಸುನಿಶ್ಚಾಯಯತಿ ಸ್ಮ ಯೂನಾಂ ಮಾಂಗಲ್ಯದೀಕ್ಷೋತ್ಸವಮೇತದೇವ ॥
ತತಃ ಕ್ರಮೇಣೋಭಯವರ್ಗನಾರ್ಯೋ ಗೃಹೇ ಗೃಹೇ ತೈಲಯುತಾಂ ಹರಿದ್ರಾಮ್ ।
ದದುರ್ವಿವಾಹೋತ್ಸವಮೂಲಭೂತಾಂ ಪರಸ್ಪರಂ ಸ್ನೇಹಮಿವಾರ್ಪಯಂತ್ಯಃ ॥
ರತ್ನೌಘಪೂರ್ಣರವಿವರ್ಣಸುವರ್ಣಪಾತ್ರೇ ಸತ್ಕರ್ಣಪತ್ರಮುಖಶೋಭನವಸ್ತುರಾಶಿಮ್ ।
ವಿಸ್ತೀರ್ಯ ಶಂಖಪಟಹಧ್ವನಿಪೂರಿತಾಶಾ ಜಗ್ಮುರ್ವಧೂಗೃಹಮಥೋತ್ಸವನಿರ್ಣಯಾಯ॥
ವಿವಿಚ್ಯ ಸರ್ವಾಂಗವಿಚಾರಕಾಲೇ ತಯೋಃ ಸಮಂತಾದ್ಘಟನಾ ಕಿಲಾಸೀತ್ ।
ಸುಪೀನದೇವೀಸ್ತನಮಧ್ಯದೇಶೇ ಸುದುರ್ಲಭಾ ಸಾ ಪರಮಚ್ಯುತಸ್ಯ ॥
ಕನ್ಯಾಮಿಮಾಂ ಕನಕದಾಮಕದಂಬಗೌರೀಂ ಧನ್ಯಾಂ ದಿಶಂತು ಹರಯೇ ಹರಿನೀಲಭಾಸೇ ।
ಯುಕ್ತಸ್ತಯಾ ಯಮುದವಾಹ ಇವಾತ್ತವಿದ್ಯುದ್ವಿಷ್ವಕ್ ಕರಿಷ್ಯತಿ ಸಮಸ್ತಪುಮರ್ಥವರ್ಷಮ್॥
ವೈದರ್ಭವಂಶೋದಧಿಜಾತರತ್ನಮಿಯಂ ಸತೀ ಸೋಽಪ್ಯಡುನಾಯಕಸ್ಯ ।
ಕುಲೋದ್ಭವಾಲಂಕೃತಿರೇತಯೋಸ್ತತ್ಪರಂಪರಾಯೋಗ್ಯಮವೈತ ಯೋಗಮ್ ॥
ಪದ್ಮಾಲಯಾ ಸಾ ಕಿಲ ಪಾವನಾಂಗೀ ನಾರಾಯಣೋಽಯಂ ನವನೀರದಾಭಃ ।
ತೇನಾನಯೋಃ ಸುಸ್ಥಿರಮೇವ ಯೋಗಂ ಮನ್ಯಾಮಹೇಽನ್ಯೋನ್ಯವಿಭೂತಿಹೇತುಮ್ ॥

ತಾಂಬೂಲ(Engagement) ಎಂಬ ಹೆಸರಿನಲ್ಲಿ ವಿವಾಹಕ್ಕಿಂತ ಮುಂಚೆ ಕೆಲವು ದಿನಗಳು, ತಿಂಗಳುಗಳು, ಕೆಲವೊಮ್ಮೆ ವರ್ಷಗಳಿಗಿಂತ ಮುಂಚಿತವಾಗಿಯೇ ನಡೆಸುವ ಪದ್ಧತಿ ಇತ್ತೀಚಿನ ದಿನಗಳಲ್ಲಿ ಹೆಚ್ಚಾಗಿ ಕಾಣಿಸಿಕೊಳ್ಳುತ್ತಿದೆ. ಇಂತಹ ಪ್ರಸಂಗಗಳಲ್ಲಿ ಕಾರಣಾಂತರದಿಂದ ನಿಶ್ಚಯತಾಂಬೂಲವು ಮುರಿದುಬಿದ್ದಲ್ಲಿ ಉಭಯಪಂಗಡಗಳಿಗೂ ಅದರಲ್ಲೂ ವಧೂವರರಿಗೂ ಆಗುವ ಆಘಾತ ವರ್ಣನಾತೀತವೆನ್ನಿಸುವುದು.

ನಿಶ್ಚಯತಾಂಬೂಲದ ಮತ್ತೊಂದು ಬಗೆಯ ವಿಕೃತಿ ಎಂದರೆ ವಧೂವರರಿಬ್ಬರನ್ನೂ ಜೊತೆಯಾಗಿಯೇ ಕೂಡಿಸಿ ಅದನ್ನು ಒಂದು ಬಗೆಯ ವಿವಾಹಕಾರ್ಯವೆಂಬಂತೆಯೇ ನಡೆಸುವ ಇನ್ನೂ ಹೆಚ್ಚಿನ ಅವಿವೇಕ. ಇಂತಹ ಸಂದರ್ಭಗಳಲ್ಲಿ ಅದಕ್ಕೆ ಕಡಿವಾಣ-ಹಾಕಬೇಕಾದ ಪುರೋಹಿತವರ್ಗ ಕ್ಷುಲ್ಲಕ ಜನಪ್ರಿಯತೆ, ದಕ್ಷಿಣೆಯ ಸೆಳೆತ ಮೊದಲಾದ

---

ಆರ್ಯಾಃ ಸ್ವಭಾರ್ಯಾಂ ಯದಿ ಭಾರಕಾರ್ಯೇ ನೈವೋಪದಿಶ್ಯಾನ್ನ ಪುನಃ ಕದಾऽಪಿ ।
ಏನಾಂ ತ್ಯಜೇಜ್ಜಾತ್ವಪಿ ನಾತ್ರ ಕುಪ್ಯೇದ್ಸ್ಪುಹ್ಣಾತು ತರ್ಹ್ಯಬ್ಜಮುಖೀಕರಂ ನಃ ॥
ಸಂದೇಶಮಾತ್ರಮಭಿವೀಕ್ಷ್ಯ ಹರೇ ಗೃಹಂ ನಃ
ಸಂಪ್ರೇಷಯಿಷ್ಯಸಿ ಕರಿಷ್ಯಸಿ ನಾನ್ಯಪತ್ನೀಮ್ ।
ಬಂಧೂನ್ ಸ್ಮರಿಷ್ಯಸಿ ವಿಭೋ ಯದಿ ವಿಶ್ವದೋ ನ-
ಸ್ತ್ವಾಂ ತರ್ಹಿ ವಲ್ಗುವದನಾ ವರಯೇದ್ವರಿಷ್ಠಮ್ ॥
ಬ್ರಹ್ಮಾಂಡಾಖ್ಯಗೃಹಂ ಚತುರ್ದಶಲಸತ್ಪ್ರಾಸಾದಶೋಭಂ ಹರೇಃ
ಸಾಧ್ವೀಯಂ ಸತತಂ ವಿಚಾರಯತು ತನ್ಮಧ್ಯೇ ಗೃಹಸ್ಯೋಚಿತಮ್ ।
ಸ್ವರ್ಣಾದ್ರಿಕ್ಷಿತಿಧಾನ್ಯರತ್ನಲವಣಕ್ಷೀರೇಕ್ಷುಸರ್ಪಿರ್ದಧಿ-
ಸ್ವಾದೂದಾದಿ ಸುತಾಂಶ್ಚ ಪದ್ಮಜಮುಖಾಂಸ್ತೇಷಾಂ ಧುರಂ ಮಂದಿರಮ್ ॥
ಕ್ರುದ್ಧೋऽಪಿ ಸರ್ವಭುವನಾಯ ನ ಭೀಷ್ಮಪುತ್ರ್ಯಾಂ
ಕ್ರೋಧಂ ಕರಿಷ್ಯತಿ ಪರಂ ಪರಿರಭ್ಯ ದೋರ್ಭ್ಯಾಮ್ ।
ಏನಾಂ ತದಾऽಪಿ ರಮಯೇತ್ ಕಿಲ ಕೋಮಲಾಂಗೀಂ
ಕೋಪೋऽಸ್ಯ ತತ್ರ ಯ ಇಮಾಂ ಕಲಯೇದ್ವಿಯುಕ್ತಾಮ್ ॥
ಕೇಶಂ ಪ್ರಗೃಹ್ಯ ಕರಜೈಃ ಕುಚಕುಂಭಪಾರ್ಶ್ವೇ
ಕುರ್ವನ್ ವ್ರಣಾನಿ ಮೃದುಲೋಷ್ಠಪುಟಂ ಸ ದಂಶನ್ ।
ದಂತಕ್ಷತಂ ವಿರಚಯೇದ್ದಯಿತಃ ಸ್ವಪುಂಸಾಂ
ಕ್ರೋಧಂ ತದಾ ನ ಕಲಯಧ್ವಮಸೌ ವಿಲಾಸಃ ॥
ಪ್ರಾಯಃ ಸ ನ ಪ್ರೇಷಯತಿ ಸ್ವಭಕ್ತಗೇಹೇಷ್ವಿಮಾಂ ತೇऽಪಿ ನ ತಾಂ ಲಷಂತಿ ।
ಅಥ ಪ್ರದತ್ತಾಮಪಿ ತಾಮಿದಾನೀಂ ಧೀರಾಃ ಪರಾವೃತ್ಯ ನ ಕಿಂ ದಿಶಧ್ವಮ್ ॥
ನೈವಾನ್ಯಾಂ ವರಯೇತ್ ಕನ್ಯಾಂ ಪೂರ್ಣೋऽಯಂ ಪುರುಷಾಗ್ರಣೀಃ ।
ವೃತೋऽಪ್ಯನ್ಯಾಂಗನಾದೇಹೇ ರಮಯೇತ್ ಪ್ರೇಯಸೀಮಿಮಾಮ್ ॥
ಸದಾಪರೋಕ್ಷೀಕೃತಸರ್ವವಿಶ್ವಃ ಕಥಂ ಸ್ಮರೇದ್ವಃ ಸ್ಮರಣೀಯಶೀಲಃ ।
ತಥಾಪಿ ಯುಷ್ಮಾಸು ಕೃಪಾಂ ಸ ಕುರ್ಯಾತ್ ಸ್ಮೃತೇಃ ಫಲಂ ಸ್ವಾಂಘ್ರಿಯುಗಾಶ್ರಯೇಷು ॥

ಕಾರಣಗಳಿಂದ ವಧೂವರರನ್ನು ಜೊತೆಯಾಗಿಯೇ ಕೂಡಿಸುವ ಅವಿವೇಕವನ್ನು ತೋರುತ್ತದೆ. ವಿವಾಹದ ಮುನ್ನ ವಧೂವರರು ಆ ರೀತಿ ಜೊತೆಯಾಗಿ ಕೂಡುವುದನ್ನು ಶಾಸ್ತ್ರಗಳು ಒಪ್ಪುವುದಿಲ್ಲ. ಇಂತಹ ಪ್ರಸಂಗಗಳಲ್ಲಿ ಕಾರಣಾಂತರದಿಂದ ವಿವಾಹ ಮುರಿದುಬಿದ್ದಲ್ಲಿ ವಧೂವರರಿಗೆ ಆಗುವ ಮಾನಸಿಕ ಆಘಾತ ಅದರ ಪ್ರಚಾರದಿಂದಾಗಿ ಇನ್ನೂ ಹೆಚ್ಚು ಎನ್ನಿಸುವುದು. ಅದರಲ್ಲೂ ವಧುವಿಗೆ ಮುಂದಿನ ವಿವಾಹದ ಅವಕಾಶಗಳು ಅಪರೂಪವೆನ್ನಿಸಿ, ಬಾಳೇ ಗೋಳು ಎನ್ನಿಸುವ ಪರಿಸ್ಥಿತಿ ಒದಗಬಹುದು. ಅಂತಹ ನಿಶ್ಚಯತಾಂಬೂಲಕಾಲದಲ್ಲಿ ತೆಗೆಯಲ್ಪಡುವ ಫೋಟೋಗಳು, ವಿಡಿಯೋ ಚಿತ್ರಣ ಮೊದಲಾದವುಗಳು ಬ್ಲಾಕ್‌ಮೇಲ್ ಮಾಡಲು ಸಾಧನಗಳಾಗಿ ಅವರ ಬಾಳನ್ನು ದುರಂತಮಯವನ್ನಾಗಿಸಲು ಮತ್ತಷ್ಟು ಹೆಚ್ಚಿನ ಕಾರಣವೆನ್ನಿಸುವವು.

ಶುಭದಿನವೊಂದರಲ್ಲಿ ವರನ ತಂದೆ ತಾಯಿ ಮೊದಲಾದವರು ಕನ್ಯೆಯ ಮನೆಗೆ ತೆರಳಿ, ಕನ್ಯೆಯನ್ನು ಆದರದಿಂದ ಕಂಡು, ವಾಗ್ದಾನಕಾರ್ಯವನ್ನು ನಡೆಸಬೇಕು. ಅದರ ಅಂಗವಾಗಿ ಗಣಪತಿಪೂಜೆ, ವರುಣಪೂಜೆಯನ್ನು ಮಾಡಬೇಕು. ಕನ್ಯಾಪಿತೃವಾದವನು ಸಂಕಲ್ಪಪೂರ್ವಕವಾಗಿ ತಿಥಿ, ನಕ್ಷತ್ರಗಳನ್ನು ಉಚ್ಚರಿಸಿ 'ಕರಿಷ್ಯಮಾಣ ಕನ್ಯಾದಾನಾಂಗ-ಭೂತಂ ವಾಗ್ದಾನಂ ಕರಿಷ್ಯೇ' ಎಂದು ಸಂಕಲ್ಪಿಸಬೇಕು.

ಹೀಗೆ ಕನ್ಯೆಯನ್ನು ವಾಗ್ದಾನಪೂರ್ವಕ ಒಬ್ಬ ವರನಿಗೆ ಸಂಕಲ್ಪಿಸಿದ ಮೇಲೆ ಈ ಮುಂಚೆ ತಿಳಿಸಿದಂತೆ ಅದನ್ನು ನಡೆಸಲೇಬೇಕಾದ ಹೊಣೆಗಾರಿಕೆ [೧]ಕನ್ಯಾಪಿತೃಗಳ ಮೇಲೆ ಇದೆ. ಒಮ್ಮೆ ವಾಗ್ದಾನ ಮಾಡಿದರೂ ವಿವಾಹವಾದಂತೆಯೇ ಎಂಬ ವಿಶೇಷಾಂಶ ಶ್ರೀಮನ್ಮಹಾ-ಭಾರತದಲ್ಲಿ ಬಂದಿದೆ. ಸಾವಿತ್ರಿಯು ಸತ್ಯವಾನನನ್ನು ಮನಸಾ ವರಿಸಿ, ತಂದೆಯ ಬಳಿಗೆ ಮರಳಿದಾಗ ವಿಷಯ ತಿಳಿದ ನಾರದರು ಸತ್ಯವಂತನು ಗುಣವಂತನಾದರೂ ಅಲ್ಪಾಯು ಎಂದು ತಿಳಿಸಿದಾಗ ಸಾವಿತ್ರಿಯು ಹೇಳುವ ಮಾತು ಅತ್ಯಂತ ಗಮನಾರ್ಹವಾದುದು :

ಸಕೃದಂಶೋ ನಿಪತತಿ ಸಕೃತ್ ಕನ್ಯಾ ಪ್ರದೀಯತೇ ।
ಸಕೃದಾಹ ದದಾನೀತಿ ತ್ರೀಣ್ಯೇತಾನಿ ಸಕೃತ್ ಸಕೃತ್ ॥ - ಮನು.(೯/೪೭)ನಾರದ(೧೩/೨೮)

ಇಂತಹ ಧರ್ಮವನ್ನು ಪಾಲಿಸಿದ ಸಾವಿತ್ರಿಯು ಮೃತನಾದ ಸತ್ಯವಂತನನ್ನು ಬದುಕಿಸಿ-ಕೊಳ್ಳುವಂತಹ ಲೋಕೋತ್ತರ ಕಾರ್ಯವನ್ನು ಮಾಡಿದ ಮಹಾಸತಿ ಎನ್ನಿಸಿದ್ದು ಇತಿಹಾಸ.

---

೧. ದತ್ವಾ ನ್ಯಾಯೇನ ಯಃ ಕನ್ಯಾಂ ವರಾಯ ನ ದದಾತಿ ತಾಮ್ ।
ಅದುಷ್ಟಶ್ಚೇದ್ವರೋ ರಾಜ್ಞಾ ಸ ದಂಡ್ಯಸ್ತತ್ರ ಚೋರವತ್ ॥ -ನಾರದಸ್ಮೃತಿ(೧೩/೩೨)
ಪ್ರತಿಶ್ರುತ್ಯಾಪ್ಯಧರ್ಮಸಂಯುಕ್ತಾಯ ನ ದದ್ಯಾತ್ । -ಗೌತಮಸ್ಮೃತಿ
ದತ್ತಾಮಪಿ ಹರೇತ್ ಕನ್ಯಾಂ ಶ್ರೇಯಾಂಶ್ಚೇದ್ವರ ಆವ್ರಜೇತ್ । -ಯಾಜ್ಞವಲ್ಕ್ಯಸ್ಮೃತಿ
ಏತತ್ತು ನ ಪರೇ ಚಕ್ರುರ್ನಾಪರೇ ಜಾಪಿ ಸಾಧವಃ ।
ಯದನ್ಯಸ್ಯಾಭ್ಯನುಜ್ಞಾಯ ಪುನರನ್ಯಸ್ಯ ದೀಯತೇ । -ಮನುಸ್ಮೃತಿ(೯/೯೯)

ಆದ್ದರಿಂದ ಪ್ರಾಚೀನಪದ್ಧತಿಯಂತೆ ಗುರುಹಿರಿಯರಷ್ಟೇ ನಿಶ್ಚಯತಾಂಬೂಲ ಕಾರ್ಯಕ್ರಮವನ್ನು ತಮ್ಮತಮ್ಮಲ್ಲೇ ನಿಶ್ಚಯಿಸಿಕೊಂಡು, ಮುಂದೆ ವಿವಾಹದ ಹಿಂದಿನ ದಿನದಂದು ಅದನ್ನು ಸಾರ್ವಜನಿಕವೆಂಬಂತೆ ಆಚರಿಸುವುದು ಹೆಚ್ಚು ಸೂಕ್ತ. ಇಲ್ಲವಾದಲ್ಲಿ ವಧೂವರರನ್ನು ಜೊತೆಯಾಗಿ ಕೂಡಿಸುವ ಅವಿವೇಕವನ್ನಾದರೂ ತೊರೆಯುವಷ್ಟು ಎಚ್ಚರವನ್ನಾದರೂ ವಹಿಸುವುದು ಉಚಿತ.

## ನಿಶ್ಚಯದ ಅನಂತರ ವಿವಾಹ ನಿಂತಲ್ಲಿ ದೋಷ

ವಾಗ್ದಾನದ ಬಳಿಕ ವರ ಅಥವಾ ಕನ್ಯೆಯರಲ್ಲಿ ಯಾವುದೇ ಬಗೆಯ ಅಪರಿಹಾರ್ಯ-ವಾದ ಪ್ರಬಲ ದೋಷಗಳು ತಿಳಿದುಬಂದಲ್ಲಿ ಆದಕ್ಕೆ ಆ ವಿವಾಹ ನಿಶ್ಚಯವನ್ನು ಅನೂರ್ಜಿತಗೊಳಿಸಲು ಅವಕಾಶವಿದೆ. ಆದರೆ ವರದಕ್ಷಿಣೆ ಇತ್ಯಾದಿ ಕ್ಷುಲ್ಲಕ ಕಾರಣಗಳಿಂದ ಆ ನಿಶ್ಚಯವನ್ನು ಅನೂರ್ಜಿತಗೊಳಿಸುವುದು ವಿಹಿತವಲ್ಲ. ವಿನಾಕಾರಣ ಅಂತಹ ನಿಶ್ಚಯದಿಂದ ಹಿಂದೆ ಸರಿಯುವುದು ಶಿಕ್ಷಾರ್ಹ ಅಪರಾಧ ಎಂದು ಶಾಸ್ತ್ರಗಳು ಸಾರಿವೆ. ಇತ್ತೀಚಿನ ದಿನಗಳಲ್ಲಿ ವಿವಾಹದ ಬಳಿಕ ವಿಚ್ಛೇದನಗಳ ಸಂಖ್ಯೆ ಹೆಚ್ಚುತ್ತಿರುವಂತೆ ವಿವಾಹ ನಿಶ್ಚಯದ ಬಳಿಕವೂ ಸಹ ಅದನ್ನು ಮುರಿದುಕೊಳ್ಳುವ ಹವ್ಯಾಸ ಹೆಚ್ಚು ಹೆಚ್ಚಾಗಿ ಕಂಡುಬರುತ್ತಿದೆ. ವಾಗ್ದಾನದ ಕೆಲವೇ ದಿವಸಗಳ ಅನಂತರ ಕ್ಷುಲ್ಲಕ ಕಾರಣಗಳನ್ನು ಮುಂದಿರಿಸಿ, ನಿಶ್ಚಿತ ವಿವಾಹವನ್ನು ಕಡಿದುಕೊಳ್ಳುವುದನ್ನು ಶಾಸ್ತ್ರಗಳು ಉಗ್ರವಾಗಿ ಖಂಡಿಸಿವೆ. ನಿಶ್ಚಯದ ಮುನ್ನ ಸೂಕ್ತರೀತಿಯಲ್ಲಿ ಪರಾಮರ್ಶೆ ನಡೆಸದೆ ಆ ಬಳಿಕ ಯಾವುದೋ ಆಶೆ-ಆಮಿಶಗಳಿಗೆ ಒಳಗಾಗಿ ಇಂತಹ ಕುಕಾರ್ಯಕ್ಕೆ ಎಳೆಸುವುದು ನಾಗರಿಕ ಸಂಸ್ಕೃತಿ ಎನ್ನಿಸಲಾರದು. ಎಂದರೆ ಶಾಸ್ತ್ರದೃಷ್ಟಿಯಿಂದ ಮಾತ್ರವಲ್ಲದೆ ಲೌಕಿಕ-ವಾಗಿಯೂ ಸಹ ಇದೊಂದು ಅತ್ಯಂತ ಅನುಚಿತವಾದ ವರ್ತನೆ ಎನ್ನಿಸುವುದು.

## ಗುರುಬಲಾದಿ ವಿಚಾರ

ವಿವಾಹಕ್ಕೆ ವಧುವಿಗೆ ಮುಖ್ಯವೆನ್ನಿಸಿದರೆ, ವರನಿಗೆ ರವಿಬಲವು ಮುಖ್ಯ ಎನ್ನುವರು: ಮುಖ್ಯಂ ಗುರುಬಲಂ ವಧ್ವಾ ವರಶ್ರೇಷ್ಠಂ ರವೇರ್ಬಲಮ್. ೨, ೫, ೭, ೯, ೧೧ನೆಯ ಸ್ಥಾನದಲ್ಲಿ ಗುರು ಇದ್ದಲ್ಲಿ ಕನ್ಯೆಗೆ ಶುಭ. ಜನ್ಮದಿಂದ ೩, ೬, ೧೦ ಸ್ಥಾನಗಳದ್ದಲ್ಲಿ ಸೂಕ್ತ ಶಾಂತಿಯಿಂದ ಪರಿಹಾರ ಸಾಧ್ಯ. ೪, ೮, ೧೨ನೆಯ ಸ್ಥಾನದಲ್ಲಿ ಇದ್ದಲ್ಲಿ ಅಶುಭ. ಕರ್ಕ, ಧನುಸ್ಸು ಹಾಗೂ ಮೀನರಾಶಿಗಳಲ್ಲಿ ಈ ಸ್ಥಾನಗಳಲ್ಲಿ ಇದ್ದರೆ ಅಷ್ಟು ಅಶುಭವಲ್ಲ. ಆಪತ್ಕಾಲದಲ್ಲಿ ಇಂತಹ ಪ್ರಸಂಗಗಳಲ್ಲಿ ಸೂಕ್ತ ಹೋಮಗಳಿಂದ ಪರಿಹಾರ ಪಡೆಯಬಹುದು. ವರನಿಗೆ ೩, ೬, ೧೦, ೧೧ನೆಯ ಸ್ಥಾನದಲ್ಲಿ ರವಿ ಇದ್ದಲ್ಲಿ ಶುಭ. ಇತರ ಸ್ಥಾನಗಳಲ್ಲಿದ್ದಲ್ಲಿ ಅಶುಭ. ಆಗಲೂ ಸಹ ಸೂಕ್ತ ಶಾಂತಿಯಿಂದ ಪರಿಹಾರ ಸಾಧ್ಯ.

# ವಿವಾಹಮುಹೂರ್ತದ ನಿಶ್ಚಯ

ಮುಂದಿನ ಹಂತ ವಿವಾಹಮುಹೂರ್ತ ನಿಶ್ಚಯದ್ದು. ಇದನ್ನು ಸೂಚಿಸುವಲ್ಲಿ ಇತ್ತೀಚಿನ ಇಂದಿನ ಪಂಚಾಂಗಗಳು ಸಹ ಅಷ್ಟಾಗಿ ಮುತುವರ್ಜಿ ವಹಿಸುವುದಿಲ್ಲ ಎಂಬುದು ವಿಷಾದದ ಸಂಗತಿ. ಈ ಬಗ್ಗೆ ಮೊದಲು ಗಮನಿಸಬೇಕಾದ ಅಂಶ ಎಂದರೆ ಮುಹೂರ್ತಕ್ಕೆ [೧] ವಿಹಿತವಲ್ಲದ ಮಾಸಗಳ ಬಗ್ಗೆ ಎಚ್ಚರ. ಚಾತುರ್ಮಾಸ್ಯ ಕಾಲ ಭಗವಂತನ ಯೋಗನಿದ್ರೆಯ ಕಾಲ ; ದೇವತೆಗಳ ಒಂದು ಬಗೆಯ ವಿಶ್ರಾಂತಿ ಕಾಲ. ಆದ್ದರಿಂದ ಆ ಕಾಲದಲ್ಲಿ ನಡೆಯುವ ಚೌಲ, ವಿವಾಹ, ಉಪನಯನ, ಗೃಹಪ್ರವೇಶ ಮೊದಲಾದ ಕಾರ್ಯಗಳು ಶುಭಕರವೆನ್ನಿಸಲಾರವು ಎಂಬ ಸ್ಪಷ್ಟೋಕ್ತಿ ಸ್ಕಂದಪುರಾಣದಲ್ಲಿದೆ.

ಸಮಸ್ತಮಂಗಲಾನಾಂ ಚ ದೇವತಾ ಚ ಜನಾರ್ದನಃ ।
ತಸ್ಮಿಂಸ್ತು ಶಯನಂ ಯಾತೇ ನೋದ್ವಾಹಾದಿಕ್ರಿಯಾ ಭವೇತ್ ॥
ಚೌಲೋಪನಯನೇ ಚೈವ ವಿವಾಹಾದ್ಯಂ ತ್ಯಜೇದ್ಬುಧಃ ।
ಅಜ್ಞಾನಾದ್ಯದಿ ಕುರ್ವಂತಿ ಮೃತಿಸ್ತೇಷಾಂ ನ ಸಂಶಯಃ ।
ಕಲ್ಯಾಣದೇವತಾದೃಷ್ಟಿಹೀನಾನಾಂ ಚ ಕುತಃ ಸುಖಮ್ ॥

ಅಗ್ನಿಪುರಾಣ (೧೫೪/೧೩,೧೪) ದಲ್ಲೂ ಈ ಮಾತು ಬಂದಿದೆ :

---

೧. ವಿವಾಹದ ಮುಹೂರ್ತವು ಶಾಸ್ತ್ರವಿಧಿಗನುಗುಣವಾಗಿರಬೇಕು ಎಂಬುದು ಮುಖ್ಯವಿಚಾರ. ಎಂತಹ ಶುಭ ಮುಹೂರ್ತವೇ ಆಗಿದ್ದರೂ ಆ ಕಾಲದಲ್ಲಿ ಭಗವಂತನಾದ ಶ್ರೀಹರಿಯ ಸ್ಮರಣೆ ಅತ್ಯಂತ ವಿಹಿತ :

ಯದ್ವಕ್ತ್ರೇ ವಿಧುಮಾಮನಂತಿ ಸುಬುಧಂ ಮುಗ್ಧಸ್ಮಿತೇ ಹಸ್ತಯೋ-
ರುದ್ಯದ್ವ್ಯೋಮಮಣಿಂ ಗುರುಂ ಕಟಿತಟೇ ಮಧ್ಯಂ ಚ ಕಾವ್ಯಾಸ್ಪದಮ್ ।
ಯತ್ಪಾದಸ್ಪೃಶಿ ಮಂಗಲಂ ಪದತಲೇ ಕೇತುಂ ಗತೌ ಮಂದಗಂ
ಯದ್ರೋಚಿಶ್ಚಕಿತಂ ತಮಸ್ತದನಯೋರ್ನಿತ್ಯಂ ಮುಹೂರ್ತೋದಯಃ ॥
ಯದೀಯವೀಕ್ಷಾವಿಷಯಸ್ಯ ನಿತ್ಯಂ ವಿಧೋರ್ಬಲಂ ತಾರಬಲಂ ಚ ಸುಷ್ಠು ।
ಯದೀಯತಾರಂ ಜಪತಸ್ತದಸ್ಯ ಸದಾ ಮುಹೂರ್ತೋದಯಮೇವ ಮನ್ಯೇ ॥

-ರುಗ್ಮಿಣೀಶವಿಜಯ(೧೫/೪೭,೪೮)

'ಸಕಲ ಗ್ರಹಬಲ ನೀನೆ ಸರಸಿಜಾಕ್ಷ' ಎಂಬ ಶ್ರೀಪುರಂದರದಾಸರ ಮಾತು ಇಲ್ಲಿ ಸ್ಮರಣೀಯ.

ಈ ಕೆಳಗಿನ ಹರಿಕಥಾಮೃತಸಾರ (೧೦/೨)ದ ವಚನವನ್ನು ಗಮನಿಸಬೇಕು :

ಶ್ರೀದನಂಘ್ರಿಸರೋಜಯುಗಳೇ-
ಕಾದಶಸ್ಥಾನಾತ್ಮದೊಳಗಿ-
ಟ್ಟಾದರದಿ ಸಂತುತಿಸುವವರಿಗೆ ಈ ನವಗ್ರಹವು ।
ಆದಿತೇಯರು ಸಂತತಾಧಿ-
ವ್ಯಾಧಿಗಳ ಪರಿಹರಿಸುತವರನು
ಕಾದುಕೊಂಡಿಹರೆಲ್ಲರೊಂದಾಗೀಶನಾಜ್ಞೆಯಲಿ ॥

ಪ್ರಸುಪ್ತೇ ಕೇಶವೇ ನೈವ ವಿವಾಹಃ ಕಾರ್ಯ ಏವ ಹಿ।
ಪೌಷೇ ಚೈತ್ರೇ ಕುಜದಿನೇ ರಿಕ್ತಾವಿಷ್ಟಿತಿಥೌ ನ ಚ॥
ನ ಶುಕ್ರಜೀವೇಽಸ್ತಮಿತೇ ನ ಶಶಾಂಕೇ ಗ್ರಹಾರ್ದ್ದಿತೇ।
ಅರ್ಕಾರ್ಕಿಭೌಮಯುಕ್ತೇ ಭೇ ವ್ಯತೀಪಾತಾಹತೇ ನ ಹಿ॥

ಸ್ಕಾಂದಪುರಾಣ(೬/೨೨೮/೧೫)ದ ವಚನವು ಸಹ ಇದನ್ನೇ ತಿಳಿಸುವುದು :

ಚತ್ವಾರೋಽಪಿ ಯಥಾ ಮಾಸಾ ಗರ್ಹಣೀಯಾ ಧರಾತಲೇ।
ಸರ್ವಕರ್ಮಸು ಮುಖ್ಯೇಷು ಯಜ್ಞೋದ್ವಾಹಾದಿಷು ದ್ವಿಜಾಃ॥

ವಿಷಯ ಇಷ್ಟು ಸ್ಪಷ್ಟವಿದ್ದರೂ ಜ್ಯೋತಿಷಿಗಳಿರಲಿ, ಅನೇಕ ಮಠಗಳ ಪಂಚಾಂಗಗಳೂ ಸಹ ಚಾತುರ್ಮಾಸ್ಯ ಧನುರ್ಮಾಸ ಇತ್ಯಾದಿ ನಿಷಿದ್ಧಕಾಲಗಳಲ್ಲಿ ವಿವಾಹಮುಹೂರ್ತಗಳನ್ನು ಉಲ್ಲೇಖಿಸುವುದು ಕಂಡುಬರುತ್ತದೆ. ಸಮಾಜಕ್ಕೆ ಮಾರ್ಗದರ್ಶನ ನೀಡುವ ಹೊಣೆ-ಗಾರಿಕೆಯ ಇಂತಹ ಸಂಸ್ಥೆಗಳೂ ಸಹ ಇಂತಹ ತಪ್ಪನ್ನು ಮಾಡುವುದು ಅತ್ಯಂತ ವಿಷಾದಕರ.

ಅದರಂತೆ ಧನುರ್ಮಾಸವು ಸಹ ವಿವಾಹಕ್ಕೆ ನಿಷಿದ್ಧ. ಆ ಮಾಸದಲ್ಲಿ ಸೂರ್ಯೋ-ದಯದ ಮುನ್ನವೇ ಸಕಲಕಾರ್ಯಗಳೂ ಪೂರೈಸಲೇಬೇಕಾದ ವಿಧಿ ಇರುವುದರಿಂದ ವಿವಾಹಕ್ಕೂ ಸಹ ಸರ್ವಥಾ ಅವಕಾಶವಿರದು. ಅಧಿಕಮಾಸವು ಸಹ ವಿವಾಹಕ್ಕೆ ಸಂಪೂರ್ಣ ನಿಷಿದ್ಧವೆನ್ನಿಸಿರುವ ಮಾಸ. ಅದರಂತೆ ಮಿಥುನಾಷಾಢವನ್ನು ಹೊರತುಪಡಿಸಿದ ಆಷಾಢಮಾಸ ಹಾಗೂ ಧನುಃ ಪುಷ್ಯವು ಸಹ ನಿಷಿದ್ಧ. ಮಕರಪುಷ್ಯ ನಿಷಿದ್ಧವೆನ್ನಿಸದು. ಮುಹೂರ್ತನಿಶ್ಚಯಕ್ಕೆ ಈ ನಿಯಮಗಳು ಗಮನದಲ್ಲಿಡುವುದು ಅಗತ್ಯ. ಕಾರಣಾಂತರ-ದಿಂದ ಕೆಲವು ಜ್ಯೋತಿಷ್ಕರು ಇಂತಹ ಮುಹೂರ್ತಗಳನ್ನು ಸೂಚಿಸಿದರೂ ಅದನ್ನು ಪಾಲಿಸುವ ಅವಿವೇಕವನ್ನು ಪ್ರಾಜ್ಞರು ತೋರಬೇಕಿಲ್ಲ.

ಶುಕ್ರಾಸ್ತ, ಗುರು ಅಸ್ತಗಳ ಕಾಲವೂ ಸಹ ವಿವಾಹಕ್ಕೆ ಪ್ರಶಸ್ತವೆನ್ನಿಸದು. ಅನಿವಾರ್ಯ ಸಂದರ್ಭಗಳಲ್ಲಿ ಸೂಕ್ತ ಶಾಂತಿಯನ್ನು ಆಚರಿಸಿ, ವಿವಾಹವನ್ನು ನಿಶ್ಚಯಿಸುವ ಅವಕಾಶ ಉಂಟು. ಆದರೆ ಆದಷ್ಟು ಅದನ್ನು ತಪ್ಪಿಸುವುದೇ ಉಚಿತ. ಅದರಂತೆ ಗ್ರಹಣಗಳ ಮುನ್ನ ಹಾಗೂ ಆ ಬಳಿಕದ ೭ ದಿವಸಗಳೂ ಸಹ ವಿವಾಹಕ್ಕೆ ಪ್ರಶಸ್ತವೆನ್ನಿಸವು. ಮನೆಯಲ್ಲಿ ಪಿತೃಕಾರ್ಯವಿದ್ದಲ್ಲಿ ಆ ಬಳಿಕವೇ ವಿವಾಹದ ಮುಹೂರ್ತದ ನಿಶ್ಚಯವು ಸೂಕ್ತ.

ವಿವಾಹದ ತಿಥಿಯ ಬಗ್ಗೆಯೂ ಸಹ ಇಂದಿನ ಜನ ಅಷ್ಟಾಗಿ ಗಮನಹರಿಸುತ್ತಿಲ್ಲ. ಏಕಾದಶೀಯಂತಹ ತಿಥಿಯಲ್ಲೂ ವಿವಾಹಮಾಡುವ ಅವಿವೇಕ ತೋರುವ ಅನೇಕ ಮಾಧ್ವ-ವೈಷ್ಣವರನ್ನು ನಾವು ಕಾಣಬಹುದು. ಅಂದು ಯಾವ ಕಾರಣಕ್ಕೂ ವಿವಾಹ ಮೊದಲಾದ ಕಾರ್ಯಗಳಿಗೆ ಅವಕಾಶ ಸರ್ವಥಾ ಇಲ್ಲ ಎಂಬುದನ್ನು ಗಮನಿಸಬೇಕು. ವಾರಗಳಲ್ಲಿ ಮಂಗಳವಾರ, ಶನಿವಾರಗಳು ಅಷ್ಟಾಗಿ ಪ್ರಶಸ್ತವಲ್ಲ. ರಿಕ್ತಾಷ್ಟಮಿ,

ರಿಕ್ತಷಷ್ಠಿಗಳಂದು ಪ್ರಶಸ್ತವಲ್ಲ. ಶುಕ್ಲಪಕ್ಷವು ಶ್ರೇಷ್ಠ ಕೃಷ್ಣಪಕ್ಷದಲ್ಲಿ ತ್ರಯೋದಶಿಯವರೆಗೆ ಮಧ್ಯಮ, ಸೋಮವಾರ, ಬುಧವಾರ, ಗುರುವಾರ, ಶುಕ್ರವಾರಗಳು ಶುಭ, ಇತರ ವಾರಗಳು ಮಧ್ಯಮ ; [೧]ಅಮಾವಾಸ್ಯೆಯು ಸಹ ನಿಷಿದ್ಧವೇ; ರೋಹಿಣೀ, ಮೃಗಶಿರಾ, ಮಘಾ, ಉತ್ತರಾ, ಹಸ್ತ ಸ್ವಾತಿ, ಮೂಲ, ಅನುರಾಧ ಹಾಗೂ ರೇವತಿ ನಕ್ಷತ್ರಗಳು ಪ್ರಶಸ್ತ, ಕೆಲವರ ಅಭಿಪ್ರಾಯದಲ್ಲಿ ಚಿತ್ರ, ಶ್ರವಣ, ಧನಿಷ್ಠ ಅಶ್ವಿನೀ ನಕ್ಷತ್ರಗಳು ವಿಹಿತ; ಚಂದ್ರಬಲ ತಾರಾಬಲಗಳು ಅಪೇಕ್ಷಿತ. ಅವು ಇಲ್ಲದಿದ್ದಲ್ಲಿ ರಜತಾದಿ ದಾನಗಳು ವಿಹಿತ.

ವಿವಾಹಕ್ಕೆ ವಿಹಿತವಾದ ಮಾಸಗಳೆಂದರೆ ಮಾಘ, ಫಾಲ್ಗುಣ, ವೈಶಾಖ ಹಾಗೂ ಜ್ಯೇಷ್ಠ ಚಾತುರ್ಮಾಸ್ಯದ ಬಳಿಕದ ಧನುರ್ಮಾಸದ ಮುಂಚಿನ ಮಾರ್ಗಶಿರಮಾಸವು [೨]ಮಧ್ಯಮ. ಆದರಂತೆ ಮಿಥುನಾಷಾಢವು, ವೃಶ್ಚಿಕ ಕಾರ್ತೀಕವು, ಮಕರ ಪುಷ್ಯವು, ಮೇಷ ಚೈತ್ರವು, ದೇಶಾಚಾರಕ್ಕೆ ಅನುಗುಣವಾಗಿ ಗ್ರಾಹ್ಯವೆನ್ನಿಸುವವು. ಜನ್ಮಮಾಸದಲ್ಲಿ ವಿವಾಹಾದಿಗಳು ನಿಷಿದ್ಧ ಎಂಬುದು ವಿಶೇಷ[೩].

---

೧. ಅಮಾಯಾಂ ಚೈವ ಭದ್ರಾಯಾಂ ಕರಣೇ ವಿಷ್ಟಿಸಂಜ್ಞಕೇ ।
ಯಃ ಕರೋತಿ ವಿವಾಹಂ ಸಃ ಶೀಘ್ರಂ ಯಾತಿ ಯಮಾಲಯಮ್ ॥ -ಗಾರ್ಗ್ಯ
ಗುರುಶುಕ್ರೇಂದುಪುತ್ರಾಭೇ ದಿನೇಷು ಪರಿಣೀಯತೇ ।
ಯಾ ಕನ್ಯಾ ಸಾ ಭವೇನ್ನಿತ್ಯಂ ಭರ್ತುಶ್ಚಿತ್ತಾನುವರ್ತಿನೀ ।
ಅರ್ಕಾರ್ಕಿಭೌಮವಾರಾಣಾಂ ದಿನೇಷು ಕಲಹಪ್ರಿಯಾ ।
ಸಾಪತ್ನ್ಯಂ ಸಮವಾಪ್ನೋತಿ ತುಷಾರಕರವಾಸರೇ ॥ -ಸ್ಮೃತಿ

೨. ಮಾಘಫಾಲ್ಗುಣವೈಶಾಖಜ್ಯೇಷ್ಠಮಾಸಾಃ ಶುಭಪ್ರದಾಃ ।
ಕಾರ್ತಿಕೋ ಮಾರ್ಗಶೀರ್ಷಶ್ಚ ಮಧ್ಯಮೌ ನಿಂದಿತಾಃ ಪರೇ ॥ -ನಾರದಸ್ಮೃತಿ
ಪೌಷೇಽಪಿ ಕುರ್ಯಾನ್ಮಕರಸ್ಥಿತೇಽರ್ಕೇ ಚೈತ್ರೇ ಭವೇನ್ಮೇಷಗತೋ ಯದಾ ಸ್ಯಾತ್ ।
ಪ್ರಶಸ್ತಮಾಷಾಢಕೃತಂ ವಿವಾಹಂ ವದಂತಿ ಗರ್ಗಾ ಮಿಥುನಸ್ಥಿತೇಽರ್ಕೇ ॥ -ವಸಿಷ್ಠಸ್ಮೃತಿ
ಮಾಘಫಾಲ್ಗುಣವೈಶಾಖಜ್ಯೇಷ್ಠಾಷಾಢಮೃಗಾಹ್ವಯಾಃ । -ಗರ್ಗ
ಕಾರ್ತೀಕಾಶ್ವಯುಜೌ ಮಾಸೌ ಉದ್ವಾಹೇ ದಕ್ಷಿಣಾಯನೇ ಶಂಸಂತಿ ।
ಮೀನೇ ಧನುಷಿ ಸಿಂಹೇ ಚ ಸಿಂಹೇ ಸಮತುರಂಗಮೇ ।
ಕ್ಷೌರಕರ್ಮ ವಿವಾಹಂ ಚ ನ ಕಾರ್ಯಂ ಗೃಹಕರ್ಮ ಚ ॥ -ಗಾರ್ಗ್ಯ
ಮಾಘಫಾಲ್ಗುಣವೈಶಾಖಜ್ಯೇಷ್ಠಮಾಸಾಃ ಶುಭಪ್ರದಾಃ
ಮಾರ್ಗಶೀರ್ಷೋ ಮಧ್ಯಮಃ ಸ್ಯಾತ್ ಕ್ವಚಿದಾಷಾಢಕಾರ್ತಿಕೌ ।
-ಅತ್ರ ಮಿಥುನೇ ಅರ್ಕೇ ಆಷಾಢೋ ವೃಶ್ಚಿಕೇ ಕಾರ್ತಿಕಶ್ಚ ದೇಶಾಚಾರಾನುರೋಧೇನ ಗ್ರಾಹ್ಯೌ ನ ಸರ್ವದೇಶೇ । ಏವಂ ಮಕರಸ್ಥ ಪೌಷೋ, ಮೇಷಸ್ಥ ಚೈತ್ರೋಽಪಿ । -ಧರ್ಮಸಿಂಧು

೩. ಗುರುವು ಸಿಂಹರಾಶಿಯಲ್ಲಿದ್ದಾಗಲೂ ವಿವಾಹ ನಿಷಿದ್ಧ:
ನ ಗುರೌ ಸಿಂಹರಾಶಿಸ್ಥೇ ಸಿಂಹಾಂಶಂ ಚ ಗತೇಽಪಿ ವಾ ।
ಕ್ಷೌರಂ ಮಂತ್ರಂ ನ ಕುರ್ವೀತ ವಿವಾಹಂ ಗೃಹಕರ್ಮ ಚ ॥ -ನಾರದಸ್ಮೃತಿ

# ತ್ರಿಜ್ಯೇಷ್ಠಾದಿ ವಿಚಾರ

ತ್ರಿಜ್ಯೇಷ್ಠ ಹಾಗೂ ಪಂಚಜ್ಯೇಷ್ಠ ಎಂಬ ಬಗ್ಗೆ ತಿಳುವಳಿಕೆ ಅಗತ್ಯ. ಜ್ಯೇಷ್ಠಪುತ್ರಿ, [೧]ಜ್ಯೇಷ್ಠಪುತ್ರ, ಜ್ಯೇಷ್ಠನಕ್ಷತ್ರ, ಜ್ಯೇಷ್ಠಮಾಸ ಹಾಗೂ ವಧೂವರರ ಜನ್ಮನಕ್ಷತ್ರ ಜ್ಯೇಷ್ಠವಾದಲ್ಲಿ ಪಂಚಜ್ಯೇಷ್ಠ ಎನ್ನಿಸುವುದು. ಕೇವಲ ಮೂರು ಮಾತ್ರ ಸೇರಿದಲ್ಲಿ ತ್ರಿಜ್ಯೇಷ್ಠ ಎನ್ನಿಸುವುದು. ಸಾಮಾನ್ಯವಾಗಿ ಇದು ವಿವಾಹಕ್ಕೆ ನಿಷಿದ್ಧ ಎನ್ನಿಸುವುದು[೨].

ಜ್ಯೇಷ್ಠ ಮಾಸವೇ ವಿವಾಹಕ್ಕೆ ಅಪ್ರಶಸ್ತ ಎಂಬ ಪಕ್ಷವೂ ಇದೆ[೩]. ಈ ಎಲ್ಲ ವಿವೇಚನೆ [೪]ಧರ್ಮಕ್ಕೆ ಅನುಗುಣವಾಗಿ ನಡೆಯುವ ವಿವಾಹಗಳಿಗೆ ಹೊರತು ಧರ್ಮಬಾಹಿರವಾದ ವಿವಾಹಗಳಿಗಲ್ಲ.

---

ನರ್ಮದೋತ್ತರದೇಶೇಷು ಸಿಂಹಸ್ಥೇ ದೇವಮಂತ್ರಿಣಿ ।ನಿಷೇಧೋ ನಾಸ್ತಿದಕ್ಷಿಣೇ ॥ -ಗಾರ್ಗ್ಯಃ

ಘಟಿಕಾದ್ವಯಮೃಕ್ಷಾಂತೇ ಮಾಸಾಂತೇ ಚ ದಿನತ್ರಯಮ್ ।
ವರ್ಷೇತಿ ವರ್ಜಯೇತ್ತಕ್ಷಂ ಗ್ರಹಣಾದ್ದಿನಸಪ್ತಕಮ್ ॥ -ಗಾರ್ಗ್ಯ

ಸೌರಾಬ್ದಾಂತೋ ತ್ಯಜೇತ್ಪಕ್ಷಂ ಚಾಂದ್ರೇ ಚ ನವಭಂ ತ್ಯಜೇತ್ ।
ಸಾವನಾಂತೇಽಷ್ಟಭಂ ತ್ಯಾಜ್ಯಂ ನಾಕ್ಷತ್ರೇ ಪೌಷ್ಣಭಂ ತ್ರ್ಯಹಮ್ ॥ -ವಸಿಷ್ಠ

೧. ನ ಜ್ಯೇಷ್ಠಯೋರ್ವಿವಾಹಃ ಸ್ಯಾತ್ ಜ್ಯೇಷ್ಠೇ ಮಾಸಿ ವಿಶೇಷತಃ ।
ದ್ವೌ ಜ್ಯೇಷ್ಠೌ ಮಧ್ಯಮೌ ಪ್ರೋಕ್ತಾವೇಕಂ ಜ್ಯೈಷ್ಠಂ ಸುಖಾವಹಮ್ ।
ಜ್ಯೇಷ್ಠತ್ರಯಂ ನ ಕುರ್ವೀತ ವಿವಾಹೇ ಸರ್ವಸಮ್ಮತಮ್ ॥ -ಧರ್ಮಸಿಂಧು

ಜ್ಯೇಷ್ಠಸ್ಯ ಜ್ಯೇಷ್ಠಕನ್ಯಾಯಾಃ ವಿವಾಹೋ ನ ಪ್ರಶಸ್ಯತೇ ।
ದ್ವೌ ಜ್ಯೇಷ್ಠೌ ಮಧ್ಯಮೌ ಪ್ರೋಕ್ತೌ ಜ್ಯೇಷ್ಠಮೇಕಂ ಶುಭಾವಹಮ್ ।
ಜ್ಯೇಷ್ಠತ್ರಯಂ ನ ಕುರ್ವೀತ ವಿವಾಹಂ ಬಹುಸಮ್ಮತಮ್ ॥ -ಗಾರ್ಗ್ಯಸ್ಮೃತಿ

ಜನ್ಮರ್ಕ್ಷೇ ಜನ್ಮದಿವಸೇ ಜನ್ಮಮಾಸೇ ಶುಭಂ ತ್ಯಜೇತ್ ।
ಜ್ಯೇಷ್ಠೇ ಮಾಸ್ಯಾದ್ಯಗರ್ಭಸ್ಯ ಶುಭಂ ವರ್ಜ್ಯಂ ಸ್ತ್ರಿಯಾ ಅಪಿ ॥ -ರತ್ನಕೋಶ

ಅಜ್ಯೇಷ್ಠಾ ಕನ್ಯಕಾ ಯತ್ರ ಜ್ಯೇಷ್ಠಪುತ್ರೋ ವರೋ ಯದಿ ।
ವ್ಯತ್ಯಯೋ ವಾ ತಯೋರ್ಸ್ತತ್ರ ಜ್ಯೇಷ್ಠಮಾಸಃ ಶುಭಪ್ರದಃ ॥ -ಪರಾಶರಸ್ಮೃತಿ

ಜ್ಯೇಷ್ಠಸ್ಯ ಜ್ಯೇಷ್ಠಕನ್ಯಾಯಾಃ ವಿವಾಹೋ ನ ಪ್ರಶಸ್ಯತೇ ।
ತಯೋರನ್ಯತರೇ ಜ್ಯೇಷ್ಠೇ ಜ್ಯೇಷ್ಠೋ ಮಾಸಃ ಪ್ರಶಸ್ಯತೇ ॥
ದ್ವೌ ಜ್ಯೇಷ್ಠೌ ಮಧ್ಯಮೌ ಪ್ರೋಕ್ತಾವೇಕಂ ಜ್ಯೇಷ್ಠಂ ಶುಭಾವಹಮ್ ।
ಜ್ಯೇಷ್ಠತ್ರಯಂ ನ ಕುರ್ವೀತ ವಿವಾಹೇ ಸರ್ವಸಮ್ಮತಮ್ ॥ -ಮಿಹಿರ

೨. ಆದ್ಯಗರ್ಭೇ ದ್ವಯೋಃ ಸ್ಯಾತಾಂ ಜ್ಯೇಷ್ಠಾನಕ್ಷತ್ರಜಾತಯೋಃ ।
ಜ್ಯೇಷ್ಠಮಾಸೇ ನ ಕುರ್ವೀತ ವಿವಾಹಂ ಜ್ಯೇಷ್ಠಪಂಚಕೇ ॥ -ಧರ್ಮಸಿಂಧು

೩. ಜ್ಯೇಷ್ಠೇ ಮಾಸಿ ತಥಾ ಮಾರ್ಗೇ ಕ್ಷೌರಂ ಪರಿಣಯಂ ವ್ರತಮ್ ।
ಜ್ಯೇಷ್ಠಪುತ್ರದುಹಿತ್ರೋಶ್ಚ ಯತ್ನತಃ ಪರಿವರ್ಜಯೇತ್ ॥ -ಗರ್ಗಸ್ಮೃತಿ

೪. ಧರ್ಮ್ಯೇಷು ವಿವಾಹೇಷು ಕಾಲಪರೀಕ್ಷಣಂ, ನಾಧರ್ಮೇಷು । -ಗೃಹ್ಯಪರಿಶಿಷ್ಟ

ರಿಕ್ತಷಷ್ಠಿಗಳಂದು ಪ್ರಶಸ್ತವಲ್ಲ. ಶುಕ್ಲಪಕ್ಷವು ಶ್ರೇಷ್ಠ ಕೃಷ್ಣಪಕ್ಷದಲ್ಲಿ ತ್ರಯೋದಶಿಯವರೆಗೆ ಮಧ್ಯಮ, ಸೋಮವಾರ, ಬುಧವಾರ, ಗುರುವಾರ, ಶುಕ್ರವಾರಗಳು ಶುಭ, ಇತರ ವಾರಗಳು ಮಧ್ಯಮ ; [೧]ಅಮಾವಾಸ್ಯೆಯು ಸಹ ನಿಷಿದ್ಧವೇ; ರೋಹಿಣೀ, ಮೃಗಶಿರಾ, ಮಘಾ, ಉತ್ತರಾ, ಹಸ್ತ ಸ್ವಾತಿ, ಮೂಲ, ಅನುರಾಧ ಹಾಗೂ ರೇವತಿ ನಕ್ಷತ್ರಗಳು ಪ್ರಶಸ್ತ, ಕೆಲವರ ಅಭಿಪ್ರಾಯದಲ್ಲಿ ಚಿತ್ರ, ಶ್ರವಣ, ಧನಿಷ್ಠ ಅಶ್ವಿನೀ ನಕ್ಷತ್ರಗಳು ವಿಹಿತ; ಚಂದ್ರಬಲ ತಾರಾಬಲಗಳು ಅಪೇಕ್ಷಿತ. ಅವು ಇಲ್ಲದಿದ್ದಲ್ಲಿ ರಜತಾದಿ ದಾನಗಳು ವಿಹಿತ.

ವಿವಾಹಕ್ಕೆ ವಿಹಿತವಾದ ಮಾಸಗಳೆಂದರೆ ಮಾಘ, ಫಾಲ್ಗುಣ, ವೈಶಾಖ ಹಾಗೂ ಜ್ಯೇಷ್ಠ ಚಾತುರ್ಮಾಸ್ಯದ ಬಳಿಕದ ಧನುರ್ಮಾಸದ ಮುಂಚಿನ ಮಾರ್ಗಶಿರಮಾಸವು [೨]ಮಧ್ಯಮ. ಅದರಂತೆ ಮಿಥುನಾಷಾಢವು, ವೃಶ್ಚಿಕ ಕಾರ್ತೀಕವು, ಮಕರ ಪುಷ್ಯವು, ಮೇಷ ಚೈತ್ರವು, ದೇಶಾಚಾರಕ್ಕೆ ಅನುಗುಣವಾಗಿ ಗ್ರಾಹ್ಯವೆನ್ನಿಸುವವು. ಜನ್ಮಮಾಸದಲ್ಲಿ ವಿವಾಹಾದಿಗಳು ನಿಷಿದ್ಧ ಎಂಬುದು ವಿಶೇಷ[೩].

---

೧. ಅಮಾಯಾಂ ಚೈವ ಭದ್ರಾಯಾಂ ಕರಣೇ ವಿಷ್ಟಿಸಂಜ್ಞಕೇ ।
ಯಃ ಕರೋತಿ ವಿವಾಹಂ ಸಃ ಶೀಘ್ರಂ ಯಾತಿ ಯಮಾಲಯಮ್ ॥ -ಗಾರ್ಗ್ಯ
ಗುರುಶುಕ್ರೇಂದುಪುತ್ರಾಭೇ ದಿನೇಷು ಪರಿಣೀಯತೇ ।
ಯಾ ಕನ್ಯಾ ಸಾ ಭವೇನ್ನಿತ್ಯಂ ಭರ್ತುಶ್ಚಿತ್ತಾನುವರ್ತಿನೀ ।
ಅರ್ಕಾರ್ಕಿಭೌಮವಾರಾಣಾಂ ದಿನೇಷು ಕಲಹಪ್ರಿಯಾ ।
ಸಾಪತ್ನ್ಯಂ ಸಮವಾಪ್ನೋತಿ ತುಷಾರಕರವಾಸರೇ ॥ -ಸ್ಮೃತಿ

೨. ಮಾಘಫಾಲ್ಗುಣವೈಶಾಖಜ್ಯೇಷ್ಠಮಾಸಾಃ ಶುಭಪ್ರದಾಃ ।
ಕಾರ್ತಿಕೋ ಮಾರ್ಗಶೀರ್ಷಶ್ಚ ಮಧ್ಯಮೌ ನಿಂದಿತಾಃ ಪರೇ ॥ -ನಾರದಸ್ಮೃತಿ
ಪೌಷೇಽಪಿ ಕುರ್ಯಾನ್ಮಕರಸ್ಥಿತೇಽರ್ಕೇ ಚೈತ್ರೇ ಭವೇನ್ಮೇಷಗತೋ ಯದಾ ಸ್ಯಾತ್ ।
ಪ್ರಶಸ್ತಮಾಷಾಢಕೃತಂ ವಿವಾಹಂ ವದಂತಿ ಗರ್ಗಾ ಮಿಥುನಸ್ಥಿತೇಽರ್ಕೇ ॥ -ವಸಿಷ್ಠಸ್ಮೃತಿ
ಮಾಘಫಾಲ್ಗುಣವೈಶಾಖಜ್ಯೇಷ್ಠಾಷಾಢಮೃಗಾಹ್ವಯಾಃ । -ಗರ್ಗ
ಕಾರ್ತೀಕಾಶ್ವಯುಜೌ ಮಾಸೌ ಉದ್ವಾಹೇ ದಕ್ಷಿಣಾಯನೇ ಶಂಸಂತಿ ।
ಮೀನೇ ಧನುಷಿ ಸಿಂಹೇ ಚ ಸಿಂಹೇ ಸಮತುರಂಗಮೇ ।
ಕ್ಷೌರಕರ್ಮ ವಿವಾಹಂ ಚ ನ ಕಾರ್ಯಂ ಗೃಹಕರ್ಮ ಚ ॥ -ಗಾರ್ಗ್ಯ
ಮಾಘಫಾಲ್ಗುಣವೈಶಾಖಜ್ಯೇಷ್ಠಮಾಸಾಃ ಶುಭಪ್ರದಾಃ
ಮಾರ್ಗಶೀರ್ಷೋ ಮಧ್ಯಮಃ ಸ್ಯಾತ್ ಕ್ವಚಿದಾಷಾಢಕಾರ್ತಿಕೌ ।
-ಅತ್ರ ಮಿಥುನೇ ಅರ್ಕೇ ಆಷಾಢೋ ವೃಶ್ಚಿಕೇ ಕಾರ್ತಿಕಶ್ಚ ದೇಶಾಚಾರಾನುರೋಧೇನ ಗ್ರಾಹ್ಯೌ ನ ಸರ್ವದೇಶೇ । ಏವಂ ಮಕರಸ್ಥ ಪೌಷೋ, ಮೇಷಸ್ಥ ಚೈತ್ರೋಽಪಿ । -ಧರ್ಮಸಿಂಧು

೩. ಗುರುವು ಸಿಂಹರಾಶಿಯಲ್ಲಿದ್ದಾಗಲೂ ವಿವಾಹ ನಿಷಿದ್ಧ:
ನ ಗುರೌ ಸಿಂಹರಾಶಿಸ್ಥೇ ಸಿಂಹಾಂಶಂ ಚ ಗತೇಽಪಿ ವಾ ।
ಕ್ಷೌರಂ ಮಂತ್ರಂ ನ ಕುರ್ವೀತ ವಿವಾಹಂ ಗೃಹಕರ್ಮ ಚ ॥ -ನಾರದಸ್ಮೃತಿ

# ತ್ರಿಜ್ಯೇಷ್ಠಾದಿ ವಿಚಾರ

ತ್ರಿಜ್ಯೇಷ್ಠ ಹಾಗೂ ಪಂಚಜ್ಯೇಷ್ಠ ಎಂಬ ಬಗ್ಗೆ ತಿಳುವಳಿಕೆ ಅಗತ್ಯ. ಜ್ಯೇಷ್ಠಪುತ್ರಿ, [೧]ಜ್ಯೇಷ್ಠಪುತ್ರ, ಜ್ಯೇಷ್ಠನಕ್ಷತ್ರ, ಜ್ಯೇಷ್ಠಮಾಸ ಹಾಗೂ ವಧೂವರರ ಜನ್ಮನಕ್ಷತ್ರ ಜ್ಯೇಷ್ಠವಾದಲ್ಲಿ ಪಂಚಜ್ಯೇಷ್ಠ ಎನ್ನಿಸುವುದು. ಕೇವಲ ಮೂರು ಮಾತ್ರ ಸೇರಿದಲ್ಲಿ ತ್ರಿಜ್ಯೇಷ್ಠ ಎನ್ನಿಸುವುದು. ಸಾಮಾನ್ಯವಾಗಿ ಇದು ವಿವಾಹಕ್ಕೆ ನಿಷಿದ್ಧ ಎನ್ನಿಸುವುದು[೨].

ಜ್ಯೇಷ್ಠ ಮಾಸವೇ ವಿವಾಹಕ್ಕೆ ಅಪ್ರಶಸ್ತ ಎಂಬ ಪಕ್ಷವೂ ಇದೆ[೩]. ಈ ಎಲ್ಲ ವಿವೇಚನೆ [೪]ಧರ್ಮಕ್ಕೆ ಅನುಗುಣವಾಗಿ ನಡೆಯುವ ವಿವಾಹಗಳಿಗೆ ಹೊರತು ಧರ್ಮಬಾಹಿರವಾದ ವಿವಾಹಗಳಿಗಲ್ಲ.

---

ನರ್ಮದೋತ್ತರದೇಶೇಷು ಸಿಂಹಸ್ಥೇ ದೇವಮಂತ್ರಿಣಿ ।ನಿಷೇಧೋ ನಾಸ್ತಿದಕ್ಷಿಣೇ ॥ -ಗಾರ್ಗ್ಯಃ

ಘಟಿಕಾದ್ವಯಮೃಕ್ಷಾಂತೇ ಮಾಸಾಂತೇ ಚ ದಿನತ್ರಯಮ್ ।
ವರ್ಷೇತಿ ವರ್ಜಯೇತ್ಪಕ್ಷಂ ಗ್ರಹಣಾದ್ದಿನಸಪ್ತಕಮ್ ॥ -ಗಾರ್ಗ್ಯ

ಸೌರಾಬ್ದಾಂತೋ ತ್ಯಜೇತ್ಪಕ್ಷಂ ಚಾಂದ್ರೇ ಚ ನವಭಂ ತ್ಯಜೇತ್ ।
ಸಾವನಾಂತೇಽಷ್ಟಭಂ ತ್ಯಾಜ್ಯಂ ನಾಕ್ಷತ್ರೇ ಪೌಷ್ಣಭಂ ತ್ರ್ಯಹಮ್ ॥ -ವಸಿಷ್ಠ

೧. ನ ಜ್ಯೇಷ್ಠಯೋರ್ವಿವಾಹಃ ಸ್ಯಾತ್ ಜ್ಯೇಷ್ಠೇ ಮಾಸಿ ವಿಶೇಷತಃ ।
ದ್ವೌ ಜ್ಯೇಷ್ಠೌ ಮಧ್ಯಮೌ ಪ್ರೋಕ್ತಾವೇಕಂ ಜ್ಯೈಷ್ಠಂ ಸುಖಾವಹಮ್ ।
ಜ್ಯೇಷ್ಠತ್ರಯಂ ನ ಕುರ್ವೀತ ವಿವಾಹೇ ಸರ್ವಸಮ್ಮತಮ್ ॥ -ಧರ್ಮಸಿಂಧು

ಜ್ಯೇಷ್ಠಸ್ಯ ಜ್ಯೇಷ್ಠಕನ್ಯಾಯಾಃ ವಿವಾಹೋ ನ ಪ್ರಶಸ್ಯತೇ ।
ದ್ವೌ ಜ್ಯೇಷ್ಠೌ ಮಧ್ಯಮೌ ಪ್ರೋಕ್ತೌ ಜ್ಯೇಷ್ಠಮೇಕಂ ಶುಭಾವಹಮ್ ।
ಜ್ಯೇಷ್ಠತ್ರಯಂ ನ ಕುರ್ವೀತ ವಿವಾಹಂ ಬಹುಸಮ್ಮತಮ್ ॥ -ಗಾರ್ಗ್ಯಸ್ಮೃತಿ

ಜನ್ಮರ್ಕ್ಷೇ ಜನ್ಮದಿವಸೇ ಜನ್ಮಮಾಸೇ ಶುಭಂ ತ್ಯಜೇತ್ ।
ಜ್ಯೇಷ್ಠೇ ಮಾಸ್ಯಾದ್ಯಗರ್ಭಸ್ಯ ಶುಭಂ ವರ್ಜ್ಯಂ ಸ್ತ್ರಿಯಾ ಅಪಿ ॥ -ರತ್ನಕೋಶ

ಅಜ್ಯೇಷ್ಠಾ ಕನ್ಯಕಾ ಯತ್ರ ಜ್ಯೇಷ್ಠಪುತ್ರೋ ವರೋ ಯದಿ ।
ವ್ಯತ್ಯಯೋ ವಾ ತಯೋಸ್ತತ್ರ ಜ್ಯೇಷ್ಠಮಾಸಃ ಶುಭಪ್ರದಃ ॥ -ಪರಾಶರಸ್ಮೃತಿ

ಜ್ಯೇಷ್ಠಸ್ಯ ಜ್ಯೇಷ್ಠಕನ್ಯಾಯಾಃ ವಿವಾಹೋ ನ ಪ್ರಶಸ್ಯತೇ ।
ತಯೋರನ್ಯತರೇ ಜ್ಯೇಷ್ಠೇ ಜ್ಯೇಷ್ಠೋ ಮಾಸಃ ಪ್ರಶಸ್ಯತೇ ॥
ದ್ವೌ ಜ್ಯೇಷ್ಠೌ ಮಧ್ಯಮೌ ಪ್ರೋಕ್ತಾವೇಕಂ ಜ್ಯೇಷ್ಠಂ ಶುಭಾವಹಮ್ ।
ಜ್ಯೇಷ್ಠತ್ರಯಂ ನ ಕುರ್ವೀತ ವಿವಾಹೇ ಸರ್ವಸಮ್ಮತಮ್ ॥ -ಮಿಹಿರ

೨. ಆದ್ಯಗರ್ಭೇ ದ್ವಯೋಃ ಸ್ಯಾತಾಂ ಜ್ಯೇಷ್ಠಾನಕ್ಷತ್ರಜಾತಯೋಃ ।
ಜ್ಯೇಷ್ಠಮಾಸೇ ನ ಕುರ್ವೀತ ವಿವಾಹಂ ಜ್ಯೇಷ್ಠಪಂಚಕೇ ॥ -ಧರ್ಮಸಿಂಧು

೩. ಜ್ಯೇಷ್ಠೇ ಮಾಸಿ ತಥಾ ಮಾರ್ಗೇ ಕ್ಷೌರಂ ಪರಿಣಯಂ ವ್ರತಮ್ ।
ಜ್ಯೇಷ್ಠಪುತ್ರದುಹಿತ್ರೋಶ್ಚ ಯತ್ನತಃ ಪರಿವರ್ಜಯೇತ್ ॥ -ಗರ್ಗಸ್ಮೃತಿ

೪. ಧರ್ಮ್ಯೇಷು ವಿವಾಹೇಷು ಕಾಲಪರೀಕ್ಷಣಂ, ನಾಧರ್ಮೇಷು । -ಗೃಹ್ಯಪರಿಶಿಷ್ಟ

## ಆಹ್ವಾನಪತ್ರಿಕೆ

ಅಂತೂ ವಿವಾಹನಿಶ್ಚಯದ ಬಳಿಕ ಮುಂದಿನ ಮುಖ್ಯ ಕಾರ್ಯಕ್ರಮ ಆಹ್ವಾನಪತ್ರಿಕೆಗಳನ್ನು ಸಿದ್ಧಪಡಿಸುವುದು. ಆಹ್ವಾನಪತ್ರಿಕೆಗಳನ್ನು ಮುಖ್ಯವಾಗಿ ಮನೆಯ ಹಿರಿಯರ, ಪ್ರಧಾನರ ಹೆಸರಿನಲ್ಲಿ ಮುದ್ರಿಸುವುದು ಹೆಚ್ಚು ಸೂಕ್ತ. ಆಹ್ವಾನಪತ್ರಿಕೆಯು ಶ್ರೀಕಾರ, ಕುಲದೇವತೆಯ ಪ್ರಾರ್ಥನೆ, ದೇವದೇವತೆಯರ ಕಲ್ಯಾಣಪರ ಶ್ಲೋಕಗಳು ಮೊದಲಾದವುಗಳನ್ನು ಒಳಗೊಂಡಿರುವುದು ಸೂಕ್ತ. ಆಹ್ವಾನಪತ್ರಿಕೆಗಳನ್ನು ಹೆಚ್ಚಿನ ಜನರಿಗೆ ಹಂಚುವುದು, ಧಾರ್ಮಿಕ, ಸಾಮಾಜಿಕ, ಮಹತ್ತ್ವದಂತೆ ಮತ್ತೊಂದು ರೀತಿಯ ಎಚ್ಚರಿಕೆಯ ಕಾರ್ಯಕ್ರಮವಾಗಿಯೂ ಮಾನ್ಯವೆನ್ನಿಸುವುದು. ಅದು ಹೇಗೆಂದರೆ ಅಂತಹ ಆಹ್ವಾನಪತ್ರಿಕೆಗಳನ್ನು ಗಮನಿಸಿದ ಜನ ಯಾವುದೇ ಕಾರಣದಿಂದ ಆ ಸಂಬಂಧವು ಅನುಚಿತ ಎಂಬುದನ್ನು ಸಾಧಾರವಾಗಿ ಮನಗಂಡಲ್ಲಿ ಅದನ್ನು ಸಂಬಂಧಿಸಿದವರ ಗಮನಕ್ಕೆ ತಂದು ಆ ವಿವಾಹದ ಅನಂತರ ಉಂಟಾಗುವ ಅನರ್ಥವನ್ನು ತಪ್ಪಿಸುವಲ್ಲಿ ಮಹತ್ವದ ಪಾತ್ರವನ್ನು ವಹಿಸಲು ಸಾಧ್ಯವಾಗುವುದು. ಹೀಗೆ ನಮ್ಮ ಪ್ರಾಚೀನಪದ್ಧತಿಯ ಪ್ರತಿಯೊಂದು ಮುಖವೂ ಒಟ್ಟಾಗಿ ವಧೂವರರ ದಾಂಪತ್ಯದ ಸರ್ವತೋಮುಖವಾದ ಯಶಸ್ಸಿಗೆ ಪೂರಕವಾಗುವಂತೆ ರೂಪುಗೊಂಡಿರುವುದು ಎಂಬುದು ಗಮನಿಸಬೇಕಾದ ಅಂಶ.

## ಚಪ್ಪರಪೂಜೆ

ಶುಭ ಸಮಾರಂಭಗಳ ಮತ್ತೊಂದು ಅಗತ್ಯ ಸೂಕ್ತ ಚಪ್ಪರದ ನಿರ್ಮಾಣ. ಮದುವೆ, ಕಲ್ಯಾಣಮಂಟಪ ಅಥವಾ ಪರಸ್ಥಳದಲ್ಲಿ ನಡೆದರೂ ತಾವು ವಾಸವಿರುವ ಮನೆಯ ಮುಂಭಾಗದಲ್ಲಿ ಸಹ ಶಾಸ್ತ್ರೋಕ್ತ ಕ್ರಮದಲ್ಲಿ ಚಪ್ಪರವನ್ನು ನಿರ್ಮಿಸುವುದು ವಿವಾಹದ ಮತ್ತೊಂದು ಅಂಗ. ನಾಲ್ಕು ಕಂಬಗಳ ಚಪ್ಪರವನ್ನು ನಿರ್ಮಿಸಿ, ಅದರ ಮೇಲೆ ಮಾವಿನಸೊಪ್ಪು ತೆಂಗಿನಗರಿಗಳ ಮೂಲಕ ಚಪ್ಪರವನ್ನು ಸಿದ್ಧಪಡಿಸಬೇಕು. ತೆಂಗಿನಗರಿಗಳ ತುದಿಗಳು ಪೂರ್ವ ಅಥವಾ ಉತ್ತರಕ್ಕೆ ಇರುವಂತೆ ನೋಡಿಕೊಳ್ಳುವುದು ಶುಭಸಮಾರಂಭಗಳಿಗೆ ಅಗತ್ಯ. ಮಾವಿನ ಸೊಪ್ಪನ್ನು ಸಹ ಹೊದಿಸುವುದು ತೋರಣದಂತೆ ಕಟ್ಟುವುದು ಅಗತ್ಯ. ಬಾಳೇಕಂಬಗಳನ್ನು ಸಹ ಕಟ್ಟಬೇಕು. ಬಳಿಕ ಚಪ್ಪರದ ನಾಲ್ಕು ಕಂಬಗಳಿಗೂ ಈಶಾನ್ಯದಿಂದ ಆರಂಭಿಸಿ, ಹೂಮಾಲೆಗಳನ್ನು ಸುತ್ತಿ, ಶಾಸ್ತ್ರೋಕ್ತ ಕ್ರಮದಲ್ಲಿ ಪೂಜಿಸಬೇಕು. ಮನೆಯಿಂದ ದಿಬ್ಬಣ ಹೊರಡುವ ಮುಂಚೆ ತಳಿರು ತೋರಣಗಳಿಂದ ಅಲಂಕೃತವಾದ ಚಪ್ಪರದ ಕೆಳಗೆ ವಧುವಿನ ಕಡೆಯವರಾದರೆ ವಧುವನ್ನು ಅಥವಾ ವರನ ಕಡೆಯವರಾದರೆ ವರನನ್ನು ಪೂರ್ವಾಭಿಮುಖವಾಗಿ ನಿಲ್ಲಿಸಿ ಐದೆಯರು ಆರತಿ ಎತ್ತಿ ದೃಷ್ಟಿ ತೆಗೆಯುವರು, ಅದಕ್ಕಾಗಿ ಈಡುಗಾಯಿ ಒಡೆಯುವುದು ಅಗತ್ಯ. ಪುರೋಹಿತರ ನೇತೃತ್ವದಲ್ಲಿ ಪೂಜೆಯ ಕಾರ್ಯ ಪೂರೈಸಿದ ಬಳಿಕ ಮುಂದಿನ ಕಾರ್ಯವೆಲ್ಲಾ ಹೆಚ್ಚಾಗಿ

ಮುತ್ತೈದೆಯರ ನೇತೃತ್ವದಲ್ಲಿ ಹಾಡುಹಸೆಗಳೊಂದಿಗೆ ಮುಂದುವರೆಯುವವು. ಈ ಚಪ್ಪರ ಪೂಜೆಯನ್ನು ಸಮಾವರ್ತನ, ನಾಂದೀಸ್ಥಾಪನೆ ಅಥವಾ ದೇವರ ಸಮಾರಾಧನೆಯೆಂದೂ ಸಹ ಮಾಡಬಹುದು.

## ಪುಣ್ಯಾಹವಾಚನ

ಇತರ ಸಂಸ್ಕಾರಗಳಲ್ಲಿ ಹಾಗೂ ಧಾರ್ಮಿಕ ಕಾರ್ಯಗಳಲ್ಲಿ ಹೇಗೋ ಹಾಗೆ ಪುಣ್ಯಾಹವಾಚನ ಅತ್ಯಗತ್ಯ. ಭದ್ರಂ ಕರ್ಣೇಭಿಃ .. ಮೊದಲಾದ ಅಷ್ಟ ವೇದಮಂತ್ರ-ಗಳಿಂದ ಪುಣ್ಯಾಹ ವಾಚನವನ್ನು ನೆರವೇರಿಸಬೇಕು. ವಿಪ್ರರ ಬಾಯಿಂದ ಬರುವ ವೇದಮಂತ್ರಗಳು ಅಂದಿನ ದಿನವನ್ನು ಮಾತ್ರವಲ್ಲದೆ ಇಡೀ ಕಾರ್ಯವನ್ನು ಪುಣ್ಯಕರ-ವನ್ನಾಗಿ ಮಾಡುವವು. ಆ ಸಮಯದಲ್ಲಿ ವಧೂ/ವರನು ಅವರ ಮಾತಾಪಿತೃ-ಗಳೊಂದಿಗೆ ಕುಳಿತುಕೊಳ್ಳಬೇಕು. ಕೊನೆಯಲ್ಲಿ ಪುಣ್ಯಾಹ ವಾಚನದ ಶುದ್ಧೋದಕದ ಪ್ರೋಕ್ಷಣೆಯಿಂದ ಇಡೀ ಗೃಹ ಹಾಗೂ ಮುಖ್ಯವಾಗಿ ವಧೂ/ವರ, ಅವರ ತಂದೆ-ತಾಯಿಗಳು ಮೊದಲಾಗಿ ಎಲ್ಲರಿಗೂ ವಿಹಿತ.

## ದೇವರಸಮಾರಾಧನೆ

ದೇವರಸಮಾರಾಧನೆಯು ವಿವಾಹದ ಪೂರ್ವಭಾವಿಯಾಗಿ ಅಗತ್ಯವೆನ್ನಿಸಿರುವ ಒಂದು ವಿಶೇಷ ಕಾರ್ಯ. ವಿವಾಹದ ಅಂಗಗಳಲ್ಲಿ ಲೋಪವಾಗದೆ ಉಳಿದುಕೊಂಡು ಬಂದಿರುವ ಕಾರ್ಯಗಳಲ್ಲಿ ಇದೂ ಒಂದಾಗಿದೆ. [೧]ಕುಲದೇವತೆಯನ್ನು ಅಥವಾ ಇಷ್ಟದೇವತೆಯನ್ನು ಪೂಜಿಸಿ, ಕೈಗೊಂಡ ಶುಭಕಾರ್ಯವು ನಿರ್ವಿಘ್ನವಾಗಿ ಪೂರೈಸಿ ಶ್ರೀಹರಿವಾಯುಗುರುಗಳ ಅನುಗ್ರಹಕ್ಕೆ ಕಾರಣವಾಗಲಿ ಎಂದು ಪ್ರಾರ್ಥಿಸಿಕೊಳ್ಳುವುದು ಇದರ ಉದ್ದೇಶ. ವಧೂ ಹಾಗೂ ವರ ಉಭಯ ಪಕ್ಷದವರಿಗೂ ಇದು ವಿಹಿತ. ಅಂದಿನ ದಿನ ಮನೆತನದ ದೇವರು ಎಂಬುದಾಗಿ ಪೂರ್ವಜರಿಂದ ಆರಾಧಿತವಾದ ವಿಗ್ರಹಗಳನ್ನು ವಿಶೇಷವಾಗಿ ಪಂಚಾಮೃತಾದಿಗಳಿಂದ ಪೂಜಿಸುವುದು ಇದರ ಮುಖ್ಯಭಾಗಗಳಲ್ಲೊಂದು. ಮುಖ್ಯವಾಗಿ ಈ ರೀತಿ ಮನೆತನದ ದೇವರುಗಳಿಗೆ ಪೂಜೆ ಸಲ್ಲಿಸುವುದರೊಂದಿಗೆ ಹತ್ತಕ್ಕೆ ಕಡಿಮೆ ಇಲ್ಲದಷ್ಟು ಜ್ಞಾನಿಗಳಾದ [೨]ಬ್ರಾಹ್ಮಣ-ಸುವಾಸಿನಿಯರಿಗೆ ಭೂರಿಭೋಜನ

---

೧. ಕೃತ್ವಾ ಪುಣ್ಯಾಹಕರ್ಮಾಣಿ ಪ್ರತಿಷ್ಠಾಪ್ಯ ಕುಲೇಶ್ವರೀಮ್ । -ಭ.ಪು. ವೇಂ.ಮಾ.(೧೧/೯೪)
ಪಿತೄನ್ ದೇವಾನ್ ಸಮಭ್ಯರ್ಚ್ಯ ವಿಪ್ರಾಂಶ್ಚ ವಿಧಿವನ್ ನೃಪಃ ।
ಭೋಜಯಿತ್ವಾ ಯಥಾ ನ್ಯಾಯಂ ವಾಚಯಾಮಾಸ ಮಂಗಳಮ್ ॥-ಭಾಗವತ(೧೦/೭೬/೧೦)
ಪುರಾ ಪ್ರದಾನತಃ ಸುರೇಕ್ಷಣಚ್ಛಲಾದ್ಬಹಿರ್ಗತಾಮ್ ।
ರಥೇ ನ್ಯವೇಶಯದ್ಧರಿಃ ಪ್ರಪಶ್ಯತಾಂ ಚ ಭೂಭೃತಾಮ್ ॥ -ಮ.ಭಾ.ತಾ.ನಿ.(೧೭/೧೪೫)

೨. ತತ ಉಭಾವಪಿ ಮಂಡಪದೇವತಾಪ್ರತಿಷ್ಠಾಪನಾನಂತರಂ ವಿವಾಹಾಂಗದೇವತಾಕುಲದೇವತಾ-

ಮಾಡಿಸುವುದು ಇದರ ಮತ್ತೊಂದು ಅಂಗ. ನಾಂದೀಸ್ಥಾಪನೆಯ ಮನೆಯಲ್ಲಿ ಸಾಮಾನ್ಯವಾಗಿ ಆಚಾರವಂತರಿಗೆ ಭೋಜನ ನಿಷಿದ್ಧ. ಅಂತಹವರು [೧]ದೇವರ-ಸಮಾರಾಧನೆಯಂದು ಆಗಮಿಸಿ, ಭೋಜನ ಸ್ವೀಕರಿಸಿ, ಆಶೀರ್ವದಿಸುವಂತೆ ಬೇಡಿ-ಕೊಳ್ಳುವುದು ಇದರ ಮತ್ತೊಂದು ಉದ್ದೇಶ. ಸಾಮಾನ್ಯವಾಗಿ ಇದನ್ನು ವಿವಾಹದ ಹಿಂದಿನ ದಿನ ಆಚರಿಸುವುದು ರೂಢಿ. ಅನುಕೂಲತೆಗಾಗಿ ಕೆಲವು ದಿನಗಳ ಮುಂಚೆಯೂ ಇದನ್ನು ಮಾಡಲು ಅವಕಾಶವಿದೆ. ಇದಕ್ಕೆ ಮುಖ್ಯವಾಗಿ, ಬ್ರಾಹ್ಮಣರೊಂದಿಗೆ ನೇರ ಬಂಧುವರ್ಗದವರನ್ನು ಸಹ ಆಹ್ವಾನಿಸುವುದು ಪದ್ಧತಿ.

## [೨]ಸಮಾವರ್ತನ

ಸಮಾವರ್ತನವು ವಿವಾಹಕ್ಕೆ ಪೂರ್ವಭಾವಿಯಾಗಿ ನಡಯಲೇಬೇಕಾದ ಸಂಸ್ಕಾರ. ಉಪನಯನ ದಿನದಿಂದ ಗುರುಕುಲವಾಸವನ್ನು ಪ್ರಾರಂಭಿಸಿ ಸಾಂಗವಾಗಿ ವೇದಾದಿ ಶಾಸ್ತ್ರಾಧ್ಯಯನ ರೂಪವಾದ ವಿದ್ಯಾಭ್ಯಾಸವನ್ನು ಪೂರೈಸಿದ ಬಳಿಕ ಗುರುಗಳಿಂದ ಅನುಮತಿ ಪಡೆದು ಅವರಿಗೆ ಸೂಕ್ತ ಗುರುದಕ್ಷಿಣೆ ನೀಡಿ, ಗೃಹಸ್ಥನಾಗುವಂತೆ ಅವರಿಂದ ಆದೇಶಪಡೆದು ಸ್ವಗೃಹಕ್ಕೆ ಬ್ರಹ್ಮಚಾರಿಯು ಹಿಂದಿರುಗುವನು[೩]. ಆ ರೀತಿಯಾಗಿ ಗುರುಕುಲವಾಸವನ್ನು ಪೂರೈಸಿ[೪] ಮರಳುವ ಕಾರ್ಯ ಸಮಾವರ್ತನ ಎನ್ನಿಸುವುದು. ಅಂದಿನಿಂದ ಅವರಿಗೆ ಸ್ನಾತಕ(ಗುರುಕುಲ ವಾಸವನ್ನು ಪೂರೈಸಿ ಮಂಗಲಸ್ನಾನವನ್ನು ಪೂರೈಸಿದವನು ಎಂದರ್ಥ) ಎಂದು ಹೆಸರಾಗುವುದು[೫].

---

ಪ್ರೀತ್ಯರ್ಥಂ ಯಥಾಚಾರಂ ದ್ವಿಜಸುವಾಸಿನೀಃ ಕುಮಾರಾದೀನ್ ಯಥಾಕಾಲಂ ಯಥೋಪ-ಪನ್ನೇನಾನ್ನೇನ ಭೋಜಯೇತಾಮ್ । ಏವಮನ್ಯೇಽಪಿ ವೃದ್ಧಪಾರಂಪರ್ಯಾಗತಾ ಉಚ್ಚಾವಚಾ ದೇಶಧರ್ಮಾ ಗ್ರಾಮಧರ್ಮಾಃ ಕುಲಧರ್ಮಾಶ್ಚಾತ್ರ ಕರ್ತವ್ಯಾಃ। -ಸಂಸ್ಕಾರಪದ್ಧತಿ

೧. ತೌಳವರು ಮೊದಲಾದವರಲ್ಲಿ ಈ ದೇವರಸಮಾರಾಧನೆಯ ಕಾರ್ಯ ಪ್ರತ್ಯೇಕವಾಗಿ ನಡೆಯದಿದ್ದರೂ ಗ್ರಹಯಜ್ಞ, ಸಂತರ್ಪಣೆ ಮೊದಲಾದ ರೂಪದಲ್ಲಿ ನಡೆಯುವುದು.

೨. ಅಥ ಸ್ನಾತಕಸಾಧರ್ಮ್ಯಂ ಸಂಪ್ರಾಪ್ಯ ಯದುನಂದನಃ।
ಸ್ನಾತುಂ ಜಿಗಮಿಷುಸ್ತೀರ್ಥಂ ಪ್ರೀತ್ಯೇತ್ಥಂ ಪ್ರತ್ಯಷಿಧ್ಯತ ॥ -ರುಗ್ಮಿಣೀಶ ವಿಜಯ(೧೫/೫೩)

೩. ಗುರುಣಾಽನುಮತಃ ಸ್ನಾತ್ವಾ ಸಮಾವೃತ್ತೋ ಯಥಾವಿಧಿ।
ಉದ್ವಹೇತ ದ್ವಿಜೋ ಭಾರ್ಯಾಂ ಸವರ್ಣಾಂ ಲಕ್ಷಣಾನ್ವಿತಾಮ್ ॥ -ಮನುಸ್ಮೃತಿ(೩,೪)

೪. ಗುರುಕುಲವಾಸವನ್ನು ಪೂರೈಸುವ ಮುನ್ನವೂ ಕಾರಣಾಂತರದಿಂದ ಮನೆಗೆ ಬಂದುಹೋಗುವ ಪ್ರಸಂಗ ಬರಬಹುದು. ಅದು ಬರೀ ಆವರ್ತನ ಮಾತ್ರ. ವಿದ್ಯಾಭ್ಯಾಸ ಪೂರ್ತಿ ಮುಗಿಸುವುದು ಎಂದರೆ ಗುರುಕುಲವಾಸದ ಮುಖ್ಯಕಾರ್ಯವನ್ನೇ ಪೂರೈಸುವುದು ಎಂಬುದನ್ನು ಸೂಚಿಸಲು ಸಮಾವರ್ತನ ಎಂಬ ಪದವೂ ಸೂಕ್ತವಾಗಿದೆ: ಸ್ವಗೃಹಗಾಮಿನಿ ಚಾದ್ರುತಮಾಯಾತಿ।-ಸುಮಧ್ವವಿಜಯ(೩/೪೯)

೫. ತ್ರಯಃ ಸ್ನಾತಕಾ ಭವಂತಿ, ವಿದ್ಯಾಸ್ನಾತಕಃ ವ್ರತಸ್ನಾತಕಃ ವಿದ್ಯಾವ್ರತಸ್ನಾತಕಶ್ಚೇತಿ - ಹಾರೀತಸ್ಮೃತಿ
ಯಃ ಸಮಾಪ್ಯ ವೇದಂ, ಅಸಮಾಪ್ಯ ವ್ರತಾನಿ ಸಮಾವರ್ತತೇ, ಸಃ ವಿದ್ಯಾಸ್ನಾತಕಃ।

ವಿದ್ಯಾಸ್ನಾತಕ, ವ್ರತಸ್ನಾತಕ, ಉಭಯಸ್ನಾತಕ ಎಂಬುದಾಗಿ ಸ್ನಾತಕರು ಮೂರು ವಿಧ. ೧, ೨, ೩ ಅಥವಾ ೪ ವರ್ಷಗಳು ಮಾತ್ರ ಸ್ವಲ್ಪ ವೇದಭಾಗವನ್ನು ಅಧ್ಯಯನ ಮಾಡಿ ಅದರರ್ಥವನ್ನು ತಿಳಿದು ಸಮಗ್ರ ಅಧ್ಯಯನ ಪೂರೈಸಿ ವ್ರತಗಳನ್ನು ಪೂರೈಸದೆ, ಗುರುಕುಲದಿಂದ ಹಿಂದಿರುಗುವವನು ವಿದ್ಯಾಸ್ನಾತಕ; ಗುರುಕುಲವಾಸವನ್ನು ಮಾಡಲೆಂದು ವ್ರತಗಳನ್ನು ಮಾತ್ರ ಪೂರೈಸಿ, ಹೊಂದಿ ವೇದಾಧ್ಯಯನವನ್ನು ಪೂರೈಸದವನು ವ್ರತಸ್ನಾತಕ; ಸಮಗ್ರವಾಗಿ ವೇದಾಧ್ಯಯನದೊಂದಿಗೆ ವ್ರತಗಳನ್ನು ಸಹ ಪೂರೈಸಿ ಮರಳುವವನು ಉಭಯಸ್ನಾತಕ. ಸಂಪೂರ್ಣ ವೇದಾಧ್ಯಯನವನ್ನು ಮಾಡಲು ಶಕ್ತನಾಗದವನು ವೇದದ ಒಂದು ಭಾಗವನ್ನಾದರೂ ಅಧ್ಯಯನ ಮಾಡಬೇಕು. ಅತ್ಯಂತ ಅಶಕ್ಯರಾದವರು ಅವರಿಗೆ ವಿಹಿತವಾದ ವೇದಶಾಖೆಯ ಮೊದಲ ಹಾಗೂ ಕೊನೆಯ ಸೂಕ್ತಗಳನ್ನು, ಇತರ ಕೆಲವು ಸೂಕ್ತಗಳ ಅಥವಾ ಸಕಲ ಸೂಕ್ತಗಳ ಪ್ರಥಮ ಋಕ್ಕುಗಳನ್ನಾದರೂ ಅಧ್ಯಯನ ಮಾಡಬೇಕು. ಅನಂತರ ವಿವಾಹದ ಬಳಿಕವಾದರೂ ಸಹ ವೇದಾಧ್ಯಯನವನ್ನು ಪೂರೈಸಬೇಕು[೧].

ಸಮಾವರ್ತನವು ವಿವಾಹದ ಮುನ್ನವೇ ನಡೆಯಬೇಕು. ಬ್ರಹ್ಮಚರ್ಯ ಪೂರೈಸಿದೆ ; ಇನ್ನೂ ವಿವಾಹವಾಗದ ಕಾರಣ ಗೃಹಸ್ಥಾಶ್ರಮವನ್ನು ಪ್ರವೇಶಿಸಿಲ್ಲ - ಈ ಹಂತದಲ್ಲಿ ಇರುವುದು ಯಾವುದೇ ಆಶ್ರಮವಿಲ್ಲದ ಹಂತ. ಅಂತಹವನನ್ನು [೨]ಅನಾಶ್ರಮಿಯಾಗಿ ಒಂದುದಿನವೂ ಸಹ ಇರಕೂಡದು : ಅನಾಶ್ರಮೀ ನ ತಿಷ್ಠೇತ ದಿನಮೇಕಮಪಿ ದ್ವಿಜಃ. ಆದ್ದರಿಂದ ಕಾಲವಿಲಂಬವನ್ನು ಮಾಡದೆ, ವಿವಾಹದಿನದಂದಾಗಲೀ, ಅಥವಾ ಅದರ ಮುಂಚಿನದಿನದಂದೇ ಆಗಲೀ, ಸ್ನಾತಕವ್ರತವನ್ನು ತಪ್ಪದೆ ಆಚರಿಸಲೇಬೇಕು. ಆದ್ದರಿಂದ ವಿವಾಹಕ್ಕೆ ನಿಷಿದ್ಧವಾದ ತಿಂಗಳುಗಳಲ್ಲಿ (ಚಾತುರ್ಮಾಸ್ಯ ಹಾಗೂ ಧನುರ್ಮಾಸಗಳಲ್ಲಿ) ಸಮಾವರ್ತನ ವಿಹಿತವಲ್ಲ. ಅಂದು ವಿಹಿತರೀತಿಯಲ್ಲಿ ಹೋಮಾದಿಗಳನ್ನು ಪೂರೈಸಿ, ಹತ್ತು ಅಥವಾ ಕನಿಷ್ಠ ಮೂವರು ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಬೇಕು.

---

ಯಃ ಸಮಾಪ್ಯ ವ್ರತಾನಿ ಅಸಮಾಪ್ಯ ವೇದಂ (ಸಮಾವರ್ತತೇ) ಸಃ ವ್ರತಸ್ನಾತಕಃ ।
ಯಃ ಪುನರುಭಯಂ ಸಮಾಪ್ಯ (ಸಮಾವರ್ತತೇ) ಸಃ ವಿದ್ಯಾವ್ರತಸ್ನಾತಕಃ ಇತಿ ।
ಏವಂ ಚ ವ್ರತಸ್ನಾತಕಸ್ಯ ಪರಿಣಯೋತ್ತರಕಾಲಂ ಅಧ್ಯಯನಸಮಾಪನಂ
ತದರ್ಥ ಜ್ಞಾನಂ ಚೇತಿ ಮಂತವ್ಯಮ್॥ -ಸ್ಮೃತಿಮುಕ್ತಾವಲೀ

೧. ಸಂಪೂರ್ಣವೇದಾಧ್ಯಯನೇಷ್ವಶಕ್ತೋ ವೇದೈಕದೇಶಂ ಪಠೇತ್ । ಅತ್ಯಶಕ್ತೇನ ಸಂಹಿತಾಯಾಃ ಪ್ರಥಮಚರಮಸೂಕ್ತೇ । ಕತಿಪಯಸೂಕ್ತಾನಾಂ ಪ್ರಥಮಾ ಋಚಃ ಸರ್ವಸೂಕ್ತಾನಾಂ ಪ್ರಥಮಾ ಋಚೋ ವಾಽಧ್ಯೇತವ್ಯಾಃ । ಏವಂ ವೇದೈಕದೇಶಾಧ್ಯಯನೋತ್ತರಂ ಸಮಾವೃತ್ತೋ ವಿವಾಹಿತೋ ವಾ ಬ್ರಹ್ಮಚರ್ಯೋಕ್ತನಿಯಮೇನ ವೇದಾಧ್ಯಯನಂ ಕುರ್ಯಾತ್ ॥ -ಧರ್ಮಸಿಂಧು

೨. ಆಶ್ರಮೇಣ ವಿನಾ ತಿಷ್ಠನ್ ಪ್ರಾಯಶ್ಚಿತ್ತೀಯತೇ ಹಿ ಸಃ ।
ಸ್ನಾತಸ್ತೂಪಯಮಾದರ್ವಾಜ್ಮೃತೋ ಯಾತಿ ನ ಸದ್ಗತಿಮ್ ।
ತಸ್ಮಾದಾಸನ್ನವೈವಾಹ್ಯಃ ಸ್ನಾನಕರ್ಮ ಸಮಾಚರೇತ್ ॥ ಇತಿ । -ಕಾಠಕಗೃಹ್ಯಕಾರಃ

"ಕಾರಣವಿಲ್ಲದ ಹೊರತು ರಾತ್ರಿಯಲ್ಲಿ ಸ್ನಾನಮಾಡೆನು ; ನಗ್ನನಾಗಿ ಮಲಗೆನು ; ನಗ್ನರನ್ನು ನೋಡೆನು ; ಮಳೆ ಸುರಿಯುವಾಗ ಓಡೆನು ; ವೃಕ್ಷವನ್ನು ಹತ್ತೆನು ; ಬಾವಿಯಲ್ಲಿ ಇಳಿಯೆನು ; ಈಜಿ ನದಿಯನ್ನು ದಾಟೆನು ; ಪ್ರಾಣಾಪಾಯಕ್ಕೆ ಕಾರಣವಾಗುವ ಕಾರ್ಯಗಳನ್ನು ಮಾಡೆನು; ನಿತ್ಯದಲ್ಲೂ ಎರಡು ಯಜ್ಞೋಪವೀತಗಳನ್ನು ಧರಿಸುವೆನು ; ಸದಾ ಅಧ್ಯಯನದಲ್ಲಿ ತೊಡಗುವೆನು ; ತನ್ನ ದೇಹದಿಂದ ತೆಗೆದ ನಿರ್ಮಾಲ್ಯವಾದ ಪುಷ್ಪ ಗಂಧಾದಿಗಳನ್ನು ಮತ್ತೆ ಧರಿಸೆನು ; ಶುಭ್ರವಸ್ತ್ರಗಳನ್ನು ಧರಿಸುವೆನು ; ಇತರರಿಗೆ ಹಿತವಾಗುವಂತೆ ಕಾಣುವೆನು ; ಸಂಪತ್ತು ಇದ್ದಾಗ ಹರಿದ ಬಟ್ಟೆ ಕೊಳಕು ಬಟ್ಟೆಗಳನ್ನು ಧರಿಸೆನು ; ಕೆಂಪುಬಟ್ಟೆಗಳನ್ನಾಗಲಿ, ದೇಹಕ್ಕೆ ಹಿತವೆನಿಸದ ಬಟ್ಟೆಗಳನ್ನು ಧರಿಸೆನು ; ಗುರುಗಳ ಹೊರತು ಇತರರು ಧರಿಸಿದ ವಸ್ತ್ರ, ಅಲಂಕಾರ ಮಾಲೆಗಳನ್ನು ಧರಿಸೆನು ; ಇತರರು ತೊಟ್ಟ ವಸ್ತ್ರಗಳನ್ನಾಗಲೀ, ಪಾದರಕ್ಷೆಗಳನ್ನಾಗಲೀ ತೊಡೆನು ; ನೀರಲ್ಲಿ ಪ್ರತಿಬಿಂಬವನ್ನು ನೋಡಿಕೊಳ್ಳೆನು ; ಪತ್ನಿಯೊಂದಿಗೆ ಒಂದೇ ಪಾತ್ರೆಯಲ್ಲಾಗಲಿ, ಒಂದೇ ಕಾಲದಲ್ಲಿಯಾಗಲೀ ಉಣ್ಣೆನು[೧] ; ಅನರ್ಹರಿಗೆ ಧರ್ಮಜ್ಞಾನ, ನೀತಿಜ್ಞಾನ, ವ್ರತಾನುಷ್ಠಾನಗಳ ಬಗ್ಗೆ ಉಪದೇಶನೀಡೆನು ; ತನ್ನ ಎಂಜಲನ್ನು ಇತರರಿಗೆ ನೀಡೆನು ; ನಿಂತು ಆಚಮನ ಮಾಡೆನು[೨]; ಶುಚಿ ಇಲ್ಲದೆ, ಒಂದೇ ಕೈಯಿಂದ ತಂದ ನೀರಿನಿಂದ ಆಚಮನ ಮಾಡೆನು ; ಪಾದರಕ್ಷೆಗಳನ್ನು ಧರಿಸಿ ನಮಸ್ಕಾರಾದಿಗಳನ್ನು ಮಾಡೆನು, ಆಸನವನ್ನು ಪಾದದಿಂದ ಎಳೆದಾಡೆನು" ಇವು ಕೆಲವು ಸ್ನಾತಕರಾದವರು ಸಮಾವರ್ತನಕಾಲದಲ್ಲಿ ಕೈಗೊಳ್ಳಬೇಕಾದ ವಿಶೇಷ ನಿಯಮಗಳು[೩].

---

೧. ವಿವಾಹಕಾಲದಲ್ಲಿ ಮಾತ್ರ ಪತ್ನಿಯೊಂದಿಗೆ ಜೊತೆಯಾಗಿ ಭೋಜನ ಮಾಡುವ ಅವಕಾಶವಿದೆ.

೨. ಸರೋವರಗಳಲ್ಲಿ ಸ್ನಾನಸಂಕಲ್ಪ ಮಾಡುವಾಗ ನಿಂತು ಆಚಮನ ಮಾಡುವುದಕ್ಕೆ ನಿಷೇಧವಿಲ್ಲ.

೩. ನಿಮಿತ್ತಂ ವಿನಾ ನ ನಕ್ತಂ ಸ್ನಾಸ್ಯಾಮಿ । ನ ನಗ್ನಃ ಶಯಿಷ್ಯೇ । ನ ನಗ್ನಾಂ ಸ್ತ್ರಿಯಮೀಕ್ಷಿಷ್ಯೇನ್ಯತ್ರ ಮೈಥುನಾತ್ । ವರ್ಷತಿ ನ ಧಾವಿಷ್ಯೇ । ನ ವೃಕ್ಷಮಾರೋಹಿಷ್ಯೇ । ನ ಕೂಪಮವರೋಹಿಷ್ಯೇ । ನ ಬಾಹುಭ್ಯಾಂ ನದೀಂ ತರಿಷ್ಯೇ । ನ ಪ್ರಾಣಸಂಶಯಮಭ್ಯಾಪತ್ಸ್ಯೇ ಇತಿ ಸೂತ್ರೋಕ್ತಾನಿ । ಅಥ ಸ್ಮೃತ್ಯುಕ್ತಾನಿ । ನಿತ್ಯಂ ಯಜ್ಞೋಪವೀತದ್ವಯಂ ಧಾರಯಿಷ್ಯೇ । ಸೋದಕಕಮಂಡಲುಂ ಛತ್ರಮುಷ್ಣೀಷಂ ಪಾದುಕೇ ಉಪಾನಹೌ ಸುವರ್ಣಕುಂಡಲೇ ದರ್ಭಮುಷ್ಟಿಂ ಚ ಧಾರಯಿಷ್ಯೇ । ಕರ್ತನೇನ ಹ್ರಸ್ವೀಕೃತಕೇಶಶ್ಮಶ್ರುನಖಃ ಸ್ಯಾಂ ನಿಮಿತ್ತಂ ವಿನಾ ಮುಂಡನಂ ನ ಕರಿಷ್ಯೇ ಇತ್ಯರ್ಥಃ । 'ನ ಸಮಾವೃತ್ತಾ ಮುಂಡೇರನ್' ಇತಿ ನಿಷೇಧಾತ್ । ನಿತ್ಯಮಧ್ಯಯನರತಃ ಸ್ಯಾಮ್ । ಸ್ವಶರೀರಾದುದ್ಧೃತಂ ಸ್ವನಿರ್ಮಾಲ್ಯಂ ಪುಷ್ಪಚಂದನಾದಿ ಪುನರ್ನ ಧಾರಯಿಷ್ಯೇ । ಶುಕ್ಲಾಂಬರಧರಃ ಸ್ಯಾಮ್ । ಸುಗಂಧಿಪ್ರಿಯದರ್ಶನಃ ಸ್ಯಾಮ್ । ವಿಭವೇ ಸತಿ ಜೀರ್ಣವಾಸಾ ಮಲವದ್ವಾಸಾಶ್ಚ ನ ಸ್ಯಾಮ್ । ರಕ್ತಂ ವಾಸಃ ಶರೀರಪೀಡಾವಹಂ ವಾ ವಸ್ತ್ರಂ ನ ಧಾರಯಿಷ್ಯೇ । ಗುರುಂ ವಿನಾನ್ಯೈರ್ಧೃತಂ ವಸ್ತ್ರಮಲಂಕಾರಂ ಸ್ರಜಂ ಚ ನ ಧಾರಯಿಷ್ಯೇ । ಅಶಕ್ತಸ್ತು ಅನ್ಯಧೃತಮಪಿ ವಸ್ತ್ರಾದಿ ಪ್ರಕ್ಷಾಲ್ಯ ಧಾರಯೇತ್ । ಅನ್ಯಧೃತೋಪವೀತಮುಪಾನಹೌ ಚ ನ ಧಾರಯೇ ಕಂಥಾಂ ನ ಧಾರಯಿಷ್ಯೇ । ನ ಸ್ವರೂಪಮುದಕೇ ನಿರೀಕ್ಷಿಷ್ಯೇ । ನ ಭಾರ್ಯಯಾ ಸಾಕಮೇಕಪಾತ್ರೇ ಏಕಕಾಲೇ ವಾಶ್ನೀಯಾಮ್ ।

ಅನಿವಾರ್ಯ ಸಂದರ್ಭದಲ್ಲಿ ಸಂಕ್ಷಿಪ್ತ ಸಮಾವರ್ತನಕ್ಕೂ ಅವಕಾಶವಿದೆ. [೧]ಸಮಾವರ್ತನದ ಮುಖ್ಯ ಉದ್ದೇಶಗಳಲ್ಲಿ ಗುರುಕುಲವಾಸದ ಸಮಯದಲ್ಲಿ ೧೦ ದಿನದ

---

ಏತದ್ವಿವಾಹಭಿನ್ನವಿಷಯಮ್ । ಶೂದ್ರಾಯ ಧರ್ಮಜ್ಞಾನಂ ನೀತಿಜ್ಞಾನಂ ವ್ರತಕಲ್ಪಂ ಚ ನೋಪದಿಶಾಮಿ । ಏತತ್ಸಾಕ್ಷಾದುಪದೇಶಪರಮ್ । 'ಕೃತ್ವಾ ಬ್ರಾಹ್ಮಣಮಗ್ರತಃ' ಇತಿ ಬ್ರಾಹ್ಮಣ-ದ್ವಾರಕೋಪದೇಶೇ ದೋಷಾಭಾವಾತ್ । ಗೃಹಮೇಧಿಶೂದ್ರಾಯ ಸ್ವೋಚ್ಛಿಷ್ಟಂ ನ ದಾಸ್ಯೇ । ಶೂದ್ರಾಯ ಹೋಮಶೇಷಂ ನ ದಾಸ್ಯೇ । ಉದ್ಧೃತೋದಕೇನ ತಿಷ್ಠನ್ನಾಚಮನಂ ನ ಕರಿಷ್ಯೇ । ಜಾನುಮಾತ್ರೇ ತದಧಿಕೇ ವಾ ಜಲೇ ತಿಷ್ಠದಾಚಮನೇ ದೋಷಾಭಾವಾತ್ । ಅಶುಚಿನಾ ಏಕಹಸ್ತೇನ ವಾ ಆನೀತಜಲೈರ್ನಾಚಮಿಷ್ಯೇ । ಪಾದೇನ ಪಾದಧಾವನಂ ನ ಕರಿಷ್ಯೇ । ಅಕಲ್ಪಾಂ ಸ್ತ್ರಿಯಂ ನ ಗಮಿಷ್ಯಾಮಿ । ನ ಪ್ರಾವೃತಮಸ್ತಕೋಽಹನಿ ಪರ್ಯಟಿಷ್ಯಾಮಿ । ರಾತ್ರೌ ಮಲಮೂತ್ರೋತ್ಸರ್ಗೇ ಚ ಪ್ರಾವೃತಶಿರಾಃ ಸ್ಯಾಮ್ । ಸೋಪಾನತ್ಕೋಽಶನಾಭಿವಾದನನಮಸ್ಕಾರಾಂಶ್ಚ ನ ಕರಿಷ್ಯೇ । ಪಾದೇನಾಸನಂ ನಾಪಕರ್ಷಿಷ್ಯಾಮಿ । ಏವಮನ್ಯಾನ್ಯಪಿ ಸ್ಮೃತ್ಯುಕ್ತಾನಿ ಜ್ಞೇಯಾನಿ । ಏತೇಷು ವ್ರತೇಷು ಯಾನಿ ಕರ್ತುಂ ಶಕ್ನುಯಾತ್ತಾವಂತ್ಯೇವ ಸಂಕಲ್ಪಯೇತ್ । ಅತ್ರ ಸಂಕಲ್ಪಿತವ್ರತೋಲ್ಲಂಘನೇ ಮತ್ಯಾ ಕೃತೇ ತ್ರ್ಯಹಮಭೋಜನಂ ಅಮತ್ಯಾ ಕೃತೇ ಏಕರಾತ್ರಮಭೋಜನಂ ಪ್ರಾಯಶ್ಚಿತ್ತಮ್ । ಅಶಕ್ತ-ಸ್ತ್ರೀನೇಕಂ ವಾ ವಿಪ್ರಂ ಭೋಜಯೇತ್ । ಇತಿ ಸ್ನಾತಕವ್ರತಾನಿ । -ಧರ್ಮಸಿಂಧು

೧. ಯಜ್ಞೋಪವೀತದ್ವಿತಯಂ ಸೋದಕಂ ಚ ಕಮಂಡಲುಮ್ ।
ಛತ್ರಂ ಚೋಷ್ಣೀಷಮಮಲಂ ಪಾದುಕೇ ಚ ಹ್ಯುಪಾನಹೌ ॥
ರೌಕ್ಮೇ ಚ ಕುಂಡಲೇ ವೇದಂ ಕೃತ್ತಕೇಶನಖಃ ಶುಚಿಃ ।
ಸ್ವಾಧ್ಯಾಯೇ ನಿತ್ಯಯುಕ್ತಃ ಸ್ಯಾದ್ ಬಹಿರ್ಮಾಲ್ಯಂ ಚ ಧಾರಯೇತ್ ॥
ಶುಕ್ಲಾಂಬರಧರೋ ನಿತ್ಯಂ ಸುಗಂಧಃ ಪ್ರಿಯದರ್ಶನಃ ।
ಧೌತವಸ್ತ್ರೈರ್ಗಂಧಪುಷ್ಪೈಃ ಕ್ಷಾಲನೈರ್ದಂತಧಾವನೈಃ ॥
ಶ್ರೀಕಾಮೋ ಭೂಷಣಾದ್ಯೈಶ್ಚ ಸ್ವಶಕ್ತ್ಯಾ ಭೂಷಯೇತ್ ತನುಮ್ ।
ನ ಸೀದೇತ್ ಸ್ನಾತಕೋ ವಿಪ್ರಃ ಕ್ಷುಧಾ ಶಕ್ತಃ ಕಥಂಚನ ।
ನ ಜೀರ್ಣಮಲವದ್ವಾಸಾ ಭವೇಚ್ಚ ವಿಭವೇ ಸತಿ ॥ ಇತಿ । -ಕೂರ್ಮ ಪುರಾಣ

ವಸಿಷ್ಠಸ್ತು ಸ್ನಾತಕವ್ರತೋಪಕ್ರಮಕಾಲಂ ಧರ್ಮಾಂಶ್ಚ ಆಹ :-
ಶುಭೇ ಲಗ್ನೇ ಷಷ್ಠೇ ವಾಸರೇ ವಾ ಚರೇತ್ತು ಸ್ನಾತಕವ್ರತಂ ।
ಸಮಿದ್ಭಿರ್ಯಜ್ಞವೃಕ್ಷೋತ್ಥೈಃ ಯದ್ವಾ ವ್ರೀಹಿಯವಾದಿಭಿಃ ॥
ಅಗ್ನಿಂ ಯಜೇದ್ವ್ಯಾಹೃತಿಭಿಃ ಯದ್ವಾ ಮಂತ್ರೈಸ್ತು ಶಾಕಲೈಃ ।
ತೀರ್ಥಸೇವೀ ಮಿತಾಹಾರೀ ತ್ಯಜೇದಷ್ಟಾಂಗಮೈಥುನಮ್ ॥
ಸ್ಮರಣಂ ಕೀರ್ತನಂ ಕೇಲಿಃ ಪ್ರೇಕ್ಷಣಂ ಗುಹ್ಯಭಾಷಣಮ್ ।
ಸಂಕಲ್ಪೋಽಧ್ಯವಸಾಯಶ್ಚ ಕ್ರಿಯಾನಿರ್ವೃತಿರೇವ ಚ ॥
ಏತನ್ಮೈಥುನಮಷ್ಟಾಂಗಂ ಪ್ರವದಂತಿ ಮನೀಷಿಣಃ ।
ಪ್ರಮಾದಾದ್ಯದಿ ವಾ ಮೋಹಾದ್ವ್ರತಲೋಪೇ ತು ಹಾಯನಮ್ ॥
ಷಣ್ಮಾಸಂ ಕೃಚ್ಛ್ರಮೇಕಂ ವಾ ಚರೇತ್ ಪಾಪಾನುರೂಪತಃ ।
ಆಜ್ಯೇನ ಜುಹುಯಾದಗ್ನೌ ಪ್ರಾಯಶ್ಚಿತ್ತಾಹುತೀಸ್ತತಃ ॥
ಪಾಹಿ ನೋ ಅಗ್ನ ಇತ್ಯೃಚಾ ಯಜುರ್ಭಿಃ ಪಾಹಿನಸ್ತ್ರಿಭಿಃ ।

ಆಶೌಚಕ್ಕೆ ಕಾರಣರಾಗುವ ಸಪಿಂಡರ ಮರಣವಾದಾಗ ಆಶೌಚದ ಆಚರಣೆ ನಡೆದಿರುವುದಿಲ್ಲ. ಅದರ ಪರಿಹಾರಕ್ಕಾಗಿ ಸಮಾವರ್ತನ ಕಾಲದಲ್ಲಿ ೩ ದಿನಗಳ ಆಶೌಚಾ-ಚರಣೆ ವಿಹಿತವಾಗಿದೆ. ಅಂತಹ ಪ್ರಸಂಗಗಳು ಒದಗದೇ ಇದ್ದವರಿಗೆ ಈ ೩ ದಿನಗಳ ಆಶೌಚದ ಆಚರಣೆ ಅಗತ್ಯವಿಲ್ಲ. ಅಂತಹವರು ಸಾಂಕೇತಿಕವಾಗಿ ಕೆಲವು ಘಳಿಗೆಗಳ ಕಾಲ ಆಶೌಚ ಆಚರಿಸಿ, ವಿವಾಹಕ್ಕೆ ಅರ್ಹರಾಗಬಹುದು.

ವಿವಾಹವಾಗಲು ಮಾತ್ರವಲ್ಲದೆ ಬ್ರಹ್ಮಚರ್ಯದಿಂದಲೇ ಸಂನ್ಯಾಸ ಸ್ವೀಕರಿಸಲು ಸಹ ಈ ಸಮಾವರ್ತನ ಸಂಸ್ಕಾರ[1] ಅವಶ್ಯವಿಧಿಯಾಗಿದೆ.

ಸಾಮಾನ್ಯವಾಗಿ ಉತ್ತರಾಯಣಕಾಲ ಸಮಾವರ್ತನಕ್ಕೆ ಪ್ರಶಸ್ತ. ಚಾತುರ್ಮಾಸ್ಯದ ಬಳಿಕ ಧನುರ್ಮಾಸದ ಮುನ್ನ ವಿವಾಹಕ್ಕೆ ಅವಕಾಶವಿರುವುದರಿಂದ, ಅದು ದಕ್ಷಿಣಾಯನ-ಕಾಲವಾಗಿದ್ದರೂ ಸಮಾವರ್ತನಕ್ಕೆ ಅವಕಾಶವಿದೆ[2]. ರಿಕ್ತಾತ್ರಯ, ಪೂರ್ಣಿಮೆ,

---

ಮಹಾವ್ಯಾಹೃತಿಭಿಶ್ಚೈವ ಪುನಶ್ಚ ಸ್ವರಹಸ್ಯಯಾ ॥ ಇತಿ ।
ಗೋಮೂತ್ರಂ ಗೋಮಯಂ ಕ್ಷೀರಂ ದಧಿಃ ಸರ್ಪಿಃ ಕುಶೋದಕಮ್ ।
ಜಗ್ಧ್ವಾ ಪರೇಹ್ನ್ಯುಪವಸೇತ್ ಕೃಚ್ಛ್ರಂ ಸಾಂತಪನಂ ಚರನ್ ॥

- ಯಾಜ್ಞವಲ್ಕ್ಯಸ್ಮೃತಿ, ಪ್ರಾಯಶ್ಚಿತ್ತಾಧ್ಯಾಯ(೩೧೩)

ವಚನದ್ವಯಾನುಸಾರೇಣ ಕಾಲವಿಲಂಬಂ ಅಸಹಮಾನಃ ವಿವಾಹದಿನಾತ್ ಪೂರ್ವದಿನೇ ವಾ ವಿವಾಹದಿನೇ ವಾ ಸ್ನಾತಕವ್ರತಂ ಕಾರ್ಯಮಿತ್ಯಾಹ :-
ವಿವಾಹದಿವಸಾತ್ ಪೂರ್ವಂ ತದ್ದಿನೇ ಸ್ನಾನಮಾಚರೇತ್ ।
ವಿವಾಹದಿವಸಾಧಸ್ತಾದ್ ಭವೇತ್ತು ಸ್ನಾತಕವ್ರತಮ್ ।
ವಿವಾಹದಿವಸೇ ಕುರ್ವನ್ ನ ಕುರ್ಯಾತ್ ತೀರ್ಥಸೇವನಂ ।
ನ ಚ ಶಾಕಲಹೋಮೋಽಸ್ತಿ ತಿಷ್ಯೇನ್ನಕ್ಷತ್ರದರ್ಶನಾತ್ ॥
ರಾತ್ರಾವೇವೋದ್ವಹೇತ್ ಕನ್ಯಾಂ ನ ಸ್ನಾನದಿವಸೇಽಹನಿ' । ಇತಿ ।
ವಿವಾಹದಿನಾತ್ ಪೂರ್ವದಿನೇ ವಾ ವಿವಾಹದಿನೇ ವಾ ಸ್ನಾತಕವ್ರತಂ ಕರ್ತವ್ಯಮ್ । ಯದಿ ಪೂರ್ವದಿನೇ ಸ್ನಾತಕವ್ರತಂ ತದಾ ತಸ್ಮಿನ್ನೇವ ದಿನೇ ವ್ರತಧರ್ಮಾಚರಣಮಪೀತಿ ಪ್ರಥಮಶ್ಲೋಕಾರ್ಥಃ । ಯದಿ ವಿವಾಹದಿನೇ ಸ್ನಾತಕವ್ರತಂ ತದಾ ತಸ್ಮಿನ್ನೇವ ದಿನೇ ನ ತೀರ್ಥಸೇವಾ, ನ ವಾ ಶಾಕಲಹೋಮಃ ಇತಿ ದ್ವಿತೀಯಶ್ಲೋಕಾರ್ಥಃ । ಯದಾ ದಿವಾ ಸ್ನಾತಕವ್ರತಂ ತದಾ ರಾತ್ರಾವೇವ ಉದ್ವಾಹಃ । ತಸ್ಮಿನ್ ದಿನೇ ನ ದಿವಾ ಇತಿ ತೃತೀಯಶ್ಲೋಕಾರ್ಥಃ । -ಧರ್ಮಸಿಂಧು

೧. ಗುರವೇ ದಕ್ಷಿಣಾಂ ದತ್ವಾಽಪ್ಯಶಕ್ತಸ್ತದನುಜ್ಞಯಾ ।
ಸಮಾವೃತ್ಯೋದ್ವಹೇತ್ ಕನ್ಯಾಂ ಸಂನ್ಯಾಸಮಪಿ ವಾ ವ್ರಜೇತ್ ॥

-ವ್ಯಾಸಸ್ಮೃತಿ,ವಾ(೨/೩/೧೯೦,೨/೪/೧)

೨. ಮಾರ್ಗಶೀರ್ಷೇ ವಿವಾಹಪ್ರಸಕ್ತೌ ದಕ್ಷಿಣಾಯನೇಽಪಿ ಭವತಿ ।
ಅನ್ಯಥಾ, ''ಅನಾಶ್ರಮೀ ನ ತಿಷ್ಠೇತ ದಿನಮೇಕಮಪಿ ದ್ವಿಜಃ'' ಇತಿ ನಿಷೇಧಾತಿಕ್ರಮಾಪತ್ತೇಃ ॥

-ಧರ್ಮಸಿಂಧು

ಅಮಾವಾಸ್ಯ, ಅಷ್ಟಮೀ ಹಾಗೂ ಪ್ರತಿಪತ್ ತಿಥಿಗಳನ್ನು ಹೊರತುಪಡಿಸಿ ಶುಕ್ಲಪಕ್ಷದಲ್ಲಿ ಹಾಗೂ ಕೊನೆಯ ಮೂರು ತಿಥಿಗಳನ್ನು ಹೊರತುಪಡಿಸಿ ಕೃಷ್ಣಪಕ್ಷದಲ್ಲಿ, ಗುರು, ಶುಕ್ರ ಮೊದಲಾದ ಅಸ್ತಗಳು ಇಲ್ಲದ ದಿನಗಳಲ್ಲಿ, ದಿನಕ್ಷಯ, ಭದ್ರಾ, ವ್ಯತೀಪಾತ ಮೊದಲಾದ ದೋಷಗಳಿರದ ದಿನಗಳಲ್ಲಿ ಸಮಾವರ್ತನೆಯು ಉಚಿತ.[೧] ಏಕಾದಶೀ, ದ್ವಾದಶೀ ತಿಥಿಗಳಂದೂ ಸಹ ನಿಷಿದ್ಧ ಎಂಬ ವಿಶೇಷವನ್ನು ಗಮನಿಸಬೇಕು. ಪುಷ್ಯ, ಪುನರ್ವಸು, ಮೃಗಶಿರಾ, ರೇವತಿ, ಹಸ್ತಾ, ಅನುರಾಧಾ, ಉತ್ತರಾತ್ರಯ(ಉತ್ತರಾ, ಉತ್ತರಾಷಾಢ, ಉತ್ತರಾಭಾದ್ರ), ರೋಹಿಣೀ, ಶ್ರವಣ, ವಿಶಾಖಾ ಹಾಗೂ ಚಿತ್ರಾ ನಕ್ಷತ್ರಗಳು ಶ್ರೇಷ್ಠ[೨]. ಸಮಾವರ್ತನವು ವಿವಾಹ ದಿನದಂದೇ ನಡೆಯಲು ಸಹ ಅವಕಾಶವಿದೆ. ಆದರೆ ಆ ಪಕ್ಷದಲ್ಲಿ ವಿವಾಹ ಅಂದು ಮಧ್ಯಾಹ್ನ ನಡೆಯುವಂತಿಲ್ಲ. ರಾತ್ರಿಕಾಲದಲ್ಲೇ ನಡೆಯಬೇಕು ಎಂಬುದು ವಿಶೇಷ ನಿಯಮ.

## ವಿವಾಹಸಂಸ್ಕಾರದ ಕೆಲವು ಪ್ರಮುಖ ಅಂಗಗಳು :

| | | |
|---|---|---|
| ೧. ಸೀಮಾಂತಪೂಜೆ | ೨. ವಾಙ್ನಿಶ್ಚಯ | ೩. ಪುಣ್ಯಾಹವಾಚನ |
| ೪. ಮಾತೃಕಾಪೂಜನ | ೫. ನಾಂದೀಶ್ರಾದ್ಧ | ೬. ಮಂಟಪದೇವತಾಸ್ಥಾಪನೆ |
| ೭. ಮಧುಪರ್ಕ | ೮. ಕಂಕಣಬಂಧನ | ೯. ಗೌರೀಹರ ಪೂಜೆ |
| ೧೦.ವಧೂವರರ ನಿರೀಕ್ಷಣ | ೧೧.ಕನ್ಯಾದಾನ | ೧೨.ಅಕ್ಷತಾರೋಪಣ |
| ೧೩.ಮಾಂಗಲ್ಯಬಂಧನ | ೧೪.ವಿವಾಹಹೋಮ | ೧೫.ಪಾಣಿಗ್ರಹಣ |
| ೧೬.ಲಾಜಹೋಮ | ೧೭.ಅಶ್ಮಾರೋಹಣ | ೧೮.ಸಪ್ತಪದೀ |
| ೧೯.ತ್ರಿರಾತ್ರವ್ರತ | ೨೦.ಅರುಂಧತೀ ದರ್ಶನ | ೨೧.ಗೃಹಪ್ರವೇಶನೀಯಹೋಮ |
| ೨೨.ನಾಕಬಲಿ/ವಸಂತಪೂಜಾ | ೨೩.ಐರಿಣೀ ಪೂಜನ | ೨೪.ಗೃಹಪ್ರವೇಶ |
| ೨೫. ದೇವತೋತ್ಥಾಪನ,ಮಂಟಪೋದ್ವಾಸನ | | ೨೬.ಪುರೋಹಿತರಿಗೆ ದಕ್ಷಿಣೆ |

---

೧. ಅನ್ಯೇ ತು ಮೌಂಜ್ಯುಕ್ತಕಾಲೋಪಾದಾನೇ ಮೂಲಾಭಾವಾತ್ ರಿಕ್ತಾತ್ರಯಪೂರ್ಣಮಾಮಾವಾಸ್ಯಾಷ್ಟಮೀಪ್ರತಿಪದ್ಭಿನ್ನತಿಥಿಷು ಶುಕ್ಲೇಂತ್ಯತ್ರಿಕಭಿನ್ನಕೃಷ್ಣೇ ಚ ಗುರುಶುಕ್ರಾಸ್ತಾದಿದಿನಕ್ಷಯಭದ್ರಾ ವ್ಯತೀಪಾತಾದಿದೋಷಶೂನ್ಯೇ ಶುಭವಾರೇ ಸಮಾವರ್ತನಂ ಕಾರ್ಯಮ್ । ನಾತ್ರ ಪ್ರದೋಷಸೋಪಪದಾದಿತಿಥಿವರ್ಜನಮಾವಶ್ಯಕಮಿತ್ಯಾಹುಃ । -ಧರ್ಮಸಿಂಧು

೨. ಪುಷ್ಯಪುನರ್ವಸುಮೃಗರೇವತೀಹಸ್ತಾನುರಾಧೋತ್ತರಾತ್ರಯರೋಹಿಣೀಶ್ರವಣವಿಶಾಖಾಚಿತ್ರಾಃ ಶ್ರೇಷ್ಠಾಃ । ಏತದಲಾಭೇ ಮೌಂಜ್ಯುಕ್ತಭಾನಿ ಕ್ವಚಿತ್ ಭೌಮಶನಿವಾರೌ ಸಿಂಧಾವುಕ್ತೌ । -ಧರ್ಮಸಿಂಧು

ಆಶೌಚಕ್ಕೆ ಕಾರಣರಾಗುವ ಸಪಿಂಡರ ಮರಣವಾದಾಗ ಆಶೌಚದ ಆಚರಣೆ ನಡೆದಿರುವುದಿಲ್ಲ. ಅದರ ಪರಿಹಾರಕ್ಕಾಗಿ ಸಮಾವರ್ತನ ಕಾಲದಲ್ಲಿ ೩ ದಿನಗಳ ಆಶೌಚಾ-ಚರಣೆ ವಿಹಿತವಾಗಿದೆ. ಅಂತಹ ಪ್ರಸಂಗಗಳು ಒದಗದೇ ಇದ್ದವರಿಗೆ ಈ ೩ ದಿನಗಳ ಆಶೌಚದ ಆಚರಣೆ ಅಗತ್ಯವಿಲ್ಲ. ಅಂತಹವರು ಸಾಂಕೇತಿಕವಾಗಿ ಕೆಲವು ಘಳಿಗೆಗಳ ಕಾಲ ಆಶೌಚ ಆಚರಿಸಿ, ವಿವಾಹಕ್ಕೆ ಅರ್ಹರಾಗಬಹುದು.

ವಿವಾಹವಾಗಲು ಮಾತ್ರವಲ್ಲದೆ ಬ್ರಹ್ಮಚರ್ಯದಿಂದಲೇ ಸಂನ್ಯಾಸ ಸ್ವೀಕರಿಸಲು ಸಹ ಈ ಸಮಾವರ್ತನ ಸಂಸ್ಕಾರ[1] ಅವಶ್ಯವಿಧಿಯಾಗಿದೆ.

ಸಾಮಾನ್ಯವಾಗಿ ಉತ್ತರಾಯಣಕಾಲ ಸಮಾವರ್ತನಕ್ಕೆ ಪ್ರಶಸ್ತ. ಚಾತುರ್ಮಾಸ್ಯದ ಬಳಿಕ ಧನುರ್ಮಾಸದ ಮುನ್ನ ವಿವಾಹಕ್ಕೆ ಅವಕಾಶವಿರುವುದರಿಂದ, ಅದು ದಕ್ಷಿಣಾಯನ-ಕಾಲವಾಗಿದ್ದರೂ ಸಮಾವರ್ತನಕ್ಕೆ ಅವಕಾಶವಿದೆ[2]. ರಿಕ್ತಾತ್ರಯ, ಪೂರ್ಣಿಮೆ,

---

ಮಹಾವ್ಯಾಹೃತಿಭಿಶ್ಚೈವ ಪುನಶ್ಚ ಸರಹಸ್ಯಯಾ ॥ ಇತಿ ।
ಗೋಮೂತ್ರಂ ಗೋಮಯಂ ಕ್ಷೀರಂ ದಧಿಃ ಸರ್ಪಿಃ ಕುಶೋದಕಮ್ ।
ಜಗ್ಧ್ವಾ ಪರೇಹ್ನ್ಯುಪವಸೇತ್ ಕೃಚ್ಛ್ರಂ ಸಾಂತಪನಂ ಚರನ್ ॥

- ಯಾಜ್ಞವಲ್ಕ್ಯಸ್ಮೃತಿ, ಪ್ರಾಯಶ್ಚಿತ್ತಾಧ್ಯಾಯ(೩೧೩)

ವಚನದ್ವಯಾನುಸಾರೇಣ ಕಾಲವಿಲಂಬಂ ಅಸಹಮಾನಃ ವಿವಾಹದಿನಾತ್ ಪೂರ್ವದಿನೇ ವಾ ವಿವಾಹದಿನೇ ವಾ ಸ್ನಾತಕವ್ರತಂ ಕಾರ್ಯಮಿತ್ಯಾಹ :-
ವಿವಾಹದಿವಸಾತ್ ಪೂರ್ವಂ ತದ್ದಿನೇ ಸ್ನಾನಮಾಚರೇತ್ ।
ವಿವಾಹದಿವಸಾಧಸ್ತಾದ್ ಭವೇತ್ತು ಸ್ನಾತಕವ್ರತಮ್ ।
ವಿವಾಹದಿವಸೇ ಕುರ್ವನ್ ನ ಕುರ್ಯಾತ್ ತೀರ್ಥಸೇವನಂ ।
ನ ಚ ಶಾಕಲಹೋಮೋಽಸ್ತಿ ತಿಷ್ಠೇನ್ನಕ್ಷತ್ರದರ್ಶನಾತ್ ॥
ರಾತ್ರಾವೇವೋದ್ವಹೇತ್ ಕನ್ಯಾಂ ನ ಸ್ನಾನದಿವಸೇಽಹನಿ' । ಇತಿ ।
ವಿವಾಹದಿನಾತ್ ಪೂರ್ವದಿನೇ ವಾ ವಿವಾಹದಿನೇ ವಾ ಸ್ನಾತಕವ್ರತಂ ಕರ್ತವ್ಯಮ್ । ಯದಿ ಪೂರ್ವದಿನೇ ಸ್ನಾತಕವ್ರತಂ ತದಾ ತಸ್ಮಿನ್ನೇವ ದಿನೇ ವ್ರತಧರ್ಮಾಚರಣಮಪೀತಿ ಪ್ರಥಮಶ್ಲೋಕಾರ್ಥಃ । ಯದಿ ವಿವಾಹದಿನೇ ಸ್ನಾತಕವ್ರತಂ ತದಾ ತಸ್ಮಿನ್ನೇವ ದಿನೇ ನ ತೀರ್ಥಸೇವಾ, ನ ವಾ ಶಾಕಲಹೋಮಃ ಇತಿ ದ್ವಿತೀಯಶ್ಲೋಕಾರ್ಥಃ। ಯದಾ ದಿವಾ ಸ್ನಾತಕವ್ರತಂ ತದಾ ರಾತ್ರಾವೇವ ಉದ್ವಾಹಃ। ತಸ್ಮಿನ್ ದಿನೇ ನ ದಿವಾ ಇತಿ ತೃತೀಯಶ್ಲೋಕಾರ್ಥಃ।

-ಧರ್ಮಸಿಂಧು

೧. ಗುರವೇ ದಕ್ಷಿಣಾಂ ದತ್ವಾಽಪ್ಯಶಕ್ತಸ್ತದನುಜ್ಞಯಾ ।
ಸಮಾವೃತ್ಯೋದ್ವಹೇತ್ ಕನ್ಯಾಂ ಸಂನ್ಯಾಸಮಪಿ ವಾ ವ್ರಜೇತ್ ॥

-ವ್ಯಾಸಸ್ಮೃತಿ,ವಾ(೨/೩/೧೯೦,೨/೪/೧)

೨. ಮಾರ್ಗಶೀರ್ಷೇವಿವಾಹಪ್ರಸಕ್ತೌ ದಕ್ಷಿಣಾಯನೇಽಪಿ ಭವತಿ ।
ಅನ್ಯಥಾ, "ಅನಾಶ್ರಮೀ ನ ತಿಷ್ಠೇತ ದಿನಮೇಕಮಪಿ ದ್ವಿಜಃ" ಇತಿ ನಿಷೇಧಾತಿಕ್ರಮಾಪತ್ತೇಃ ॥

-ಧರ್ಮಸಿಂಧು

ಅಮಾವಾಸ್ಯ, ಅಷ್ಟಮೀ ಹಾಗೂ ಪ್ರತಿಪತ್ ತಿಥಿಗಳನ್ನು ಹೊರತುಪಡಿಸಿ ಶುಕ್ಲಪಕ್ಷದಲ್ಲಿ ಹಾಗೂ ಕೊನೆಯ ಮೂರು ತಿಥಿಗಳನ್ನು ಹೊರತುಪಡಿಸಿ ಕೃಷ್ಣಪಕ್ಷದಲ್ಲಿ, ಗುರು, ಶುಕ್ರ ಮೊದಲಾದ ಅಸ್ತಗಳು ಇಲ್ಲದ ದಿನಗಳಲ್ಲಿ, ದಿನಕ್ಷಯ, ಭದ್ರಾ, ವ್ಯತೀಪಾತ ಮೊದಲಾದ ದೋಷಗಳಿರದ ದಿನಗಳಲ್ಲಿ ಸಮಾವರ್ತನೆಯು ಉಚಿತ.[೧] ಏಕಾದಶೀ, ದ್ವಾದಶೀ ತಿಥಿಗಳಂದೂ ಸಹ ನಿಷಿದ್ಧ ಎಂಬ ವಿಶೇಷವನ್ನು ಗಮನಿಸಬೇಕು. ಪುಷ್ಯ, ಪುನರ್ವಸು, ಮೃಗಶಿರಾ, ರೇವತಿ, ಹಸ್ತಾ, ಅನುರಾಧಾ, ಉತ್ತರಾತ್ರಯ(ಉತ್ತರಾ, ಉತ್ತರಾಷಾಢ, ಉತ್ತರಾಭಾದ್ರ), ರೋಹಿಣೀ, ಶ್ರವಣ, ವಿಶಾಖಾ ಹಾಗೂ ಚಿತ್ರಾ ನಕ್ಷತ್ರಗಳು ಶ್ರೇಷ್ಠ[೨]. ಸಮಾವರ್ತನವು ವಿವಾಹ ದಿನದಂದೇ ನಡೆಯಲು ಸಹ ಅವಕಾಶವಿದೆ. ಆದರೆ ಆ ಪಕ್ಷದಲ್ಲಿ ವಿವಾಹ ಅಂದು ಮಧ್ಯಾಹ್ನ ನಡೆಯುವಂತಿಲ್ಲ. ರಾತ್ರಿಕಾಲದಲ್ಲೇ ನಡೆಯಬೇಕು ಎಂಬುದು ವಿಶೇಷ ನಿಯಮ.

## ವಿವಾಹಸಂಸ್ಕಾರದ ಕೆಲವು ಪ್ರಮುಖ ಅಂಗಗಳು :

೧. ಸೀಮಾಂತಪೂಜೆ
೨. ವಾಙ್ನಿಶ್ಚಯ
೩. ಪುಣ್ಯಾಹವಾಚನ
೪. ಮಾತೃಕಾಪೂಜನ
೫. ನಾಂದೀಶ್ರಾದ್ಧ
೬. ಮಂಟಪದೇವತಾಸ್ಥಾಪನೆ
೭. ಮಧುಪರ್ಕ
೮. ಕಂಕಣಬಂಧನ
೯. ಗೌರೀಹರ ಪೂಜೆ
೧೦. ವಧೂವರರ ನಿರೀಕ್ಷಣ
೧೧. ಕನ್ಯಾದಾನ
೧೨. ಅಕ್ಷತಾರೋಪಣ
೧೩. ಮಾಂಗಲ್ಯಬಂಧನ
೧೪. ವಿವಾಹಹೋಮ
೧೫. ಪಾಣಿಗ್ರಹಣ
೧೬. ಲಾಜಹೋಮ
೧೭. ಅಶ್ಮಾರೋಹಣ
೧೮. ಸಪ್ತಪದೀ
೧೯. ತ್ರಿರಾತ್ರವ್ರತ
೨೦. ಅರುಂಧತೀ ದರ್ಶನ
೨೧. ಗೃಹಪ್ರವೇಶನೀಯಹೋಮ
೨೨. ನಾಕಬಲಿ/ವಸಂತಪೂಜಾ
೨೩. ಐರಿಣೀ ಪೂಜನ
೨೪. ಗೃಹಪ್ರವೇಶ
೨೫. ದೇವತೋತ್ಥಾಪನ, ಮಂಟಪೋದ್ವಾಸನ
೨೬. ಪುರೋಹಿತರಿಗೆ ದಕ್ಷಿಣೆ

---

೧. ಅನ್ಯೇ ತು ಮೌಂಜ್ಯುಕ್ತಕಾಲೋಪಾದಾನೇ ಮೂಲಾಭಾವಾತ್ ರಿಕ್ತಾತ್ರಯಪೂರ್ಣಮಾಮಾ-ವಾಸ್ಯಾಷ್ಟಮೀಪ್ರತಿಪದ್ಭಿನ್ನತಿಥಿಷು ಶುಕ್ಲೇಂತ್ಯತ್ರಿಕಭಿನ್ನಕೃಷ್ಣೇ ಚ ಗುರುಶುಕ್ರಾಸ್ತಾದಿದಿನಕ್ಷಯಭದ್ರಾ ವ್ಯತೀಪಾತಾದಿದೋಷಶೂನ್ಯೇ ಶುಭವಾರೇ ಸಮಾವರ್ತನಂ ಕಾರ್ಯಮ್ । ನಾತ್ರ ಪ್ರದೋಷ-ಸೋಪಪದಾದಿತಿಥಿವರ್ಜನಮಾವಶ್ಯಕಮಿತ್ಯಾಹುಃ । -ಧರ್ಮಸಿಂಧು

೨. ಪುಷ್ಯಪುನರ್ವಸುಮೃಗರೇವತೀಹಸ್ತಾನುರಾಧೋತ್ತರಾತ್ರಯರೋಹಿಣೀಶ್ರವಣವಿಶಾಖಾಚಿತ್ರಾಃ ಶ್ರೇಷ್ಠಾಃ । ಏತದಲಾಭೇ ಮೌಂಜ್ಯುಕ್ತಭಾನಿ ಕ್ವಚಿತ್ ಭೌಮಶನಿವಾರೌ ಸಿಂಧಾವುಕ್ತೌ ।

-ಧರ್ಮಸಿಂಧು

# ಒಟ್ಟು ವಿವಾಹದ ಅವಧಿ

ಒಟ್ಟು ವಿವಾಹಕಾರ್ಯ ಪೂರೈಸಲು ತಗಲುವ ಅವಧಿ ಐದು ದಿನಗಳು. ಮೊದಲ ದಿನ ದೇವರಸಮಾರಾಧನೆ, ವರಪೂಜೆ ಇತ್ಯಾದಿ, ಎರಡನೆಯ ದಿನ ಸಪ್ತಪದಿಯ ವರೆಗೆ. ಮೂರನೆಯ ದಿನ ಗೃಹಪ್ರವೇಶ, ನಾಲ್ಕನೆಯ ದಿನ ಅಭ್ಯಂಗ ಸ್ನಾನ ಇತ್ಯಾದಿ. ಕೊನೆಯ ದಿನ ಉಪಸಂಹಾರ. ಆದರೆ ಇತ್ತೀಚಿನ ದಿನಗಳಲ್ಲಿ ಅದು ಕೆಲವು ಕಡೆ ಮೂರುದಿನಕ್ಕೆ ಮತ್ತೆ ಕೆಲವು ಕಡೆ ಎರಡು ದಿನಕ್ಕೆ ಇನ್ನೂ ಹೆಚ್ಚಾಗಿ ಒಂದೇ ದಿನಕ್ಕೆ ಅದರಲ್ಲೂ ಕೆಲವು ಅರ್ಧದಿನಕ್ಕೆ ಇಳಿದಿರುವುದು ಶೋಚನೀಯ. ಅತಿಕಡಿಮೆ ಎಂದರೂ ೩ ದಿನಗಳ ವಿವಾಹ ಇಂದಿನ ಕಾಲದಲ್ಲೂ ಸಾಧ್ಯವಿದೆ. ಆದರೆ ಅದು ಇಂದು ಧಾರ್ಮಿಕ ಕಾರ್ಯಕ್ರಮಕ್ಕಿಂತ ಹೆಚ್ಚಾಗಿ ಕೇವಲ ಸಾಮಾಜಿಕ ಕಾರ್ಯವೆನ್ನಿಸುವ ಮಟ್ಟಕ್ಕೆ ಇಳಿದಿರುವುದರಿಂದ ವಿಧಿವಿಧಾನಗಳು ಗೌಣವೆನ್ನಿಸಿ, ಕೇವಲ ಪ್ರತಿಷ್ಠೆ ಮೊದಲಾದವುಗಳೇ ಮೇಲುಗೈ ಸಾಧಿಸಿವೆ. ಎಂದ ಮಾತ್ರಕ್ಕೆ ಖರ್ಚುವೆಚ್ಚಗಳಿಗೆ ಮಾತ್ರ ಇತಿಮಿತಿ ಎಂದು ತಿಳಿಯಬೇಕಿಲ್ಲ. ಶಾಸ್ತ್ರೀಯ ವಿವಾಹಕ್ಕಿಂತ ಈ ತೋರಿಕೆಯ ವಿವಾಹಗಳಿಗೆ ತಗಲುವ ಖರ್ಚುವೆಚ್ಚ ಅಪಾರ. ಆದರೆ ಪರಿಣಾಮ ಮಾತ್ರ ಹೇಳಿಕೊಳ್ಳುವಂತಹುದಲ್ಲ. ನಡೆಯುವ ವಿವಾಹಗಳಲ್ಲಿ ಬಹುಪಾಲು ವಿವಾಹಗಳು ವಿಚ್ಛೇದನದಲ್ಲಿ ಪರ್ಯವಸಾನ-ಗೊಳ್ಳುವ ಮುಖ್ಯಕಾರಣ ವಿಧಿವಿಧಾನಗಳ ಅಭಾವ. ಆದ್ದರಿಂದ ಶಕ್ಯವಿದ್ದಷ್ಟು ವಿಧಿವಿಧಾನಗಳಿಗೆ ಪ್ರಾಧಾನ್ಯನೀಡಿ ಇದನ್ನು ವೇದೋಕ್ತವಾದ ಸಂಸ್ಕಾರ ಎಂದು ಎಚ್ಚರ ವಹಿಸಿದಲ್ಲಿ ಆಗುವ ಎಷ್ಟೋ ಅನಾಹುತಗಳನ್ನು ತಡೆಯಲು ಸಾಧ್ಯ.

## ಸೀಮಾಂತಪೂಜೆ

ಈ ಸೀಮಾಂತಪೂಜೆಯು ಇಂದು ವರನನ್ನು (ಅವನ ಕಡೆಯವರನ್ನು) ಎದುರು-ಗೊಳ್ಳುವುದು ಎಂಬ ಅರ್ಥದಲ್ಲಿ ಬಳಕೆಯಲ್ಲಿದೆ.ಕನ್ಯಾದಾತೃವು ವರನ ಮನೆಗೆ ಹೋಗಿ ತಾನು ಮಾಡಲಿರುವ ಮಗಳ ಮದುವೆಯ ಅಂಗವಾಗಿ "ಸೀಮಾಂತಪೂಜಾಂ ಕರಿಷ್ಯೇ" ಎಂದು ಸಂಕಲ್ಪಿಸಿ, ಗಣೇಶ-ವರುಣಾದಿಗಳನ್ನು ಪೂಜಿಸಿ, ವರನನ್ನು ಪಾದ ಪ್ರಕ್ಷಾಲನ, ವಸ್ತ್ರ ಪುಷ್ಪಗಂಧ ಆರತಿಗಳಿಂದ ಆದರಿಸಬೇಕು. ಆ ಬಳಿಕ ವರನು ವಾಹನವನ್ನೇರಿ ಸಕಲ ಘೋಷಗಳ ಪೂರ್ವಕ ವಧೂಗೃಹಕ್ಕೆ ತೆರಳಬೇಕು. ವರನ ಕಡೆಯವರು ಕನ್ಯೆಗೆ ವಸ್ತ್ರಾದಿಗಳನ್ನು ನೀಡಿ ಉಪಚರಿಸಬೇಕು. ವರನ ಕಡೆಯವರು ವಿವಾಹದ ಹಿಂದಿನ ದಿನ ಮಂಗಲಸ್ನಾನವನ್ನು ಪೂರೈಸಿ, ದೇವರಸಮಾರಾಧನೆ ಇತ್ಯಾದಿಗಳನ್ನು ಕ್ರಮಪ್ರಕಾರವಾಗಿ ನಡೆಸಿ, ಆ ಬಳಿಕ ವಸ್ತ್ರಾದಿಗಳಿಂದ ಅಲಂಕೃತರಾಗಿ ಒಲಗದೊಂದಿಗೆ ವಾಹನಾದಿಗಳಲ್ಲಿ ಯಥೋಚಿತವಾಗಿ ವಿವಾಹ ಮಂಟಪದತ್ತ ಸಾಗುವ ಕಾರ್ಯಕ್ರಮ ಇದಾಗಿದೆ. ವರನೊಂದಿಗೆ ಕಲಶ ಹಿಡಿದ ವರನ ತಂಗಿ, ಅಥವಾ ಆ ವರಸೆಯ ಒಬ್ಬ ಕನ್ಯೆಯೊಂದಿಗೆ

ಹೊರಡುವುದು. ಅಲಂಕೃತನಾದ ವರ ಹಾಗೂ ಕಲಶ ಹಿಡಿದವರ ಮೇಲೆ ಐದೆಯರು ಅಕ್ಷತೆಕಾಳಿನಿಂದ ಕುಂಭೋದಕದ ಪ್ರೋಕ್ಷಣೆ ನಡೆಸುವರು. ಅರಿಶಿನ-ಕುಂಕುಮದ ನೀರಿನಿಂದ ವೀಳ್ಯ ತೆಗೆಯುವರು, ಹಾಗೆ ಹೊರಡುವ ಮುನ್ನ ಮನೆಯಲ್ಲಿನ ದೇವರಿಗೂ ಗುರುಹಿರಿಯರಿಗೂ ನಮಸ್ಕರಿಸಿ, ಅವರಿಂದ ಆಶೀರ್ವಾದ ಸ್ವೀಕರಿಸಬೇಕು. ಬಾಸಿಂಗವನ್ನು ಧರಿಸುವುದು ವರನಿಗೆ ವಿಹಿತ. ಮಂಗಲಾಷ್ಟಕ, ಶಕುಂತದ ಸೂಕ್ತವನ್ನು ಪುರೋಹಿತರ ನೇತೃತ್ವದಲ್ಲಿ ವಿಪ್ರವರ್ಗ ನಡೆಸಿಕೊಡುವುದು. ಕನ್ನಡಿ, ಹೂಮಾಲೆ, ಕಲಶ, ದೀಪ, ಅಕ್ಷತೆ, ಧ್ವಜ ಹಾಗೂ ಆರಳುಗಳೊಂದಿಗೆ ಕಲಶ ಹಿಡಿದವಳು ತೆರಳಬೇಕು. ವಿಪ್ರವರ್ಗದ ವೇದಘೋಷದೊಂದಿಗೆ ಐದೆಯರ ಶೋಭನಪದ ಮೊದಲಾದವುಗಳ ಘೋಷವು ನಡೆದಿರುತ್ತದೆ. ಹೀಗೆ ಬಂದ ವರನ ಕಡೆಯವರನ್ನು ವಧುವಿನ ಕಡೆಯವರು ಇದಿರುಗೊಂಡು ಸ್ವಾಗತಿಸಿ, ಮಂಟಪಕ್ಕೆ ಕರೆದೊಯ್ಯುವ ಕಾರ್ಯ ಪೂರೈಸುವುದು.

ಹಾಗೆ ಆಗಮಿಸಿದ ವರನ ಕಡೆಯವರನ್ನು ಕನ್ಯೆಯ ಕಡೆಯವರು ಸ್ವಾಗತಿಸುವರು. ವರನು ಪೂರ್ವಾಭಿಮುಖವಾಗಿ ನಿಲ್ಲಬೇಕು. ಅವನಿಗೆ ಆರತಿ, ವೀಳ್ಯಗಳು ನಡೆಯುವವು. ವರನೊಂದಿಗೆ ವರನ ಕಡೆಯ ಹಿರಿಯರಿಗೂ ಯಥೋಚಿತವಾದ ಉಪಚಾರಗಳ ಪೂಜೆ ನಡೆಯುವುದು. ಪುರುಷರು ಪುರುಷರಿಗೂ, ಸ್ತ್ರೀಯರು ಸ್ತ್ರೀಯರಿಗೂ ಈ ರೀತಿ ಗೌರವವನ್ನು ಸಲ್ಲಿಸಿ, ಆರಳನ್ನು ಸುರಿಸಿ, ಸ್ವಾಗತವನ್ನು ಬಯಸುವರು.

## [೧]ವಿವಾಹಮಂಟಪ

ಮನೆಯ ಮುಂದೆ ಚಪ್ಪರ ಹೇಗೋ ಹಾಗೆ ಕಲ್ಯಾಣಮಂಟಪದ ಒಳಗೆ ವಿವಾಹ-ಮಂಟಪ. ಅದಕ್ಕೂ ನಾಲ್ಕು ಕಂಬಗಳು, ನಾಲ್ಕು ದ್ವಾರಗಳು, ಈಶಾನ್ಯಕ್ರಮದಲ್ಲಿ ಅವುಗಳಿಗೆ ಸುತ್ತಿದ ತೋರಣ, ಹೂಮಾಲೆ, ಇತ್ಯಾದಿಗಳು. ಪೂರ್ವಕ್ಕೆ ಮುಖಮಾಡಿ-ದಂತಹ ಮಂಟಪ, ಪೂರ್ವದಿಕ್ಕಿನ ಎರಡು ಕಂಬಗಳಿಗೂ ಬಾಳೇಕಂಬಗಳು, ಮಧ್ಯದಲ್ಲಿ ಯಜ್ಞವೇದಿ, ಮೊದಲಿಗೆ ಮಾತಾಪಿತೃಗಳು ಹಾಗೂ ಕನ್ಯೆಯೊಂದಿಗೆ ಪುರೋಹಿತರು ಇದರೊಳಗೆ ಪ್ರವೇಶಿಸಬೇಕು. ಪುಣ್ಯಾಹವಾಚನದ ನಂತರ ಅಂಕುರಾರ್ಪಣ,

---

೧. ಮಂಡಪನಿರ್ಮಾಣಾದ್ಯಂಗಜಾತಮಂಗಿನೋ ವಿವಾಹಾದೇರುಕ್ತನಕ್ಷತ್ರಾದೌ ಕಾರ್ಯಮ್ । 'ಕಂಡನದಲನಯವಾರಕಮಂಡಪಮೃದ್ವೇದಿವರ್ಣಕಾದ್ಯಖಿಲಮ್ । ತತ್ಸಂಬಂಧಿಗತಾಗತಮೃಕ್ಷೇ ವೈವಾಹಿಕೇ ಕುರ್ಯಾತ್' ಇತ್ಯುಕ್ತೇಃ । ಯವಾರಕಂ ಚಿಕಸಾ ಇತಿ ಭಾಷಾಯಾಮ್ । ಏವಂ ಹರಿದ್ರಾದಿ । ಅಂಗೇಷು ಚಂದ್ರಬಲಂ ನಾಪೇಕ್ಷ್ಯಮ್ । ವಿವಾಹಾಂಗಂ ವಿವಾಹಾತ್ ಪ್ರಾಕ್ ತೃತೀಯಷಷ್ಠನವಮದಿನೇಷು ನ ಕಾರ್ಯಮ್ । ತತ್ರ ಮಂಡಪಃ ಷೋಡಶದ್ವಾದಶದಶಾಷ್ಟಾನ್ಯ-ತಮಸಂಖ್ಯಹಸ್ತಶ್ಚತುರ್ದ್ವಾರಃ ಕಾರ್ಯಃ । ಮಂಡಪೇ ಚತುರ್ವರಕರಾಂ ಪಂಚವಧೂಕರಾಂ ವಾ ವೇದೀಂ ಚತುರಸ್ರಾಂ ಸೋಪಾನಯುತಾಂ ಪ್ರಾಕ್ಪ್ರವಣಾಂ ರಂಭಾಸ್ತಂಭಾದಿಭಿಃ ಸರ್ವತಃ ಸುಶೋಭಿತಾಂ ಗೃಹನಿರ್ಗಮಾದ್ವಾಮಭಾಗೇ ಕುರ್ಯಾತ್ ॥ -ಧರ್ಮಸಿಂಧು

ಕಂಕಣಬಂಧಗಳು ನಡೆಯಬೇಕು. ವಿವಾಹದ ಅಂಗವಾಗಿ ನಡೆಯುವ ಪುಣ್ಯಾಹವಾಚನ ಇಲ್ಲಿಯ [೧]ಮುಖ್ಯಕಾರ್ಯಕ್ರಮ[೨].

## ವಾಗ್ದಾನ

ಈ ಹಂತದಲ್ಲಿ ನಡೆಯುವ ಮುಂದಿನ ಕಾರ್ಯಕ್ರಮ ವಾಗ್ದಾನ. ಇಂದಿನ ದಿನಗಳಲ್ಲಿ ಈ ಕಾರ್ಯ ನಿಶ್ಚಯ ತಾಂಬೂಲಕಾರ್ಯದ ದಿನದಂದೇ ನಡೆದುಹೋಗಿರುತ್ತದೆ. ಆದರೂ ಸಾಂಕೇತಿಕವಾಗಿ ಇಂದು ನಡೆಯಬೇಕಾದದ್ದು ಅಗತ್ಯ. ಅಂದಿಗಿಂತ ಇಂದು ಹೆಚ್ಚಿನ ಸಂಖ್ಯೆಯಲ್ಲಿ ಗುರುಹಿರಿಯರು ಸೇರಿರುವ ಸಾಧ್ಯತೆ ಹೆಚ್ಚು. ಇಂತಹ ಸಮಯದಲ್ಲಿ ನಡೆಯುವ ಈ ಕಾರ್ಯ ಉಭಯಪಕ್ಷದವರಿಗೂ ಸಹ ಅದಕ್ಕೆ ಬದ್ಧರಾಗಿರಲು ಎಚ್ಚರಿಕೆಯ ಗಂಟೆಯಂತೆ ಕೆಲಸಮಾಡುವುದು. ಕನ್ಯೆ ಹಾಗೂ ವರರ ಮನೆತನದ ಹಿಂದಿನ ಸ್ತ್ರೀಪುರುಷರ ಹೆಸರು ಹಾಗೂ ಗೋತ್ರಪ್ರವರಗಳ ಉಚ್ಚಾರಣೆ ನಡೆಯಬೇಕು. ಆ ಮೂಲಕವಾಗಿ ಆ ವಂಶದ ಶುದ್ಧಿಯ ನಿರೂಪಣೆಯೂ ಆದಂತೆ ಆಗುವುದು. ಇಂದ್ರಪತ್ನಿಯಾದ ಶಚಿಯನ್ನು ಈ ಪ್ರಸಂಗದಲ್ಲಿ ಕನ್ಯೆಯು ಪೂಜಿಸುವ ಸಂಪ್ರದಾಯವಿದೆ:

> ದೇವೀಂದ್ರಾಣಿ ನಮಸ್ತುಭ್ಯಂ ದೇವೇಂದ್ರಪ್ರಿಯಭಾಮಿನೀ ।
> ವಿವಾಹಭಾಗ್ಯಮಾರೋಗ್ಯಂ ಪುತ್ರಲಾಭಂ ಚ ದೇಹಿ ಮೇ ॥

ಆ ಬಳಿಕ ಸುಮುಹೂರ್ತೇ ದಾಸ್ಯೇ ವಾಚಾ ಸಂಪ್ರದದೇ ಎಂಬುದಾಗಿ ಕನ್ಯಾಪಿತೃವು ಜೋರಾಗಿ ಘೋಷಿಸಬೇಕು. ವರನ ಕಡೆಯವರು ಪ್ರತಿಯಾಗಿ ಆ ದಾನವನ್ನು ತಾವು ಸ್ವೀಕರಿಸುವ ಸಮ್ಮತಿಯನ್ನು ಸೂಚಿಸಬೇಕು.

---

೧. ಮಂಟಪಸ್ಥಾಪನೆಯ ಬಳಿಕ ಸಮದಿವಸಗಳಲ್ಲಿ ಅಥವಾ ೫ ಅಥವಾ ೭ನೆಯ ದಿನದಂದು ಮಂಟಪದೇವತೆಗಳ ಉತ್ಥಾಪನೆಗೆ ಪ್ರಶಸ್ತ. ೬ನೆಯ ದಿನ ಹಾಗೂ ವಿಷಮದಿನಗಳಂದು ವಿಹಿತವಲ್ಲ:
ತಚ್ಚ ಸ್ಥಾಪನದಿನಾತ್ಸಮದಿವಸೇ ಪಂಚಮಸಪ್ತಮದಿನಯೋಶ್ಚ ಶುಭಮ್ । ಷಷ್ಠದಿನೇ ವಿಷಮದಿನೇ ಚಾಶುಭಮ್ ॥ -ಧರ್ಮಸಿಂಧು

೨. ಮಂಟಪನಿರ್ಮಾಣದ ಬಳಿಕ ನಾಂದೀಶ್ರಾದ್ಧಪೂರೈಸಿದ ಮೇಲೆ ಅದರ ವಿಸರ್ಜನೆಯಾಗುವವರೆಗೂ ದರ್ಶಶ್ರಾದ್ಧ, ಕ್ಷಯಶ್ರಾದ್ಧ, ತಣ್ಣೀರುಸ್ನಾನ, ನಿತ್ಯಶ್ರಾದ್ಧ, ಬ್ರಹ್ಮಯಜ್ಞ, ನದಿಯನ್ನು ದಾಟುವುದು, ಗಡಿದಾಟುವುದು, ಏಕಾದಶೀ ಹೊರತಾದ ಉಪವಾಸವ್ರತ, ಶ್ರಾದ್ಧಭೋಜನಗಳು ನಿಷಿದ್ಧ.

> ನಾಂದೀಶ್ರಾದ್ಧೇ ಕೃತೇ ಪಶ್ಚಾದ್ಯಾವನ್ಮಾತೃವಿಸರ್ಜನಮ್ ।
> ದರ್ಶಶ್ರಾದ್ಧಂ ಕ್ಷಯಶ್ರಾದ್ಧಂ ಸ್ನಾನಂ ಶೀತೋದಕೇನ ಚ ॥
> ಅಪಸವ್ಯಂ ಸ್ವಧಾಕಾರಂ ನಿತ್ಯಶ್ರಾದ್ಧಂ ತಥೈವ ಚ ।
> ಬ್ರಹ್ಮಯಜ್ಞಂ ಚಾಧ್ಯಯನಂ ನದೀಸೀಮಾದಿಲಂಘನಮ್ ॥
> ಉಪವಾಸವ್ರತಂ ಚೈವ ಶ್ರಾದ್ಧಭೋಜನಮೇವ ಚ ।
> ನೈವ ಕುರ್ಯುಃ ಸಪಿಂಡಾಶ್ಚ ಮಂಡಪೋದ್ವಾಸನಾವಧಿ ॥ -ಧರ್ಮಸಿಂಧು

# [1]ನಾಂದೀ ಸ್ಥಾಪನೆ

ನಾಂದೀ ಸ್ಥಾಪನೆಯು ವಿವಾಹದ ಪ್ರಮುಖ ಅಂಗಗಳಲ್ಲೊಂದು. ಮನೆಯಲ್ಲಿ ಗುರುಹಿರಿಯರು ಹೇಗೋ ಹಾಗೆ ಗತಿಸಿದ ಪಿತೃವರ್ಗದವರನ್ನು ಅವರಿಗೆ ಅಧಿಪತಿಗಳೆನ್ನಿಸುವ ಪಿತೃದೇವತೆಗಳನ್ನು ಸ್ಮರಿಸಿಕೊಳ್ಳುವ ಪುಣ್ಯಕಾರ್ಯ ಇದಾಗಿದೆ. ಸತ್ಯ, ವಸು ಎಂಬ ವಿಶ್ವೇದೇವತೆಗಳನ್ನು ಇತರ ನಾಲ್ಕು ವರ್ಗದ ಪಿತೃಗಳನ್ನು ಪೂಜಿಸುವ ಕಾರ್ಯ ಇದು. **ನಂದಂತಿ ಅನಯಾ ಇತಿ ನಾಂದೀ,** ಎಂಬ ನಿರ್ವಚನದಂತೆ ಇದು ಪಿತೃಗಳಿಗೆ ಸಂತೋಷ ನೀಡುವಂತಹ ಕಾರ್ಯ. ಮುಖ್ಯವಾಗಿ ಅಕ್ಕಿ, ತೆಂಗಿನಕಾಯಿ ಹಾಗೂ ತರಕಾರಿಗಳ ಮೂಲಕ ಪಿತೃಗಳನ್ನು ಈ ಕಾರ್ಯದಲ್ಲಿ ಪ್ರಾರ್ಥಿಸಬೇಕು. ಇಲ್ಲಿ ಆರಾಧನೆಗೆ ವಿಹಿತರಾದವರು ಗತಿಸಿದ ಪಿತೃಗಳು ಮಾತ್ರ. ಜೀವಂತ ಇರುವವರು ಅಲ್ಲ. ನಾಂದೀ ಸ್ಥಾಪನೆಯ ಬಳಿಕ ವೃದ್ಧಿ-ಸೂತಕಾದಿಗಳು ಒದಗಿದರೆ ಅವುಗಳ ಆಚರಣೆ ಅಗತ್ಯವಿರುವುದಿಲ್ಲ. ಈ ಕಾರಣದಿಂದ ಶುಭಕಾರ್ಯಕ್ಕೆ ವಿಘ್ನಬಾರದಿರಲೆಂದು ಕೆಲವು ದಿನಗಳ ಮುಂಚಿತವಾಗಿಯೇ ನಾಂದೀಸ್ಥಾಪನೆಯನ್ನು ಮಾಡುವುದುಂಟು. ವಿವಾಹದ ಮುನ್ನ ಹತ್ತುದಿನದಿಂದಲೇ ಇದರ ಸ್ಥಾಪನೆಗೆ ಅವಕಾಶವಿದೆ. ಅನುಕೂಲಕ್ಕೆ ತಕ್ಕಂತೆ ಕಡಿಮೆ ಅಂತರದಲ್ಲೂ ಮಾಡಬಹುದು. ಅನಿವಾರ್ಯವಿದ್ದಲ್ಲಿ ವಿವಾಹದ ದಿನ ಪ್ರಾತಃಕಾಲದಲ್ಲಿ ಸಹ ನಾಂದೀಸ್ಥಾಪನೆಗೆ ಅವಕಾಶವಿದೆ.

# ಗೌರೀಹರಪೂಜಾ

ಕನ್ಯೆಯು ಧಾರೆಯ ಮಂಟಪವನ್ನು ಏರುವ ಮುನ್ನ ಗೌರೀಪೂಜೆಯು ವಿಹಿತವಾಗಿದೆ. ಗೌರಿಯು ದಾಂಪತ್ಯದ ಅಧಿದೇವತೆ. 'ದಾಂಪತ್ಯಾರ್ಥ ಉಮಾಂ ಸತೀಂ' ಎಂದು ಶ್ರೀಮದ್ಭಾಗವತಮಹಾಪುರಾಣದಲ್ಲಿ ನಿರೂಪಿತವಾಗಿದೆ. ಶಿವ-ಪಾರ್ವತಿಯರ ಪೂಜೆ-ಯಿಂದ ಸುದೀರ್ಘದಾಂಪತ್ಯಯೋಗವು ಲಭಿಸುವುದು ಎಂಬ ವಿಶೇಷಾಂಶ ಬ್ರಹ್ಮಸೂತ್ರ-ಭಾಷ್ಯದಲ್ಲಿ ಬಂದಿದೆ :

> ಉಮಾ ವೈ ವಾಕ್ ಸಮುದ್ದಿಷ್ಟಾ ಮನೋ ರುದ್ರ ಉದಾಹೃತಃ ।
> ತದೇತನ್ಮಿಥುನಂ ಜ್ಞಾತ್ವಾ ನ ದಾಂಪತ್ಯಾದ್ವಿಹೀಯತೇ ॥

ಪಾರ್ವತಿಯು ವಾಗಭಿಮಾನಿನಿಯಾದರೆ, ರುದ್ರದೇವರು ಮನೋಭಿಮಾನಿ; ಅವರಿಬ್ಬರೂ ಸದಾ ಜೊತೆ ಇರುವವರು. ಅವರನ್ನು ಹಾಗೆ ತಿಳಿದು ಆರಾಧಿಸುವುದು

---

೧. ಕನ್ಯಾವರೌ ಚಕ್ರತುರರ್ಥಕಾಮಾವನ್ಯೇದ್ಯುರರ್ಚಾಂ ಪಿತೃದೇವತಾನಾಮ್ ।
ಮನ್ಯೇ ಕಿಲಾನ್ಯೋನ್ಯಮಮೂ ತದಗ್ರೇ ಚೇರ್ಣೋತ್ಸವೌ ಸಂಪ್ರತಿ ಜಾತಲಜ್ಜೌ ॥
-ರುಗ್ಮಿಣೀಶವಿಜಯ(೧೫/೫೨)

[೧]ಸುದೀರ್ಘದಾಂಪತ್ಯಕ್ಕೆ ಅತ್ಯಗತ್ಯ. ನಮ್ಮ ವೈದಿಕಸಂಸ್ಕೃತಿಯ ವಿವಾಹಗಳು ಸುದೀರ್ಘ-ಕಾಲ ಬಾಳಲು ಜೀವನಪೂರ್ತಿ ಉಳಿಯಲು ಈ ಗೌರೀಪೂಜೆಯು ಅತ್ಯಂತ ಗಮನಾರ್ಹವಾದ ಕಾರ್ಯ. ಸ್ವತಃ ಮಹಾಲಕ್ಷ್ಮಿಯಾದ ರುಗ್ಮಿಣೀದೇವಿಯು ತನಗೆ ಅಗತ್ಯವಿಲ್ಲವಾದರೂ ಇತರರಿಗೆ ಇದರ ಮಹತ್ತ್ವವನ್ನು ತಿಳಿಸಲೆಂದು ಸ್ವತಃ ತಾನು ಪರಮ ಮಂಗಲದೇವತೆಯಾದರೂ ಲೋಕಶಿಕ್ಷಣಕ್ಕೆಂದು ಹಾಗೆ ದುರ್ಗಾಪೂಜೆಗೆಂದು ತೆರಳಿದ್ದ ವಿವರ [೨]ಶ್ರೀಮದ್ಭಾಗವತದಲ್ಲಿ ಬಂದಿದೆ. ಶ್ರೀಕೃಷ್ಣನು ಕೈಲಾಸಯಾತ್ರೆಯನ್ನು ಮಾಡುವ ಮೂಲಕ ಮನೋನಿಯಾಮಕತ್ವೇನ ಶಿವನ ಆರಾಧನೆಯು ಇಂದ್ರಾದಿ ಸಕಲರಿಗೂ ವಿಹಿತವಾಗಿದೆ ಎಂಬುದನ್ನು ತಿಳಿಸಿದಂತೆ ರುಗ್ಮಿಣೀದೇವಿಯು ಗೌರೀಪೂಜೆಯು ಇಂದ್ರಾದಿ ಸಕಲರಿಗೂ ವಿಹಿತವಾದ ಅಗತ್ಯ ಕರ್ತವ್ಯ ಎಂಬುದನ್ನು ತಿಳಿಸಿರುವರು ಎಂದು ತಿಳಿಯಬೇಕು. ಇದಕ್ಕೆ ವಿಹಿತವಾದ ಮಂತ್ರಗಳು ಹೀಗಿವೆ :

> ಸಿಂಹಾಸನಸ್ಥಾಂ ದೇವೇಶೀಂ ಸರ್ವಾಲಂಕಾರಸಂಯುತಾಮ್ ।
> ಪೀತಾಂಬರಧರಂ ದೇವಂ ಚಂದ್ರಾರ್ಧಶೇಖರಮ್ ॥
> ಕರೇಣಾಥ ಸುಧಾಪೂರ್ಣಂ ಕಲಶಂ ದಕ್ಷಿಣೇನ ತು ।
> ವರದಂ ಚಾಭಯಂ ವಾಮೇನಾಶ್ಲಿಷ್ಯ ಚ ತನುಪ್ರಿಯಾಮ್ ।
> ಗೌರೀಹರೌ ಮಹೇಶಾನೌ ಸರ್ವಮಂಗಲದಾಯಕೌ ॥
> ಪೂಜಾಂ ಗೃಹ್ಣೀತಾಂ ದೇವೇಶೌ ಮಂಗಲಂ ಕುರುತಾಂ ಸದಾ ।
> ಗೌರೀಹರ ಮಹೇಶಾನ ಸರ್ವಮಂಗಲದಾಯಕ ।

---

೧. ಗೌರೀಪೂಜೆಯಂತಹ ಮಂಗಲಕಾರ್ಯದಿಂದಾಗಿ ನಮ್ಮ ವೈದಿಕ ಸಂಸ್ಕೃತಿಯ ವಿವಾಹಗಳು ಸುದೀರ್ಘ ದಾಂಪತ್ಯದ ಫಲಶ್ರುತಿಯನ್ನು ಕಾಣುವಂತಾಗಿವೆ. ಪಾಶ್ಚಾತ್ಯರಲ್ಲಿ ಇದು ಅಸಂಭಾವಿತ-ವಾದ್ದರಿಂದ ಅವರ ವಿವಾಹಗಳು ಅಲ್ಪಕಾಲಾವಧಿಯವು ಮಾತ್ರವಲ್ಲದೆ, ಸಂಖ್ಯೆಯಲ್ಲಿ ಸಾಮಾನ್ಯವಾಗಿಯೇ ಒಂದಕ್ಕಿಂತ ಹೆಚ್ಚು ಎಂಬಂತಾಗಿವೆ. ಇತ್ತೀಚೆಗೆ ನಮ್ಮಲ್ಲಿಯೂ ಸಹ ಇಂತಹ ವಿವಾಹಗಳು ವಿರಳವೆನ್ನಿಸುವತ್ತ ಸಾಗಿದ್ದು ಅದರ ಫಲಶ್ರುತಿ ಎಂಬಂತೆ ವಿವಾಹದ ಬಳಿಕದ ಕೆಲವೇ ವರ್ಷಗಳಲ್ಲಿ ಕೆಲವೊಮ್ಮೆ ಕೆಲವು ತಿಂಗಳುಗಳಲ್ಲಿ ಅವು ವಿಚ್ಛೇದನದಂತಹ ದುರಂತವನ್ನು ಕಾಣುವಂತಾಗಿದೆ.

೨. ಕನ್ಯಾ ಚಾಂತಃಪುರಾತ್ ಪ್ರಾಗಾದ್ಭಟೈರ್ಗುಪ್ತಾಽಂಬಿಕಾಲಯಮ್ ।
ಪದ್ಭ್ಯಾಂ ವಿನಿರ್ಯಯೌ ದ್ರಷ್ಟುಂ ಭವಾನ್ಯಾಃ ಪಾದಪಂಕಜಮ್ ।
ಸಾ ಚಾನುಧ್ಯಾಯತೀ ಸಮ್ಯಕ್ ಮುಕುಂದಚರಣಾಂಬುಜಮ್ ॥ -ಭಾ.(೧೦/೫೮/೪೦,೪೧)
ಚಲತ್ಪತಾಕೋಜ್ಜ್ವಲಚಾಮರೌಘಾಂ ಪರಿಸ್ಫುರಚ್ಛತ್ರಸಹಸ್ರಶೋಭಾಮ್ ।
ವಿಚಿತ್ರತೂರ್ಯಧ್ವನಿಪೂರಿತಾಶಾಮಥೋ ವಿತೇನುಃ ಕುಲದೇವಿಯಾತ್ರಾಮ್ ॥
ಸ್ವಜನಕಗೃಹದೇವಂ ಪೌತ್ರಮಾರಾಧ್ಯ ಭೈಷ್ಮೀ ನಿಜಮಥ ಗೃಹದೇವಂ ಮಾಧವಂ ದ್ರಷ್ಟುಕಾಮಾ ।
ಅಪಿ ಪುರಮಭಿಯಾಂತೀ ಸಾ ರಥಂ ನಾರುರೋಹ ಪ್ರಿಯಚರಣಸಕಾಶಂ ತೇವನೇನ ವ್ರಜಂತೀ॥
-ರುಗ್ಮಿಣೀಶವಿಜಯ(೧೪/೬೩,೬೪)

ಪೂಜಾಂ ಗೃಹಾಣ ದೇವೇಶ ಸರ್ವದಾ ಮಂಗಲಂ ಕುರು ॥
ಸರ್ವಮಂಗಲಮಾಂಗಲ್ಯೇ ಶಿವೇ ಸರ್ವಾರ್ಥಸಾಧಕೇ ।
ಶರಣ್ಯೇ ತ್ರ್ಯಂಬಕೇ ದೇವಿ ನಾರಾಯಣಿ ನಮೋಸ್ತುತೇ ॥ -ಸಂಸ್ಕಾರಪದ್ಧತಿ

## ಕಾಶೀಯಾತ್ರೆ

ಕಾಶೀಯಾತ್ರೆಯು ವಿವಾಹ ವಿಧಿಯ ಒಂದು ಪ್ರಮುಖವಾದ ಅಂಗವಾಗಿದೆ. ವಿವಾಹದ ಹೆಚ್ಚು ಅಂಗಗಳು ಇಂದು ಲೋಪವಾಗಿದ್ದು ಉಳಿದುಕೊಂಡು ಬಂದಿರುವ ಕೆಲವಲ್ಲಿ ಈ ಕಾಶೀಯಾತ್ರೆಯು ಒಂದು. ಮೇಲ್ನೋಟಕ್ಕೆ ಪ್ರಯೋಗಗ್ರಂಥಗಳಲ್ಲಿ ಇದರ ಉಲ್ಲೇಖ ಕಂಡುಬರುವುದಿಲ್ಲ. ಆದರೆ ಸ್ನಾತಕವ್ರತವನ್ನು ಪೂರೈಸಿದವನು ತೀರ್ಥಯಾತ್ರೆ ಕೈಗೊಳ್ಳಬೇಕು ಎಂಬ ನಿಯಮಕ್ಕನುಗುಣವಾಗಿ ಇದು ವಿಹಿತ ಎಂಬುದಾಗಿಯೇ ತಿಳಿದುಬರುವುದು: ತೀರ್ಥಸೇವೀ ಮಿತಾಹಾರೀ (ವಸಿಷ್ಠಸ್ಮೃತಿ). ಶ್ರೀವಾದಿರಾಜ-ಸ್ವಾಮಿಗಳ [೧]ರುಗ್ಮಿಣೀಶವಿಜಯದಲ್ಲಿ ಶ್ರೀಕೃಷ್ಣನ ಕಾಶೀಯಾತ್ರೆಯ ಉಲ್ಲೇಖ

---

೧. ಅಥ ಸ್ನಾತಕಸಾಧರ್ಮ್ಯಂ ಸಂಪ್ರಾಪ್ಯ ಯದುನಂದನಃ ।
ಸ್ನಾತುಂ ಜಿಗಮಿಷುಸ್ತೀರ್ಥಂ ಪ್ರೀತ್ಯೇತ್ಥಂ ಪ್ರತ್ಯಷಿಧ್ಯತ ॥
ಪರಿಹೃತಭವಪಾಶ ಶ್ರೀಶ ಮಾ ಯಾಹಿ ಶೌರೇ ತ್ರಿಭುವನಪರಿಗೀತಂ ತೀರ್ಥಜಾತಂ ತ್ವಯೀಶೇ
ವ್ರಜತಿ ಸಕಲಮಾಸೀತ್ ಪೃಷ್ಠತಃ ಸ್ಪಷ್ಟಯುಷ್ಮಚ್ಚರಣವರಣಭೂಮ್ಯಾಂ ಕ್ವಾಸ್ತಿ ತೀರ್ಥಂ ತ್ವದಗ್ರೇ ॥
ಯರ್ಹೀಶ ತೇ ಸಕಲತೀರ್ಥನಿಷೇವಣೇಚ್ಛಾ ತರ್ಹಿ ತ್ವದೀಯಮುನಯಃ ಕಿಲ ತತ್ರ ತತ್ರ ।
ತ್ವಾಂ ಸ್ನಾಪಯಂತಿ ಜಲಮಧ್ಯಗತಂ ವಿವೇಕೈಃ ಕುರ್ವಂತಿ ತತ್ತವ ಕಿಮದ್ಯ ವಿಧೇಯಮಸ್ತಿ ॥
ಯತ್ರ ತ್ವದೀಯಗುಣಕೀರ್ತನನರ್ತನಾದಿ ತತ್ರೈವ ತೀರ್ಥನಿಕರಾಃ ಕಿಲ ಸಂವಸಂತಿ ।
ಯತ್ರಾರ್ಪಯಂತಿ ಸುಜನಾಃ ಸುಕೃತಂ ಸಮಸ್ತಂ ತಸ್ಯೇಶ ತೇ ಸಕಲಮಾಕಲಯಾಮಿ ಪೂರ್ಣಮ್ ॥
ಗಂಗಾದಿತೀರ್ಥನಿಕರಾಃ ಕಿಲ ಯತ್ತ್ವದಾಬ್ಜಸಂಗಾತ್ ಪುನಂತಿ ಭುವಿ ತಾನಪಿ ಪಾವಯಂತಿ ।
ಅಂಗಾನುಷಂಗಕರಣಾದ್ಭವದಂತರಂಗಾಃ ಕಿಂ ಗಾಹನೇನ ತವ ತೀರ್ಥಚಯೇಷು ತಸ್ಯ ॥
ಯದ್ರೋಮಕೂಪಮಪಿ ಪೂರಯಿತುಂ ನ ಶೇಕು-
ರ್ಬ್ರಹ್ಮಾಂಡಖರ್ಪರಶತಾಯುತಕೋಟಯೋಽಪಿ ।
ಗಂಗಾಽಪಿ ಯಚ್ಚರಣಸನ್ನಖಸೇಕಮಾತ್ರಂ
ತತ್ ಕ್ವಾಸ್ತಿ ಮಜ್ಜನವಿಧೌ ತವ ತೀರ್ಥಮುರ್ವ್ಯಾಮ್ ॥
ಭ್ರೂಕಾಶೀಂ ವರನಾಭಿಮಾನಸವತೀಂ ಹಾರಾವಲೀಜಾಹ್ನವೀಂ
ನೀವೀದಿವ್ಯಸರಸ್ವತೀಂ ಪ್ರವಿಲಸದ್ರೋಮಾಲಿಸೂರ್ಯಾತ್ಮಜಾಮ್ ।
ಕಾಂಚೀಶೋಭಿಕಟಿಂ ಕುಚೋಚ್ಚಬದರೀಂ ನೇತ್ರಾಂತಯುಗ್ಮಪ್ರಭಾ-
ಕಾವೇರ್ಯಂತರಗಾಸ್ಯಚಂದ್ರಸರಸೀಂ ಯಾತ್ರಾಽಸ್ತು ಭೈಷ್ಮೀಂ ಪ್ರತಿ ॥
ಕ್ಷೇತ್ರೇ ತ್ವಮಸ್ಮಿನ್ ಪರಿಗೃಹ್ಯ ಭೈಷ್ಮ್ಯಾಃ ಪಾಣಿಂ ಜಗತ್ಯಪ್ರತಿಮಂ ತದೇತತ್ ।
ತೀರ್ಥಂ ವಿಧೇಹೀಶ ನ ಕೃಷ್ಣ ಯಾತ್ರಾಂ ವ್ಯಾಪಸ್ಯ ತೇ ಸಂಪ್ರತಿ ನಂದಯಾಮಃ ॥
-ರುಗ್ಮಿಣೀಶವಿಜಯ(೧೫/೫೩-೬೦)

ಬಂದಿರುವುದು ಇದು ಮೂಲತಃ ವಿಹಿತವಾಗಿದ್ದ ವಿವಾಹದ ಒಂದು ಅಂಗ ಎಂಬುದಕ್ಕೆ ಆಧಾರವಾಗುವುದು. ಅಲ್ಲಿಯ ಉಲ್ಲೇಖದಿಂದ ತಿಳಿಯುವಂತೆ ಕಾಶೀಯಾತ್ರೆಯು ಸಕಲ ಪುಣ್ಯತೀರ್ಥಕ್ಷೇತ್ರಗಳ ಯಾತ್ರೆಗೆ ಉಪಲಕ್ಷಕ ಎಂದು ತಿಳಿಯುವುದು. ಆ ವರೆಗೆ ಯಥಾವತ್ತಾಗಿ ಅಧ್ಯಯನ ಮಾಡಿದ ವ್ಯಕ್ತಿ ದೇಶಸುತ್ತುವ ಮೂಲಕ ತನ್ನ ಅನುಭವವನ್ನು ವಿಶಾಲಗೊಳಿಸುವ ಪರಿಕಲ್ಪನೆ ಇದಾಗಿದೆ ಎನ್ನಬಹುದು. ಒಂದರ್ಥದಲ್ಲಿ ಇದು ಶಾಸ್ತ್ರಾರ್ಥಯುಕ್ತಾನುಭವಸ್ತು ಪ್ರಮಾಣಂ ತೂತ್ತಮಂ ಮತಮ್ ಎಂಬ ಮಾತಿಗೆ ಪೂರಕವಾಗುವ ಕಾರ್ಯದಂತಿದೆ.ಲೌಕಿಕವಾಗಿ ವಿದ್ಯಾಭ್ಯಾಸ ಪೂರೈಸಿದ ವರ ಉನ್ನತ ವಿದ್ಯಾಭ್ಯಾಸಕ್ಕಾಗಿ ಕಾಶೀಯಾತ್ರೆ ಕೈಗೊಳ್ಳುವುದು ವಿಹಿತ. ಕಾಶಿಯು ವೇದಕಾಲದಿಂದಲೂ ವಿದ್ಯೆ ಹಾಗೂ ರಾಜ್ಯಕ್ಕೆ ಹೆಸರುವಾಸಿಯಾಗಿರುವ ಅಪೂರ್ವಕ್ಷೇತ್ರ. ಬಿಂದುಮಾಧವ-ನಿಂದಾಗಿ ವೈಷ್ಣವಕ್ಷೇತ್ರವಾದರೆ ವಿಶ್ವನಾಥನಿಂದಾಗಿ ಶೈವಕ್ಷೇತ್ರವೂ ಆಗಿದೆ. ಮೂಲತಃ ಶಿವನೂ ವೈಷ್ಣವನೇ ಆದ್ದರಿಂದ ಇದು ಮಹಾವೈಷ್ಣವಕ್ಷೇತ್ರಗಳಲ್ಲೊಂದು ಎಂಬುದು [೧] ಶಾಸ್ತ್ರಗಳ ನಿರೂಪಣೆ. ಅಲ್ಲಿ ಉತ್ತರಾಭಿಮುಖವಾಗಿ ಹರಿಯುವ ಗಂಗೆಯಂತೂ ವಿಷ್ಣುಪಾದೋದಕವಾಗಿ ವಿಶ್ವದ ಪರಮಪಾವನ ತೀರ್ಥವೆನ್ನಿಸಿದೆ. ಭೀಮಸೇನ ಹಾಗೂ ಕಾಳಿಯರ ವಿವಾಹ ನಡೆದದ್ದು ಈ ಕ್ಷೇತ್ರದಲ್ಲಿ ಎಂಬುದಾಗಿ ಮಹಾಭಾರತತಾತ್ಪರ್ಯ-ನಿರ್ಣಯದಲ್ಲಿ ಬಂದಿದೆ. ತನ್ನಿಂದ ಪರಾಜಿತನಾದ ಜರಾಸಂಧನನ್ನು ಭೀಮಸೇನ ಇಲ್ಲಿಯ ಗಂಗೆಯಲ್ಲಿ ಎಸೆಯುವ ಮೂಲಕ ಅವರ ವ್ರತಭಂಗವನ್ನು ಮಾಡಿದ ಉಲ್ಲೇಖವು ಬಂದಿದೆ. ಭೀಮಸೇನ ಸಕಲ ಶಾಸ್ತ್ರಗಳ ಹಿನ್ನೆಲೆಯಲ್ಲಿ ಹರಿಸರ್ವೋತ್ತಮತ್ವವನ್ನು ಸಾಧಿಸಿ, ಜರಾಸಂಧಾದಿಗಳನ್ನು ವಾಗ್ಯುದ್ಧದಲ್ಲಿ ಪರಾಭವಗೊಳಿಸಿದ ವಿವರವೂ ಅಲ್ಲಿದೆ. ಅಂತೂ ಕಾಶಿಯು ಅತ್ಯಂತ ಪ್ರಾಚೀನಕಾಲದಿಂದಲೂ ವಿದ್ಯೆಗೆ ಹೆಸರಾದ ಕ್ಷೇತ್ರ. ಉನ್ನತ ವಿದ್ಯಾಭ್ಯಾಸಕ್ಕಾಗಿ ಅಲ್ಲಿಗೆ ತೆರಳುವುದು ಪ್ರತಿಯೊಬ್ಬ ಸ್ನಾತಕನ ಗುರಿ ಎಂಬುದು ಈ ಕಾಶಿಯಾತ್ರೆಯ ಒಂದು ಹಿನ್ನೆಲೆ. ಹಾಗೆ ತೆರಳುವ ವಿದ್ಯಾಪ್ರಿಯನಾದ ವರನಿಗೆ ಸಹಜವಾಗಿಯೇ ಕನ್ಯಾಪಿತೃ ತನ್ನ ಮಗಳನ್ನು ಧಾರೆಯೆರೆದು ಸಂತೃಪ್ತಿ ಪಡೆಯುವ ಕಾರ್ಯದಲ್ಲಿ ತೊಡಗುವನು. ತನ್ನ ಮಗಳನ್ನು ವಿವಾಹವಾಗಿ ಧರ್ಮಕಾರ್ಯಗಳಲ್ಲಿ ಅವಳ ನೆರವನ್ನು ಪಡೆಯುವ ಮೂಲಕ ಹೆಚ್ಚಿನ ಸಾಧನೆ ಮಾಡಿಕೊಳ್ಳಲು ಕನ್ಯಾಪಿತೃವು ವರನನ್ನು ಪ್ರಾರ್ಥಿಸಿ, ಕಾಶೀಯಾತ್ರೆಯ ಆವರ ಮನಸ್ಸನ್ನು ವಿವಾಹ ಮಂಟಪದತ್ತ ತಿರುಗಿಸುವುದು ಇಲ್ಲಿಯ ಮುಖ್ಯ ಉದ್ದೇಶ. ಇಂದು ವಿದೇಶಯಾತ್ರೆಯನ್ನು ಕೈಗೊಳ್ಳುವ

---

೧. ಮಾಲೌ ಯಚ್ಚರಣಾಂಬು ಫಾಲಫಲಕೇ ಯಸ್ಯಾಂಘ್ರಿರೇಣುಃ ಕಥಾ
ಕರ್ಣೇ ವಾಚಿ ಯದೀಯನಾಮ ಹೃದಿ ಯದ್ರೂಪಂ ಯದಾಸ್ವಾದಿತಮ್ ।
ಕುಕ್ಷೌ ಯತ್ತಪಸೇಽಪಟಂ ಕಟಿತಟಂ ವ್ಯಾಘ್ರಾಜಿನೇ ಸಂಸ್ಥಿತಿಃ
ಪಾದೌ ಯತ್ಪುರಚಾರಿಣೌ ಸ ಹಿ ಸದಾ ತತ್ಕಿಂಕರಃ ಶಂಕರಃ ॥ -ತೀರ್ಥಪ್ರಬಂಧ (ಉ.ಪ್ರ.೨೬)

ವರನ ಬಗ್ಗೆ ತಮ್ಮ ಮಗಳನ್ನು ನೀಡಲು ಕಾತರಿಸುವ ಕನ್ಯಾಪಿತೃಗಳ ಮನೋಭಾವವನ್ನು ಅರಿತವರಿಗೆ ಈ ಪ್ರಸಂಗದ ಔಚಿತ್ಯ ಅರ್ಥವಾಗುವುದು ಸಹಜ.

ವಿವಾಹದ ದಿನ ಮುಹೂರ್ತ ಕಾಲಕ್ಕೆಂದು ಮಂಟಪಕ್ಕೆ ವರನನ್ನು ಕರೆತರಲು ಕನ್ಯೆಯ ಕಡೆಯವರು ಕನ್ಯೆಯ ತಂದೆ-ತಾಯಿಗಳನ್ನು ಮುಂದಿರಿಸಿಕೊಂಡು ತೆರಳಬೇಕು. ಅರಳನ್ನು ಸುರಿಸಿ, ವರನ ಕಡೆಯ ಹಿರಿಯರಾದ ಸ್ತ್ರೀಪುರುಷರನ್ನು ಕನ್ಯೆಯ ಕಡೆಯ ಸ್ತ್ರೀಪುರುಷರು ಗಂಧೋದಕ ಮೊದಲಾದವುಗಳಿಂದ ಸ್ವಾಗತಿಸಬೇಕು. ಕನ್ಯಾಪಿತೃವು ವರನನ್ನು ಪೀಠದ ಮೇಲೆ ಕುಳ್ಳಿರಿಸಿ, ತನ್ನ ಧರ್ಮಪತ್ನಿ ಸುರಿಸುವ ನೀರಿನಿಂದ ಪಾದತೊಳೆದು ಆದರಿಸಬೇಕು. ವರನ ತಲೆಯ ಮೇಲೆ ಶ್ವೇತಚ್ಛತ್ರವನ್ನು ಹಿಡಿಯಬೇಕು. ಪಾದರಕ್ಷೆ, ದಂಡ ಮೊದಲಾದವುಗಳನ್ನು ಸಹ ನೀಡಬೇಕು; ಆ ಸಮಯದಲ್ಲಿ ವರನಲ್ಲಿ ಲಕ್ಷ್ಮೀಪತಿಯಾದ ಶ್ರೀಹರಿಯ ಸನ್ನಿಧಾನವನ್ನು ಚಿಂತಿಸಬೇಕು(ಕನ್ಯಾರ್ಥೀ ಹರಿವತ್ಪೂಜ್ಯಃ). ಇಡೀ ಜೀವನದಲ್ಲಿ ವರನ ಪಾದವನ್ನು ಕನ್ಯಾಪಿತೃವು ತೊಳೆಯುವ ಕೆಲವು ವಿಶಿಷ್ಟ ಪ್ರಸಂಗಗಳಲ್ಲಿ ಇದು ಒಂದಾಗಿದೆ. ಕಾಶೀಯಾತ್ರೆಗೆಂದು ತೆರಳುವ ವರನನ್ನು ಹೀಗೆ ಗೌರವಿಸಿ, ಕನ್ಯಾರ್ಥಿ-ಯಾದ ಅವನಿಗೆ ಸ್ವಾಗತವನ್ನು ಬಯಸಿ ಆದರಿಸಬೇಕು.

## ಮಂಗಲವಾದ್ಯಘೋಷ

ಎಲ್ಲವಿಧವಾದ ಮಂಗಲಕಾರ್ಯಗಳಲ್ಲೂ ವಾದ್ಯಘೋಷವು ವಿಹಿತವಾಗಿದೆ. ಮಂಗಲ ವಾದ್ಯಗಳು ದೈವೀಶಕ್ತಿಗಳ ಆಗಮನಕ್ಕೂ ಆಸುರೀಶಕ್ತಿಗಳ ನಿರ್ಗಮನಕ್ಕೂ ಸಾಧಕವಾದ ಅಗತ್ಯ ಅಂಗ. ಇದು ಪ್ರತಿನಿತ್ಯದ ದೇವಪೂಜಾ ಕಾಲದಲ್ಲಿ ಮಾಡುವ ಘಂಟಾವಾದನ [೧]ಮಂತ್ರದಿಂದ ಸ್ಪಷ್ಟಪಡುವ ವಿಚಾರ. ಶ್ರೀಕೃಷ್ಣನ ನೇತೃತ್ವದ ಶಂಖನಾದ ರೂಪವಾದ ಮಂಗಲಘೋಷದಿಂದ ದುಷ್ಟತೆಯ ಸಂಕೇತರಾದ ಕೌರವರ ಹೃದಯಗಳು ಸೀಳಿಹೋದವು ಎಂಬ ಭಗವದ್ಗೀತೆಯ ಮಾತಿನಲ್ಲೂ ಈ ಮಂಗಲಘೋಷದ ಮಹತ್ವಸೂಚಿತವಾಗಿದೆ[೨]. ವಿವಾಹದಂತಹ ಮಂಗಲಕಾರ್ಯದಲ್ಲಿ ಸಹಜವಾಗಿಯೇ ಮಂಗಲವಾದ್ಯಗಳಿಗೆ ವಿಶೇಷವಾದ ಮಹತ್ವವಿದೆ. ಆದರೆ ಇಂದಿನ ದಿನಗಳಲ್ಲಿ ಇದೂ ಸಹ ವಿಕೃತರೂಪ ಪಡೆದಿರುವುದು ಶೋಚನೀಯ. ಮಂಗಲವಾದ್ಯಘೋಷದ ಹೆಸರಿನಲ್ಲಿ ಅಮಂಗಳವೆನ್ನಿಸುವಂತಹ ಚಿತ್ರವಿಚಿತ್ರ ಗೀತೆಗಳನ್ನೇ ನುಡಿಸುವುದು ನಿಜಕ್ಕೂ ಅವಿವೇಕವೇ ಸರಿ. ಶಾಸ್ತ್ರೀಯ ರಾಗಗಳನ್ನು ವಾದ್ಯಗಳಲ್ಲಿ ನುಡಿಸುವುದು ನಿಜವಾದ ಅರ್ಥದಲ್ಲಿ ಮಂಗಲಘೋಷವಾಗುವುದು. ಅದರೊಂದಿಗೆ ಅಂತಹ ರಾಗಗಳಿಗೆ ಹೊಂದುವಂತಹ

---

೧. ಆಗಮಾರ್ಥಂ ತು ದೇವಾನಾಂ ಗಮನಾರ್ಥಂ ತು ರಕ್ಷಸಾಮ್ ।
ಕುರು ಘಂಟಾರವಂ ತತ್ರ ದೇವತಾಹ್ವಾನಲಾಂಛನಮ್ ॥ -ಪದ್ಮಮಾಲಾ

೨. ಸ ಘೋಷೋ ಧಾರ್ತರಾಷ್ಟ್ರಾಣಾಂ ಹೃದಯಾನಿ ವ್ಯದಾರಯತ್ । -ಗೀತಾ(೧/೧೯)

ದೇವರ ಸ್ತೋತ್ರಗಳನ್ನು , ಹರಿದಾಸರ ಕೃತಿಗಳನ್ನು ನುಡಿಸುವುದು ಸಹ ಉಚಿತವೇ ಆಗಿದೆ. ಅದರ ಬದಲಿಗೆ ಅಸಹ್ಯ ತರಿಸುವಂತಹ ಮನಸ್ಸಿನಲ್ಲಿ ಉದ್ವೇಗ ಹುಟ್ಟಿಸುವಂತಹ ಲೌಕಿಕ ಗೀತೆಗಳನ್ನು ಮಂಗಲವಾದ್ಯಗಳ ಹೆಸರಿನಲ್ಲಿ ನುಡಿಸುವುದು ವಿವಾಹದಂತಹ ಕರ್ಮಕಾರ್ಯದ ಪಾವಿತ್ರ್ಯಕ್ಕೆ ಧಕ್ಕೆ ತರುವಂತಹ ವಿಚಾರ.

## ಸಭಾಪೂಜೆ

ವಿವಾಹಮಹೋತ್ಸವದಂತಹ ಮಂಗಲಕಾರ್ಯದಲ್ಲಿ ಗುರುಹಿರಿಯರ ಉಪಸ್ಥಿತಿ ಅತ್ಯಗತ್ಯ. ಅಂತಹ ಗುರುಗಳಲ್ಲಿ ವೇದವೇದಾಂತಕೋವಿದರಾದ ವಿದ್ವಾಂಸರಿಗೆ ಅಗ್ರಸ್ಥಾನ; ಅದರಂತೆ ಮನೆಯ ಹಿರಿಯರ ಉಪಸ್ಥಿತಿ ಅತ್ಯಂತ ಮುಖ್ಯ. ಅಂತಹ ಹಿರಿಯರಿಲ್ಲದ ಸಭೆ ಸಭೆ ಎನ್ನಿಸದು - ನ ಸಾ ಸಭಾ ಯತ್ರ ನ ಸಂತಿ ವೃದ್ಧಾಃ - (ಮಹಾಭಾರತ); ಅವೃದ್ಧ-ಮಂಡಿತಾಂ ನೈವ ಸಭೇತ್ಯಾಹುರ್ಮನೀಷಿಣಃ - (ಮ.ಭಾ.ತಾ.ನಿ.) ಯಾವುದೇ ಸಂಸ್ಕಾರದ ಬಗೆಗಿನ ಧರ್ಮಸೂಕ್ಷ್ಮಗಳನ್ನು ತಿಳಿಸುವುದು ಇಂತಹ ಸಭೆಯ ಹಿರಿಯರ ಕರ್ತವ್ಯ. ಇಲ್ಲವಾದಲ್ಲಿ ವೃದ್ಧ ಎಂಬ ಹೆಸರು ಅವರಿಗೆ ಅನ್ವಯವಾಗದು. ನ ತೇ ವೃದ್ಧಾ ಯೇ ನ ವದಂತೀಹ ಧರ್ಮಮ್ - (ಮಹಾಭಾರತ,೨/೬೭/೫೩); ಯೇ ಧರ್ಮಂ ನ ವದಂತೀಹ ನ ತೇ ವೃದ್ಧಾಃ ಪ್ರಕೀರ್ತಿತಾಃ - ಮ.ಭಾ.ತಾ.ನಿ.(೨೧/೩೨೫) ಇಂದಿನ ಹೆಚ್ಚಿನ ಸಭೆಗಳಲ್ಲಿ ಇಂತಹ ಗುರುಹಿರಿಯರ ಅಭಾವ ಎದ್ದು ಕಾಣುವುದು ಎಂಬುದು ವಿಷಾದದ ಸಂಗತಿ. ಹಿರಿಯರಿಲ್ಲದ ಮನೆಗಳೇ ಎಲ್ಲೆಡೆಯೂ ತುಂಬಿರುವ ಕಾಲವಿದು. ಅಪವಾದಕ್ಕೆಂಬಂತೆ ಕೆಲವು ವಯೋವೃದ್ಧರು ಇಂತಹ ಸಭೆಗಳಲ್ಲಿ ಕಾಣಸಿಕ್ಕಬಹುದಾದರೂ ಅವರಿಗೆ ತಾವು ಪಾಲ್ಗೊಂಡಿರುವ ಸಂಸ್ಕಾರದ ಬಗೆಗಿನ ಪರಿಜ್ಞಾನವಿರಲಿ, ಶ್ರದ್ಧೆಯು ಸಹ ಇರದಂತಹ ವಿಚಿತ್ರವಾದ ಕಾಲ ಇದಾಗಿದೆ. ಈ ಸಭಾಪೂಜೆ ಅಂತಹ ಗುರುಹಿರಿಯರ ಅಗತ್ಯವನ್ನು ಒತ್ತಿ ಹೇಳುವ ಮೂಲಕ ಧರ್ಮಜಾಗ್ರತಿಗೆ ನೆರವಾಗುವ ವಿಶಿಷ್ಟವಾದ ಕಾರ್ಯವಾಗಿದೆ : ನಮಃ ಸದಸಸ್ಪತಯೇ ಎಂಬ ವೈದಿಕ ಮಂತ್ರಗಳಿಂದ ಸಾಮಾನ್ಯಾ-ಕಾರದಿಂದ ಸಭೆಯಲ್ಲಿ ಉಪಸ್ಥಿತರಿರುವ ಹಿರಿಯರನ್ನು ಅಭಿವಂದಿಸಬೇಕು. ಸಭಾ-ಮರ್ಯಾದೆ ಎಂಬ ಮಾತಿನಲ್ಲಿ ಈ ಕಾರ್ಯದ ಮಹತ್ವ ಅಡಗಿದೆ. ಇಂತಹ ಹಿರಿಯರ ಸಾಲಿನಲ್ಲಿ ಪುರುಷರು ಮಾತ್ರವಲ್ಲದೆ ಮನೆಯ ಹಿರಿಯ ಸ್ತ್ರೀಯರೂ ಸಹ ಸೇರುವರು ಎಂಬುದನ್ನು ಗಮನಿಸಬೇಕು.

## ಮಧುಪರ್ಕ

ವರಪೂಜೆಯಂದೇ ನಡೆಯುವ ಮುಖ್ಯಕಾರ್ಯ ಮಧುಪರ್ಕ. ಮಧುಪರ್ಕವು ಭಗವಂತನಿಗೆ ಸಲ್ಲಿಸಬೇಕಾದ ಷೋಡಶೋಪಚಾರಗಳಲ್ಲಿ ಒಂದಾಗಿದೆ. ಆಚಮನ ಪುನರಾಚಮನಗಳ ಮಧ್ಯೆ ಬರುವ ಮಧುಪರ್ಕಸಮರ್ಪಣೋಪಚಾರವು ಸಹಜ-

ವಾಗಿಯೇ ಪ್ರಧಾನವೆನ್ನಿಸುವುದು. ವರನಲ್ಲಿ ಶ್ರೀಹರಿಯ ಸನ್ನಿಧಾನವನ್ನು ಚಿಂತಿಸಿ ಕನ್ಯೆಯನ್ನು ಧಾರೆಯೆರೆಯುವುದರಿಂದ ವರನಿಗೂ ಈ ಉಪಚಾರ ಪೂಜೆಗಳನ್ನು ಸಲ್ಲಿಸುವುದು ಸಮುಚಿತವೆನ್ನಿಸಿದೆ. ಮುಖ್ಯವಾಗಿ ಇದು ನಡೆಯುವುದು ವಿವಾಹ ದಿನದ ಹಿಂದಿನ ದಿನದ ಸಂಜೆ. ಕೆಲವೆಡೆ ವಿವಾಹದ ದಿನವೇ ನಡೆಯುವುದೂ ಉಂಟು. ವರನಿಗೆ ಬಗೆಬಗೆಯ ಉಪಚಾರಗಳನ್ನು ನೀಡಬೇಕು. ಅವುಗಳಲ್ಲಿ ಅರ್ಘ್ಯ, ಪಾದ್ಯ, ಆಚಮನೀಯ, ವಸ್ತ್ರ , ಪುಷ್ಪಮಾಲೆ ಹಾಗೂ ಎರಡು ಉಪವೀತಗಳು ಪ್ರಧಾನ. ಎಲ್ಲದಕ್ಕಿಂತ ಹೆಚ್ಚು ಪ್ರಾಧಾನ್ಯ ಮಧುಪರ್ಕಕ್ಕೆ. ಭಗವಂತನಿಗೆ ನಿತ್ಯ ಸಮರ್ಪಿಸಬೇಕಾದ ಷೋಡಶೋಪಚಾರದಲ್ಲಿ ಈ ಮಧುಪರ್ಕವೂ ಸೇರಿದೆ. ಜೇನಿನ ಜೊತೆಗೆ ಅದರ ೩ ಪಟ್ಟು ಪ್ರಮಾಣದಲ್ಲಿ ಮೊಸರು ಹಾಗೂ ತುಪ್ಪವನ್ನು ಸೇರಿಸಿದಾಗ ಅದಕ್ಕೆ ಮಧುಪರ್ಕ ಎಂದು ಹೆಸರು. (ದಧಿಮಧ್ವಾಜ್ಯಸಂಯುಕ್ತೋ ಮಧುಪರ್ಕಃ; ದಧಿಮಧುಮಿಶ್ರಂ ಮಧುಪರ್ಕಃ; ತತ್ರ ದಧ್ಯಲಾಭೇ ಪಯೋ ಜಲಂ ವಾ ಸರ್ಪಿರ್ಗುಡೋ ವಾ ಪ್ರತಿನಿಧಿಃ ॥ - ಧರ್ಮಸಿಂಧು). ವರನಲ್ಲಿ ಸಾಕ್ಷಾತ್ ಶ್ರೀಹರಿಯನ್ನು ಚಿಂತಿಸುವ ವಿಧಿ ಇರುವುದರಿಂದ ಈ ವಿಶೇಷ [1]ಉಪಚಾರಕ್ಕೆ ಅರ್ಹತೆ. ಮನುಷ್ಯನ ಪೂರ್ಣಜೀವನದ ಅವಧಿ ಉಪನಿಷತ್ತುಗಳ ನಿರೂಪಣೆಯಂತೆ ಒಟ್ಟು ೧೧೬ ವರ್ಷಗಳು ಅದರಲ್ಲಿ ಮೊದಲ ೨೪ ಗಾಯತ್ರೀ ಛಂದಸ್ಸಿನ ಅಕ್ಷರಗಳ ಸಂಕೇತ. ಅನಂತರದ ೪೪ ವರ್ಷಗಳು ತ್ರಿಷ್ಟುಪ್ ಛಂದಸ್ಸಿನ ಸಂಕೇತ. ಅನಂತರದ ೪೮ ವರ್ಷಗಳು ಜಗತೀ ಛಂದಸ್ಸಿನ ಸಂಕೇತ. ಈ ಮೂರಕ್ಕೂ ಕ್ರಮವಾಗಿ ಪ್ರಾತಃಸವನ, ಮಾಧ್ಯಂದಿನ ಸವನ ಹಾಗೂ ಸಾಯಂಸವನ ಎಂಬುದಾಗಿ ಹೆಸರು. ಇವುಗಳಿಗೆ ಕ್ರಮವಾಗಿ ೮ ವಸುಗಳು, ಏಕಾದಶ ರುದ್ರರು ಹಾಗೂ ದ್ವಾದಶ ಆದಿತ್ಯರು ನಿಯಾಮಕ ದೇವತೆಗಳು. ಮರಣವು ಇಂತಹ ಜೀವನದ ಅವಭೃಥಸ್ನಾನವಾದರೆ, ಆ ಬಳಿಕದ ಕಾರ್ಯ ಔರ್ಧ್ವದೈಹಿಕ ಕಾರ್ಯ ಅದಕ್ಕೆ ವಿಶ್ವೇ-ದೇವತೆಗಳು ನಿಯಾಮಕರು. ಈ ಕಾರಣದಿಂದ ಇವರೆಲ್ಲರ ಸ್ಮರಣೆಯೂ ಸಹ ಮಧುಪರ್ಕ ಸ್ವೀಕಾರದ ಸಮಯದಲ್ಲಿ ಅಗತ್ಯ.

## ಅಂತಃಪಟಧಾರಣೆ

ಜ್ಯೋತಿಷ್ಕರು ನಿಶ್ಚಯಿಸಿದ, ಶುಭಮುಹೂರ್ತದಲ್ಲಿ ತಂಡುಲರಾಶಿಯ ಮೇಲೆ ವಧೂವರರನ್ನು ಎದುರುಬದಿರಾಗಿ ನಿಲ್ಲಿಸಬೇಕು. [2]ವರನನ್ನು ಪಶ್ಚಿಮಾಭಿಮುಖ-

---

೧. ಗೃಹಾಗತಂ ಸ್ನಾತಕಂ ವರಂ ಮಧುಪರ್ಕೇಣಾರ್ಹಯಿಷ್ಯೇ ಇತಿ ಸಂಕಲ್ಪಃ। -ಧರ್ಮಸಿಂಧು
ಮಧುಪರ್ಕಮುಪಾನೀಯ ವಾಸಾಂಸಿ ರುಚಿರಾಣಿ ಸಹ।
ಉಪಾಯನಾನ್ಯಭೀಪ್ಸಾನಿ ವಿಧಿವತ್ ಸಮಪೂಜಯತ್ ॥ -ಶ್ರೀಮದ್ಭಾಗವತ(೧೦/೫೮/೩೩)

೨. ಶ್ರೀರಾಮಂ ಜನಕಾತ್ಮಜಾಂ ಸ್ಮಿತಮುಖೀಂ ಪ್ರತ್ಯಙ್ಮುಖಂ ಪ್ರಾಙ್ಮುಖೀಮ್।
-ಶ್ರೀರಾಮಮಂಗಲಾಷ್ಟಕ (ವಾಲ್ಮೀಕಿವಿರಚಿತ)

ವಾಗಿಯೂ ಕನ್ಯೆಯನ್ನು ಪೂರ್ವಾಭಿಮುಖವಾಗಿಯೂ ನಿಲ್ಲಿಸಬೇಕು. ವರನನ್ನು ಪೂರ್ವಾಭಿಮುಖವಾಗಿಯೂ ಕನ್ಯೆಯನ್ನು ಪಶ್ಚಿಮಾಭಿಮುಖವಾಗಿಯೂ ನಿಲ್ಲಿಸುವ ಕ್ರಮವೂ ಉಂಟು[೧]. ಅವರಿಬ್ಬರ ಮುಖದಲ್ಲಿ ಕುಂಕುಮಾದಿಗಳಿಂದ ಅಲಂಕೃತವಾದ ಸ್ವಸ್ತಿಕಚಿಹ್ನೆಯಿಂದ ಕೂಡಿದ ಅಂತಃಪಟವನ್ನು ಅವರ ಮುಖದಿಂದ ಉದರದವರೆಗೆ ಅಡ್ಡ ಹಿಡಿಯಬೇಕು. ಕನ್ಯಾವರರ ತಂದೆ, ಮೊದಲಾದವರು ಪುರೋಹಿತರನ್ನು ಪೂಜಿಸಿ, ಅವರು ನೀಡಿದ ಅಕ್ಷತೆ ಫಲಗಳನ್ನು ಕನ್ಯಾವರರ ಬೊಗಸೆಯಲ್ಲಿ ಇರಿಸಬೇಕು. ಅವರಿಬ್ಬರೂ ಕೈಯಲ್ಲಿ ಅಕ್ಷತೆ ಹಾಗೂ ಜೀರಿಗೆಬೆಲ್ಲಗಳನ್ನು ಹಿಡಿದು ಮುಹೂರ್ತಕಾಲವನ್ನು

---

ಪ್ರತ್ಯಙ್ಮುಖಾ ವರಯಂತಿ ಪ್ರತಿಗೃಹ್ಣಂತಿ ಪ್ರಾಙ್ಮುಖಾಃ। -ಆಶ್ವಲಾಯನ ಗೃಹ್ಯಪರಿಶಿಷ್ಟ

ಕನ್ಯಾವರಣಕಾಲೇ ತಂ ಪ್ರಾಙ್ಮುಖೀಂ ವರಯೇದ್ವಧೂಮ್ ।
ಪಶ್ಚಿಮಾಸ್ಯಂ ವರಂ ಸ್ಥಾಪ್ಯ ದ್ರೋಣಮಾನೇ ತು ತಂಡುಲೇ ॥ -ಸಂಗ್ರಹ

ಪ್ರಾಙ್ಮುಖೀಂ ವೃಣುಯಾತ್ ಕನ್ಯಾಂ ಗೋತ್ರಸಂಬಂಧಪೂರ್ವಕಮ್ ।
ಪ್ರತ್ಯಙ್ಮುಖಂ ವರಂ ಕೃತ್ವಾ ವೃಣುಯಾದ್ವಧುಪೂರ್ವಕಮ್ ॥ -ಶಾಕಲ

ಪ್ರಾಙ್ಮುಖಂ ತಂ ವರಂ ಕುರ್ಯಾತ್ ವರುಣಾಭಿಮುಖೀಂ ವಧೂಮ್ ।
ಕನ್ಯಾವರಣಕಾಲೇ ತು ದಾನಕಾಲೇ ವಿಪರ್ಯಯಃ ।
ಪ್ರಾಙ್ಮುಖಃ ಪ್ರತಿಗೃಹ್ಣೀಯಾತ್ ಪ್ರಾಙ್ಮುಖಂ ವರಯೇದ್ವರಮ್ ।
ವೃಣುಯಾದ್ಗೋತ್ರನಾಮಾದ್ಯೈರ್ವರುಣಾಭಿಮುಖಂ ಸ್ಥಿತಾಮ್ ॥-ಶಾತಾತಪೀಯೇ ಬೋಧಾಯನಃ

ಸ್ನಾತಾಲಂಕೃತಕನ್ಯಾಯಾಃ ಪ್ರಾಙ್ಮುಖ್ಯಾಃ ಪ್ರತ್ಯಗಾನನಃ ।
ಈಕ್ಷೇತ ತಂಡುಲಸ್ಥಾಯಾ ವರಸ್ಯ ಚ ಮುಖಂ ಚ ಸಾ ॥ -ಸಂಗ್ರಹ

ಅಥ ಜ್ಯೋತಿರ್ವಿದಾದಿಷ್ಟೇ ಶುಭಕಾಲೇ ಹಸ್ತಾಂತರಕಾಲೇ ತಂಡುಲರಾಶೀ ಪೂರ್ವಾಪರೌ ಕೃತ್ವಾ ಪೂರ್ವರಾಶೌ ಪ್ರತ್ಯಙ್ಮುಖಂ ವರಮಪರಸ್ಮಿನ್ಪ್ರಾಙ್ಮುಖೀಂ ಕನ್ಯಾಮವಸ್ಥಾಪ್ಯ ತಯೋರ್ಮಧ್ಯೇ ಕುಂಕುಮಾದಿಕೃತಸ್ವಸ್ತಿಕಾಂಕಿತಮಂತಃಪಟಮುದರದಶಂ ಧಾರಯೇಯುಃ ॥ ಕನ್ಯಾವರಯೋ ಪಿತ್ರಾದಿರ್ಜ್ಯೋತಿರ್ವಿದಂ ಸಂಪೂಜ್ಯ ತದ್ದತ್ತಾಕ್ಷತಾಃ ಫಲಯುತಾಃ ಕನ್ಯಾವರಯೋರಂಜಲೌ ದದ್ಯಾತ್ । ಕನ್ಯಾವರೌ ಸಾಕ್ಷತಹಸ್ತೌ ಸ್ವಸ್ತಿಕಾಲೋಕನಪರೌ ಅಮುಕದೇವತಾಯ್ಯೆ ನಮ ಇತಿ ಸ್ವಸ್ವಕುಲದೇವತಾಂ ಧ್ಯಾಯಂತೌ ತಿಷ್ಠೇತಾಮ್ । ಜ್ಯೋತಿರ್ವಿದಾ ಮಂಗಲಪದ್ಯಾಷ್ಟಕಪಾಠಾಂತೇ ಸ್ವೋಕ್ತಕಾಲೇ ''ತದೇವಲಗ್ನಂ'' ಇತಿ ಪಠಿತ್ವಾ ಸುಮುಹೂರ್ತಮಸ್ತು। ಓಂ ಪ್ರತಿಷ್ಠೇತ್ಯುಕ್ತೇ ಅಂತಃ-ಪಟಮುತ್ತರತೋಪಸಾರಯೇಯುಃ । ತತಃ ಕನ್ಯಾವರೌ ಪರಸ್ಪರಶಿರಸೋರಕ್ಷತಪ್ರಕ್ಷೇಪಂ ಪರಸ್ಪರೇಕ್ಷಣಂ ಚ ಕುರ್ಯಾತಾಮ್ । ವರೋ ವಧ್ವಾ ಭ್ರೂಮಧ್ಯೇ ದರ್ಭಾಗ್ರೇಣ ಓಂ ಭೂರ್ಭುವಃ ಸ್ವರಿತಿ ಪರಿಮೃಜ್ಯ ದರ್ಭಂ ನಿರಸ್ಯಾಪಃ ಸ್ಪೃಶೇತ್ । ವೈದಿಕೈಃ ಪಠ್ಯಮಾನ-ಬ್ರಾಹ್ಮಣಖಂಡವಾಕ್ಯಾಂತೇ ಕನ್ಯಾಪೂರ್ವಕಂ ತಾಭ್ಯಾಮಕ್ಷತಾರೋಪಣಂ ಪ್ರತಿವಾಕ್ಯಂ ಕಾರ್ಯಮ್ ।
-ಧರ್ಮಸಿಂಧು

೧. ತತೋ ಬಂಧುಜನಃ ಪೂರ್ವರಾಶಾವಶ್ಮನಿ ತಂಡುಲಜೀರಕಯುತಾಂಜಲಿಕಾಂ ಪ್ರತ್ಯಙ್ಮುಖೀಂ ವಧೂಂ ಪಶ್ಚಿಮರಾಶೌ ಪೀಠೇ ತಂಡುಲಜೀರಕಯುತಾಂಜಲಿಕಂ ಪ್ರಾಙ್ಮುಖಂ ವರಂ ಚಾವಸ್ಥಾಪಯೇತ್ । ಆಶ್ವಲಾಯನೋ ವರಶ್ಚೇತ್ ಪ್ರಾಙ್ಮುಖೀವಧೂಃ ಪ್ರತ್ಯಙ್ಮುಖೋ ವರಃ ।
-ಸಂಸ್ಕಾರಪದ್ಧತಿ

ಪ್ರತೀಕ್ಷಿಸುತ್ತಾ ತಮ್ಮ ತಮ್ಮ ಕುಲದೇವತೆಯನ್ನು ಧ್ಯಾನಿಸುತ್ತಾ ನಿಂತಿರಬೇಕು[೧]. ಶಾಸ್ತ್ರಜ್ಞರು [೨]ಮಂಗಲಾಷ್ಟಕವನ್ನು (ಸುವಾಸಿನಿಯರು ಲಕ್ಷ್ಮೀಶೋಭನ ಪದವನ್ನು) ಪಠಿಸಿ, ಸೂಕ್ತಕಾಲದಲ್ಲಿ ತದೇವ ಲಗ್ನಂ ಸುದಿನಂ ತದೇವ ಎಂದು ಪಠಿಸಿ, ಸುಮುಹೂರ್ತಮಸ್ತು ಎಂದು ನುಡಿದು, 'ಓಂ ಪ್ರತಿಷ್ಠಾ' ಎಂದು ಅಂತಃಪಟವನ್ನು ಸರಿಸಬೇಕು. ಆಗ ಕನ್ಯಾವರರು ಪರಸ್ಪರರ ಮೇಲೆ ಜೀರಿಗೆ ಬೆಲ್ಲ ಸಮೇತವಾದ ಅಕ್ಷತೆಯನ್ನು ಹಾಕಿ, ಒಬ್ಬರನ್ನೊಬ್ಬರು ನಿರೀಕ್ಷಿಸಬೇಕು[೩]. ನಿರೀಕ್ಷಣ ಕಾರ್ಯ ಎಂದರೆ ಇದೇ ಆಗಿದೆ. ಈ ಸಮಯದಲ್ಲಿ ವಧೂವರರು ಅಕ್ಷತೆಯೊಂದಿಗೆ ತಮ್ಮ ಕೈಯಲ್ಲಿ ಜೀರಿಗೆ ಬೆಲ್ಲಗಳನ್ನು ಹಿಡಿದುಕೊಂಡು, ಅವನ್ನೂ ಸಹ ಪರಸ್ಪರರ ತಲೆಯಮೇಲೆ ಹಾಕಬೇಕು. ಮೊದಲು ಹಾಕಿದವರ ಮಾತು ಮುಂದೆ ಸಂಸಾರದಲ್ಲಿ ನಡೆಯುವಂತಾಗುತ್ತದೆ ಎಂಬುದು ಉಂಟು[೪].

ಶ್ರೀವಾದಿರಾಜಸ್ವಾಮಿಗಳೂ ರುಗ್ಮಿಣೀಶವಿಜಯದಲ್ಲಿ ಕೃಷ್ಣ ರುಗ್ಮಿಣಿಯರ ಕಲ್ಯಾಣ-ಸಮಯದಲ್ಲಿ ಈ ಪ್ರಸಂಗವನ್ನು ಉಲ್ಲೇಖಿಸುತ್ತಾ ರುಗ್ಮಿಣಿಯೇ ಮೊದಲು ಹಾಗೆ [೫]ಜೀರಿಗೆ ಬೆಲ್ಲವನ್ನು ಹಾಕಿದಳು. ಆದರಿಂದಾಗಿ ಶ್ರೀಕೃಷ್ಣ ರುಗ್ಮಿಣಿಗೆ ವಶನಾದ ಎಂದು ರಂಜಕವಾಗಿ ತಿಳಿಸಿರುವರು. ವಾಸ್ತವವಾಗಿ ಕೃಷ್ಣ ರುಗ್ಮಿಣಿಗೆ ವಶನಾದದ್ದು ಅವರ ಅತ್ಯಂತ ನಿರ್ಮಲವಾದ ಪರಮಭಕ್ತಿಗೆ ಹೊರತು ಸಾಮಾನ್ಯಪುರುಷರು ಸ್ತ್ರೀವಶರಾಗುವಂತೆ ಅಲ್ಲ ಎಂಬ ತತ್ವವು ಸಹ ಶ್ರೀವಾದಿರಾಜಸ್ವಾಮಿಗಳ ಮಾತಿನಲ್ಲಿ ನಿರೂಪಿತವಾಗಿದೆ. ಅಂತೂ ಅವರಿಂದ ಈ ಪ್ರಸಂಗದ ಉಲ್ಲೇಖ ಇದು ಶಾಸ್ತ್ರವಿಹಿತವಾದ ಕಾರ್ಯ ಎಂಬುದಕ್ಕೆ ಆಧಾರವಾಗುವುದು.

---

೧. ಇತ ಆರಭ್ಯ ಯಾವದಂತಃಪಟನಿಃಸಾರಣಂ ದ್ವಿಜಾ ಮಂತ್ರಪಾಠಂ ಪುರಂಧ್ರ್ಯೋ ಮಂಗಲಗೀತಾನಿ ಕುರ್ಯುಃ। ತತೋ ವಧೂವರೌ ಮನಸೇಷ್ಟದೇವತಾಂ ಧ್ಯಾಯಂತೌ ಸಮಾಹಿತೌ ತಿಷ್ಠೇತಾಮ್। ಅಸ್ಮಿನ್ ಅವಸರೇಽವಕಾಶಾನುರೋಧೇನ ಜ್ಯೋತಿರ್ವಿದೋ ಮಂಗಲಶ್ಲೋಕಾನ್ ಪಠೇಯುಃ।
-ಸಂಸ್ಕಾರಪದ್ಧತಿ

೨. ತಯೋರ್ಮುಹೂರ್ತಾವಧಿ ಮಧ್ಯದತ್ತಪಟಂ ವಿನಿರ್ಭಿದ್ಯ ಮಿಥಃ ಸ್ಪೃಶಂತ್ಯಃ।
ಪ್ರಭಾಃ ಸದಾಽಖಂಡಿತಯೋಗಭಾಗ್ಯಂ ವಿಬೋಧಯಂತಿ ಸ್ಮ ವಿವೇಕಭಾಜಃ॥
ಸೀತಾಸ್ವಯಂವರಮಹೋತ್ಸವಗಾನಕಾಲೇ ಜಾತೌ ರಮಾಪುಲಕಮಾಧವಮಂದಹಾಸೌ।
ಸಾ ಜಾನಕೀಯಮಯಮೇವ ಹಿ ರಾಮಚಂದ್ರಃ ಕಿಂ ತನ್ಮುಹೂರ್ತಕಥಯೇತಿ ಹಿ ಶಂಸತಃ ಸ್ಮ॥
-ರುಗ್ಮಿಣೀಶವಿಜಯ(೧೬/೩೪,೩೫)

೩. ತತೋ ವಧೂವರಾಭ್ಯಾಂ ಪರಸ್ಪರಮಂಜಲಿಸ್ಥತಂಡುಲಜೀರಕಾವಕಿರಣಂ ಕನ್ಯಾಪೂರ್ವಕಂ ಕಾರಯೇಯುರಾಚಾರಾತ್। -ಸಂಸ್ಕಾರಪದ್ಧತಿ

೪. ವಧೂವರಯೋರ್ಮಧ್ಯೇ ಪುರುಷಪ್ರಯುಕ್ತಂ ಜೀರಿಕಾದಿಕಂ ಪ್ರಥಮಂ ಕನ್ಯೋಪರಿ ಪತತಿ ಚೇತ್ ಪುರುಷೋ ಜಯವಾನ್ ಕನ್ಯಾಪ್ರಯುಕ್ತಂ ಪುರುಷೋಪರಿ ಪತತಿ ಚೇತ್ ಕನ್ಯಾ ಜಯವತೀತಿ ಲೋಕಪ್ರವಾದಃ। -ರುಗ್ಮಿಣೀಶವಿಜಯವ್ಯಾಖ್ಯಾನ (ಗುರುಭಾವಪ್ರಕಾಶಿಕಾ)

೫. ಗುಡಾನ್ವಿತಾಭಿಃ ಶುಭಜೀರಿಕಾಭಿಃ ಪರಸ್ಪರಂ ವರ್ಷತಿ ಬಂಧುವರ್ಗೇ।
ವಕ್ಷಃಸ್ಥಿತಾಂಭೋಧಿಸುತಾಜಿತಸ್ತತ್ಕ್ಷ್ಯೈಃ ಪ್ರಯುಕ್ತಂ ಪ್ರಥಮಂ ಬಭಾರ॥ -ರು.ವಿ.(೧೬/೩೭)

# ನಿರೀಕ್ಷಣೆ

ನಿರೀಕ್ಷಣೆಯು ವಿವಾಹಕಾರ್ಯದ ಅತ್ಯಂತ ಪ್ರಧಾನವಾದ ಅಂಗಗಳಲ್ಲೊಂದು. ಅಂತಃಪಟ ಸರಿಸುತ್ತಲೇ ಪ್ರಥಮಬಾರಿ ಎಂಬಂತೆ ವಧೂವರರು ಪರಸ್ಪರರನ್ನು ವರ ಹಾಗೂ ಕನ್ಯೆ ಎಂಬ ಭಾವದಿಂದ ನಿಟ್ಟಿಸಿ ನೋಡಬೇಕು. [೧]ನಿರೀಕ್ಷಣೆ ಎಂದರೆ ಇದೇ. ಆ ಮುನ್ನ ವಧೂವರರು ಪರಸ್ಪರ ನೋಡಿದ್ದರೂ ಈ ಸಮಯದಲ್ಲಿ ನಿಶ್ಚಿತವಾದ ವಧೂವರ ಭಾವದಿಂದ ನೋಡುವುದು ವಿಶೇಷ ಎನ್ನಿಸುವುದು. ತಾವು ಬೇರೆಬೇರೆ ಪ್ರಸಂಗಗಳಲ್ಲಿ ಕಂಡ ಪರಿಚಿತ ಅಭ್ಯರ್ಥಿಯನ್ನು ಇಂಟರ್‌ವ್ಯೂ ಕಾಲದಲ್ಲಿ ನೋಡುವ ವಿಶೇಷತೆ ಹೇಗೋ ಹಾಗೆ. ತನ್ನ ಮನೆ ತುಂಬುವ ವಧುವು ಮನೆ ಒಡೆಯದಂತಾಗಲಿ, ತನಗೆಂದೂ ಅವಳು ಕೆಡುಕನ್ನು ಬಯಸದಿರಲಿ. ಮುಂದೆ ಜನಿಸುವ ಮಕ್ಕಳನ್ನು ಮಮತೆಯಿಂದ ಪೋಷಿಸಲಿ[೨] ಎಂಬುದನ್ನು ವರುಣ, ಬೃಹಸ್ಪತಿ, ಇಂದ್ರ ಹಾಗೂ ಸವಿತೃದೇವತೆಗಳನ್ನು ವರ ಪ್ರಾರ್ಥಿಸಿಕೊಳ್ಳಬೇಕು. ಸಮರ್ಥನಾಗಿದ್ದಲ್ಲಿ ವರನಾದವನು ಅದಕ್ಕೆ ಸಂಬಂಧಿಸಿದ ಸೂರ್ಯಾವರ್ಗದ ಮಂತ್ರವನ್ನು ಪಠಿಸುತ್ತಾ ದರ್ಭೆಯಿಂದ ಕನ್ಯೆಯ ಭ್ರೂಮಧ್ಯವನ್ನು ಸ್ಪರ್ಶಿಸಿ ದೃಷ್ಟಿತೆಗೆಯುವಂತೆ ನೈರ್ಋತ್ಯದಿಕ್ಕಿಗೆ ಎಸೆಯಬೇಕು. ತನ್ನ ಭ್ರೂಮಧ್ಯದಲ್ಲಿ ವಧೂವಾದವಳು ಪತಿಯ ಕಲ್ಯಾಣಕ್ಕಾಗಿ ಉದ್ದ ಕುಂಕುಮವನ್ನು ಧರಿಸಬೇಕು. ಇಂದಿನಿಂದ ವಧುವಿಗೆ ಈ ರೀತಿಯಾಗಿ ಊರ್ಧ್ವಮುಖವಾದ ಕುಂಕುಮವೇ ವಿಹಿತವಾಗಿದೆ. ಇದು ಪತಿಯ ಆಯುಷ್ಯವೃದ್ಧಿಗೆ ಕಾರಣವಾಗುವುದು.

ಆಹ್ವಾನಪತ್ರಿಕೆಗಳಲ್ಲಿ ಸೂಚಿತವಾದ ವಿವಾಹಮುಹೂರ್ತ ಎಂಬುದು ಮುಖ್ಯವಾಗಿ ಈ ನಿರೀಕ್ಷಣೆಯ ಕಾರ್ಯಕ್ಕೆ ಅನ್ವಯಿಸುವುದು ಎಂಬುದನ್ನು ತಿಳಿಯಬೇಕು. ವಿವಾಹಕ್ಕೆ ಮುಖ್ಯವಾದ ಕಾರ್ಯಗಳು ಪಾಣಿಗ್ರಹಣ, ಮಾಂಗಲ್ಯಧಾರಣ, ಸಪ್ತಪದೀ ಮೊದಲಾಗಿ ಅನೇಕ ಇದ್ದರೂ, ಈ ಪ್ರಸಂಗದಲ್ಲಿ ಮುಹೂರ್ತ ಎಂದರೆ ಈ ನಿರೀಕ್ಷಣೆಯ ಮುಹೂರ್ತ ಎಂದೇ ಅರ್ಥ. ಆ ಕಾಲಕ್ಕೆ ವಿಪ್ರವೃಂದ "ಸುಮುಹೂರ್ತೋ ಅಸ್ತು" ಎಂದು ನುಡಿಯುತ್ತಿರಬೇಕು. "ತದೇವಲಗ್ನಂ ಸುದಿನಂ ತದೇವ" ಎಂಬುದಾಗಿ ನುಡಿಯಬೇಕು.

---

೧. ಅಸೀತ್ಪರಸ್ಪರನಿರೀಕ್ಷಣಕರ್ಮಕಾಲೇ ಭೈಷ್ಮೀಮುಖಾಂಬುಜಗತಂ ನಯನಂ ಮುರಾರೇಃ।
ತಸ್ಯಾಶ್ಚ ನಾಭಿಸರಸೀನಿಲಯಂ ತದೇತದ್ಯುಕ್ತಂ ಯದರ್ಕದೃಗಸಾವಿಯಮುತ್ಪಲಾಕ್ಷೀ ॥ರು.ವಿ.(೧೬/೩೬)
ನಿರೀಕ್ಷಣೆಯು ಕನ್ಯಾದಾನದ ಬಳಿಕ ಎಂಬುದು ಗೃಹ್ಯಪರಿಶಿಷ್ಟದ ಮಾತು : ಅಥ ಕನ್ಯಾದಾನಾನಂತರಂ ನಿರೀಕ್ಷಣಂ ಕರ್ತವ್ಯಮ್. ಆದರೆ ಶೌನಕರಿಂದ ನಿರೀಕ್ಷೆಯ ಬಳಿಕವೇ ದಾನ ಎಂದು ಹೇಳಲ್ಪಟ್ಟಿರುವುದರಿಂದ ಹೆಚ್ಚಿನ ಶಿಷ್ಟಾಚಾರವು ಹಾಗೇ ಇರುವುದರಿಂದ ಮೊದಲು ನಿರೀಕ್ಷಣೆ, ಆ ಬಳಿಕ ಕನ್ಯಾದಾನ ಎಂದು ತಿಳಿಯಬೇಕು: ನಿರೀಕ್ಷಣಾನಂತರಂ ದಾನಮಿತ್ಯುಕ್ತತ್ವಾತ್ ಪ್ರಚುರಾಚಾರಸ್ಯಾಪಿ ತಥಾ ದೃಷ್ಟತ್ವಾತ್ ನಿರೀಕ್ಷಣಮೇವಾಗ್ರೇ ವಕ್ಷ್ಯತೇ.

೨. ಅಭ್ರಾತೃಘ್ನೀಂ ವರುಣ ಅಪತಿಘ್ನೀಂ ಬೃಹಸ್ಪತೇ ಇಂದ್ರ।
ಅಪುತ್ರಘ್ನೀಂ ಲಕ್ಷ್ಮ್ಯಂ ತಾಮಸ್ಯೈ ಸವಿತುಃ ಸುವಾ ॥

## ಕನ್ಯಾದಾನ ಸಂಕಲ್ಪ

ಆ ಬಳಿಕ ಮಹಾಸಂಕಲ್ಪದೊಂದಿಗೆ ಕನ್ಯೆಯನ್ನು ವರನಿಗೆ ಧಾರೆಯೆರೆಯಬೇಕು. ಮಹಾಸಂಕಲ್ಪವು ತಾನು ನೆಲೆಸಿರುವ ಲೋಕ, ಹಾಗೂ ಇಡೀ ಬ್ರಹ್ಮಾಂಡದ ಕಲ್ಪನೆ, ದೇವತೆಗಳ ತಾರತಮ್ಯ, ಭಗವಂತನ ಪಾರಮ್ಯ ಮೊದಲಾದ ತತ್ವಗಳ ಚಿಂತನೆಯನ್ನು ಒಳಗೊಂಡ ಆ ಮಹಾಸಂಕಲ್ಪವು ತನ್ನ ಕನ್ಯೆಯಲ್ಲಿ ಮಹಾಲಕ್ಷ್ಮಿಯ ಹಾಗೂ ವರನಲ್ಲಿ ನಾರಾಯಣನ ಸನ್ನಿಧಾನವನ್ನು ಚಿಂತಿಸಿ ನಡೆಸುವ ಶ್ರೀನಿವಾಸಕಲ್ಯಾಣ, ಸೀತಾರಾಮ-ಕಲ್ಯಾಣ, ಕೃಷ್ಣರುಕ್ಮಿಣೀಕಲ್ಯಾಣದಂತೆ ಆಗಲು ಪ್ರಯತ್ನಿಸಬೇಕು. ಆ ಸಮಯದಲ್ಲಿ ಅಲಂಕೃತಳಾದ ಕನ್ಯೆಯ ಬೊಗಸೆಯನ್ನು ವರನ ಬೊಗಸೆಯ ಕೆಳಗಿರಿಸಿ ಧರ್ಮಪತ್ನಿಯು ಕಲಶದಿಂದ ತನ್ನ ಕೈಯಲ್ಲಿ ಸುರಿಯುವ ಜಲಧಾರೆಯ ಮೂಲಕ ಕನ್ಯಾಪಿತೃವು ಕನ್ಯೆಯನ್ನು ಧಾರೆಯೆರೆಯಬೇಕು[೧]. ಸಾಮಾನ್ಯವಾಗಿ ಇತರ ದಾನಗಳ ಪ್ರಸಂಗದಲ್ಲಿ ದಾನತೆಗೆದು-ಕೊಳ್ಳುವವನ ಕೈ ಕೆಳಗೆ, ದಾನನೀಡುವವನ ಕೈ ಮೇಲೆ ಎಂಬುದು ಪದ್ಧತಿ. ಆದರೆ ಕನ್ಯಾದಾನಕ್ಕೆ ಮಾತ್ರ ಹಾಗಿರದೆ, ವರನ ಕೈಯೇ ಮೇಲೆ, ಕನ್ಯೆಯ ಕೈ ಕೆಳಗೆ ಎಂಬುದು ವಿಶೇಷ. ಕನ್ಯಾದಾನ ಇತರ ದಾನಗಳಂತೆ ಒಮ್ಮೆ ನೀಡಿ ಕೈತೊಳೆದುಕೊಳ್ಳುವ ದಾನವಲ್ಲ ಎಂಬ ಸೂಚನೆಯು ಈ ವಿಶೇಷತೆಯಲ್ಲಿದೆ ಎಂದು ತಿಳಿಯಬಹುದು. ಸಾಮಾನ್ಯವಾದ ದಾನವಿಧಿಗೆ ಇಲ್ಲಿಯ ದಾನವಿಧಿ ಭಿನ್ನ

ಈ ಸಮಯದಲ್ಲಿಯೇ ಧರ್ಮೇ ಚಾರ್ಥೇ ಚ ಕಾಮೇ ಚ ನಾತಿಚರಿತವ್ಯಾ ತ್ವಯೇಯಮ್ ಎಂಬ ಸಂದೇಶದೊಂದಿಗೆ ಮಗಳನ್ನು ಧಾರೆ ಎರೆಯಬೇಕು[೨]. ಇದರಿಂದ ಕನ್ಯೆಯು ಧಾರೆಯೆರೆದ ಬಳಿಕವೂ ಸಹ ಕನ್ಯಾಪಿತೃವಿನ ಹೊಣೆಯಿಂದ ದೂರಾಗುವುದಿಲ್ಲ

---

೧. ಕನ್ಯಾದಾನದ ಮಂತ್ರಗಳು :

ಕನ್ಯಾಂ ಕನಕಸಂಪನ್ನಾಂ ಕನಕಾಭರಣೈರ್ಯುತಾಮ್ ।
ದಾಸ್ಯಾಮಿ ವಿಷ್ಣವೇ ತುಭ್ಯಂ ಬ್ರಹ್ಮಲೋಕಜಿಗೀಷಯಾ ।
ವಿಶ್ವಂಭರಃ ಸರ್ವಭೂತಃ ಸಾಕ್ಷಿಣ್ಯಃ ಸರ್ವದೇವತಾಃ ।
ಇಮಾಂ ಕನ್ಯಾಂ ಪ್ರದಾಸ್ಯಾಮಿ ಪಿತೄಣಾಂ ತಾರಣಾಯ ಚ ॥ -ಧರ್ಮಸಿಂಧು
ಗೌರೀಂ ಕನ್ಯಾಮಿಮಾಂ ವಿಪ್ರ ಯಥಾಶಕ್ತಿವಿಭೂಷಿತಾಮ್ ।
ಗೋತ್ರಾಯ ಶರ್ಮಣೇ ತುಭ್ಯಂ ದತ್ತಾಂ ವಿಪ್ರ ಸಮಾಶ್ರಯ ॥
ಕನ್ಯೇ ಮಮಾಗ್ರತೋ ಭೂಯಾಃ ಕನ್ಯೇ ಮೇ ದೇವಿ ಪಾರ್ಶ್ವಯೋಃ ।
ಕನ್ಯೇ ಮೇ ಪೃಷ್ಠತೋ ಭೂಯಾಸ್ತ್ವದ್ದಾನಾನ್ಮೋಕ್ಷಮಾಪ್ನುಯಾಮ್ ॥
ಮಮ ವಂಶಕುಲೇ ಜಾತಾ ಪಾಲಿತಾ ವತ್ಸರಾಷ್ಟಕಮ್ ।
ತುಭ್ಯಂ ವಿಪ್ರ ಮಯಾ ದತ್ತಾ ಪುತ್ರಪೌತ್ರಪ್ರವರ್ಧಿನೀ ॥ -ಸಂಸ್ಕಾರಪದ್ಧತಿ

೨. ವರನಿಗೆ ಭೋಜನದ ತಟ್ಟೆ, ಕುಡಿಯುವ ಲೋಟ ಇತ್ಯಾದಿ ಉಪಚಾರಗಳನ್ನು ನೀಡಬೇಕಾದ ಸಮಯ ಇದೇ ಆಗಿದೆ : ತತೋ ಭೋಜನಪಾತ್ರಜಲಪಾತ್ರಾದಿ ದಾನಾನಿ । -ಧರ್ಮಸಿಂಧು

ಕನ್ಯೆಯ ಮೇಲಿನ ಜವಾಬ್ದಾರಿಯನ್ನು ಸಂಪೂರ್ಣವಾಗಿ ಕಳೆದುಕೊಳ್ಳುವುದು ಎಂದೂ ಸಾಧ್ಯವಿಲ್ಲ. ಆದರಂತೆ ತಾನು ದಾನಪಡೆದ ಇತರ ವಸ್ತುಗಳಂತೆ ಕನ್ಯೆಯನ್ನು ವರ ಕಾಣುವಂತಿಲ್ಲ ಎಂಬ ಎಚ್ಚರಿಕೆಯೂ ಇದರಲ್ಲಿದೆ. ವರನು ಪ್ರತಿಯಾಗಿ ನಾತಿಚರಾಮಿ ಎಂಬುದಾಗಿ ವಚನ ನೀಡಬೇಕು. ಇತರ ವಸ್ತುಗಳನ್ನು ತಾನು ಬಯಸಿದ ಇತರರಿಗೆ ದಾನ ನೀಡುವ ಹಕ್ಕು ದಾನಸ್ವೀಕರಿಸಿದವನಿಗೆ ಇರುವಂತೆ ಕನ್ಯಾದಾನ ಸ್ವೀಕರಿಸಿದ ವರನಿಗೆ ಸರ್ವಥಾ ಇರುವುದಿಲ್ಲ. ಅವನು ಕೊನೆಯವರೆಗೂ ಅವಳಿಗೂ ತಾನು ಮಾತ್ರ ಸ್ವಾಮಿಯಾಗಿರಬಲ್ಲನೇ ಹೊರತು ಇತರರ ಆಧೀನ್ಯಕ್ಕೆ ಅವಳನ್ನೆಂದೂ ಒಪ್ಪಿಸುವುದು ಸಾಧ್ಯವೇ ಇಲ್ಲ ಎಂಬುದು ಈ ಕನ್ಯಾದಾನದ ವಿಶೇಷ. ಮಹಾಭಾರತದ ದ್ರೌಪದೀದೇವಿಯ ಮಾತುಗಳಲ್ಲಿ ಈ ವಿಷಯ ಬಹಳವಾಗಿ ನಿರೂಪಿತವಾಗಿದೆ[1]. ಕಾರಣಾಂತರದಿಂದ ಗಂಡನೆನ್ನಿಸಿದವನು ಇನ್ನೊಬ್ಬರಿಗೆ ಅಡಿಯಾಳಾಗುವ ಪ್ರಸಂಗ ಒದಗಿದರೂ ಅವನು ತನ್ನ ಪತ್ನಿಯನ್ನು ಮಾತ್ರ ಇತರರಿಗೆ ಅಡಿಯಾಳಾಗಿಸುವಂತಿಲ್ಲ. ಅವಳೇನಿದ್ದರೂ ಇವನ ವಶವರ್ತಿಯೇ ಹೊರತು ಇನ್ನೊಬ್ಬರ ವಶವರ್ತಿಯಾಗಿ ಯಾವ ಕಾರಣಕ್ಕೂ ಸೇರು- ವಂತಿಲ್ಲ ಎಂಬ ಅತ್ಯಂತ ವಿಶಿಷ್ಟವಾದಂತಹ ಹಿರಿಮೆಯನ್ನು ಕನ್ಯಾದಾನಕ್ಕೆ ಸಂಬಂಧಿಸಿದಂತೆ ಶಾಸ್ತ್ರಗಳು ಸಾರಿವೆ ಎಂಬುದು ಗಮನಾರ್ಹ : ಸಹೈವ ಕರ್ಮ ಕರ್ತವ್ಯಂ ಪತೌ ದಾಸೇ ಹಿ ಭಾರ್ಯಯಾ - ಮ.ಭಾ.ತಾ.ನಿ.(೨೧/೩೨೭) ಹಿಂದೆ ಹೇಳಿದಂತೆ ಈ ಸಮಯ- ದಲ್ಲೇ ಕನ್ಯಾಪಿತೃವು ವರನಿಗೆ ಯಥಾಶಕ್ತಿ ದಕ್ಷಿಣೆಯನ್ನು ನೀಡಬೇಕು; ಅದಕ್ಕಾಗಿ ವರ ಅಥವಾ ಅವನ ಕಡೆಯವರು ಒತ್ತಡವನ್ನು ಹೇರುವಂತಿಲ್ಲ ಎಂಬುದನ್ನು ಗಮನಿಸಬೇಕು.

## ಕನ್ಯಾದಾನದ ಅಂಗವಾದ ವಿವಿಧ ದಾನಗಳು

ಕನ್ಯಾದಾನವು ಈ ಮುನ್ನ ತಿಳಿಸಿದಂತೆ ಮಹಾದಾನಗಳಲ್ಲೊಂದು. ಇದು ವಿಶೇಷ ಫಲಪ್ರದವಾಗಲು ಇದರ ಅಂಗವಾಗಿ ಗೋದಾನ, ಅಂಗುಲೀಯಕದಾನ, ಕುಂಡಲದಾನ, ವಲಯದಾನ, ಜಲಪಾತ್ರದಾನ, ಕಂಚಿನಪಾತ್ರೆಯ ದಾನ, ಕಂಚುಬೆಳ್ಳಿಪಾತ್ರಗಳ ದಾನ, ಗಜ, ಅಶ್ವ, ಭೂಮಿ, ಸುವರ್ಣ ಮೊದಲಾದ ಇತರ ಅನೇಕ ದಾನಗಳು ವಿಹಿತವಾಗಿವೆ. ಅವುಗಳಲ್ಲಿ ಗೋದಾನ ಮೊದಲಾದ ಕೆಲವು ಮುಖ್ಯದಾನಗಳ ಮಂತ್ರಗಳು ಹೀಗಿವೆ :

ಯಜ್ಞಸಾಧನಭೂತಾ ಯಾ ವಿಶ್ವಸ್ಯಾಘೌಘನಾಶಿನೀ ।<br>
ವಿಶ್ವರೂಪಧರೋ ದೇವಃ ಪ್ರೀಯತಾಮನಯಾ ಗವಾ ॥ -ಗೋದಾನ

ಇಂದ್ರಾದಿಲೋಕಪಾಲಾನಾಂ ಯಾ ರಾಜ್ಯಮಹಿಷೀ ಪ್ರಿಯಾ ।<br>
ಮಹಿಷಾಸುರಜನನೀ ಸಾಽಸ್ತು ಮೇ ಸರ್ವಕಾಮದಾ ॥ -ಮಹಿಷೀದಾನ

---

೧. ಸಮಾನಧರ್ಮಿಣೀಮಾಹುರ್ಭಾರ್ಯಾಂ ಯಸ್ಮಾದ್ದ್ವಿಪಶ್ಚಿತಃ ।<br>
ಸಹೈವ ಕರ್ಮ ಕರ್ತವ್ಯಂ ಪತೌ ದಾಸೇ ಹಿ ಭಾರ್ಯಯಾ ।<br>
ದಾಸೀತ್ವಂ ನ ಪೃಥಜ್ ಮೇ ಸ್ಯಾತ್ ಜಿತೇಽಪಿ ಹಿ ಪತೌ ತತಃ ॥ -(೨೧/೩೩೬-೩೩೭)

ಮಹಾರ್ಣವಸಮುತ್ಪನ್ನ ಉಚ್ಚೈಃಶ್ರವಸಪುತ್ರಕ ।
ಸೋಪಸ್ಕರಸ್ತ್ವಂ ವಿಪ್ರಾಯ ದತ್ತಃ ಶಾಂತಿಂ ಪ್ರಯಚ್ಛ ಮೇ ॥
-ಖಲೀನಾದ್ಯುಪಸ್ಕರಸಹಿತಸ್ಯಾಶ್ವಸ್ಯ

ಸುಪ್ರತೀಕಗಜೇಂದ್ರ ತ್ವಂ ಸರಸ್ವತ್ಯಾಽಭಿಷೇಚಿತಮ್ ।
ಇಂದ್ರಸ್ಯ ವಾಹನಂ ಶಶ್ವತ್ಸರ್ವದೇವೈಃ ಸುಪೂಜಿತಮ್ ॥
ವಿಪ್ರ ತುಭ್ಯಂ ದದಾಮೀಮಂ ತೇನ ಶಾಂತಿಂ ಪ್ರಯಚ್ಛ ಮೇ ॥ -ಗಜದಾನ

ಇಯಂ ದಾಸೀ ಮಯಾ ತುಭ್ಯಂ ಶ್ರೀವತ್ಸ ಪ್ರತಿಪಾದಿತಾ ।
ಸದಾ ಕರ್ಮಕರೀ ಹೃದ್ಯಾ ಯಥೇಷ್ಟಂ ಭದ್ರಮಸ್ತು ಮೇ ॥ -ದಾಸೀದಾನ

ಅಯಂ ದಾಸೋ ಮಯಾ ತುಭ್ಯಂ ಶ್ರೀವತ್ಸ ಪ್ರತಿಪಾದಿತಃ ।
ಸದಾ ಕರ್ಮಕರೋ ಹೃದ್ಯೋ ಮಮ ಶಾಂತಿಂ ಪ್ರಯಚ್ಛತು ॥ -ದಾಸದಾನ

ಸರ್ವಸಸ್ಯಾಶ್ರಯಾ ಭೂಮಿರ್ವರಾಹೇಣ ಸಮುದ್ಧೃತಾ ।
ಅನಂತಸಸ್ಯಫಲದಾ ಮಮ ಶಾಂತಿಂ ಪ್ರಯಚ್ಛತು ॥ -ಭೂಮಿದಾನ

ಅನೂನಂ ಶಯನಂ ನಿತ್ಯಮನೂನಾಂ ಶ್ರಿಯಮುನ್ನತಿಮ್ ।
ಸೌಭಾಗ್ಯಂ ದೇಹಿ ಮೇ ನಿತ್ಯಂ ಶಯ್ಯಾದಾನೇನ ಕೇಶವ ॥
-ಸೋಪಸ್ಕರಶಯ್ಯಾದಾನ

ಸೌವರ್ಣಂ ಹಸ್ತವಲಯಂ ರೂಪಕಾಂತಿಸುಖಪ್ರದಮ್ ।
ವಿಭೂಷಣಂ ಪ್ರದಾಸ್ಯಾಮಿ ವಿಭೂಷಯತು ಮಾಂ ಸದಾ ॥
-ವಲಯಾದಿಭೂಷಣದಾನ

ಹಿರಣ್ಯಗರ್ಭಸಂಭೂತಂ ಸೌವರ್ಣಂ ಚಾಂಗುಲೀಯಕಮ್ ।
ಸರ್ವಪ್ರದಂ ಪ್ರಯಚ್ಛಾಮಿ ಪ್ರೀಣಾತು ಕಮಲಾಪತಿಃ ॥ -ಅಂಗುಲೀಯಕದಾನ

ಕ್ಷೀರೋದಮಥನೇ ಪೂರ್ವಮುದ್ಧೃತಂ ಕುಂಡಲದ್ವಯಮ್ ।
ಶ್ರಿಯಾ ಸಹ ಸಮುದ್ಭೂತಂ ದದೇ ಶ್ರೀಃ ಪ್ರೀಯತಾಮಿತಿ ॥ -ಕುಂಡಲದಾನ

ಕಾಂಚನಂ ಹಸ್ತವಲಯಂ ರೂಪಕಾಂತಿಸುಖಪ್ರದಮ್ ।
ವಿಭೂಷಣಂ ಪ್ರದಾಸ್ಯಾಮಿ ವಿಭೂಷಯತು ಮೇ ಸದಾ ॥ -ವಲಯದಾನ

ಪರಾಪವಾದಪೈಶೂನ್ಯಾದಭಕ್ಷ್ಯಸ್ಯ ಚ ಭಕ್ಷಣಾತ್ ।
ಉತ್ಪನ್ನಪಾಪಂ ದಾನೇನ ತಾಮ್ರಪಾತ್ರಸ್ಯ ನಶ್ಯತು ॥ -ತಾಮ್ರಜಲಪಾತ್ರದಾನ

ಯಾನಿ ಪಾಪಾನಿ ಕಾಮ್ಯಾನಿ ಕಾಮ್ಯೋತ್ಥಾನಿ ಕೃತಾನಿ ಚ ।
ಕಾಂಸ್ಯಪಾತ್ರಪ್ರದಾನೇನ ತಾನಿ ನಶ್ಯಂತು ಮೇ ಸದಾ ॥ -ಕಾಂಸ್ಯಪಾತ್ರದಾನ

ಅಗಮ್ಯಾಗಮನಂ ಚೈವ ಪರದಾರಾಭಿಮರ್ಶನಮ್ ।
ರೌಪ್ಯಪಾತ್ರಪ್ರದಾನೇನ ತಾನಿ ನಶ್ಯಂತು ಮೇ ಸದಾ ॥ -ರೌಪ್ಯಪಾತ್ರದಾನ

ಜನ್ಮಾಂತರಸಹಸ್ರೇಷು ಯತ್ಕೃತಂ ಪಾತಕಂ ಮಯಾ ।
ಸ್ವರ್ಣಪಾತ್ರಪ್ರದಾನೇನ ತಾನಿ ನಶ್ಯಂತು ಮೇ ಸದಾ ॥ -ಸ್ವರ್ಣಪಾತ್ರದಾನ

ಹಿರಣ್ಯಗರ್ಭಗರ್ಭಸ್ಥಂ ಹೇಮಬೀಜಂ ವಿಭಾವಸೋಃ ।
ಅನಂತಪುಣ್ಯಫಲದಮತಃ ಶಾಂತಿಂ ಪ್ರಯಚ್ಛತು ॥ -ಹಿರಣ್ಯದಾನ

ಪೂರಿತಂ ಪೂಗಪೂಗೇನ ನಾಗವಲ್ಲೀದಲಾನ್ವಿತಮ್ ।
ಪೂರ್ಣೇನ ಚೂರ್ಣಪಾತ್ರೇಣ ಕರ್ಪೂರಪಿಷ್ಟಕೇನ ಚ ।
ಸಪೂಗಖಂಡನಂ ದಿವ್ಯಂ ಗಂಧರ್ವಾಪ್ಸರಸಾಂ ಪ್ರಿಯಮ್ ।
ದದೇ ದೇವನಿರಾತಂಕಂ ತ್ವತ್ಪ್ರಸಾದಾತ್ ಕುರುಷ್ವ ಮಾಮ್ ॥ -ತಾಂಬೂಲದಾನ

....

ಲಕ್ಷ್ಮೀಪ್ರಿಯಾ ಚ ಲಕ್ಷ್ಮೀದಾ ಲಕ್ಷ್ಮೀವ ಸುಜನಪ್ರಿಯಾ ।
ಸೌಭಾಗ್ಯದಾ ವರಸ್ತ್ರೀಣಾಂ ಹರಿದ್ರೇ ಶ್ರೀಃ ಸದಾಽಸ್ತು ಮೇ ॥ -ಹರಿದ್ರಾ

ಜರಾ ನೋ ಜಾಯತೇ ಯಸ್ಮಾನ್ಮಂಡನಂ ಶುಭಕರ್ಮಸು ।
ತಸ್ಮಾಜ್ಜೀರಕದಾನೇನ ಪ್ರೀಯತಾಂ ಗಿರಿಜಾ ಮಮ ॥ -ಜೀರಿಗೆ

ಕಂಚುಕೀವಸ್ತ್ರಯುಗ್ಮೈಶ್ಚ ತಥಾ ಕರ್ಣಾವತಂಸಕೈಃ ।
ಕಂಠಸೂತ್ರೈಶ್ಚ ಭೂಷಾಭಿಃ ಪ್ರೀಯತಾಂ ನಿಮಿನಂದಿನೀ ॥ -ಸೌಭಾಗ್ಯದ್ರವ್ಯದಾನ

## ಪುರೋಹಿತರ ಕರ್ತವ್ಯ

ವಧೂ ಹಾಗೂ ವರ ಇಬ್ಬರ ಕಡೆಯೂ ಪ್ರತ್ಯೇಕ ಪುರೋಹಿತರು ಅಗತ್ಯ. ವಿವಾಹ ಮಂಟಪದಲ್ಲಿ ವಧೂವರರು ಪರಸ್ಪರ ಎದುರಾಗುವ ಮುನ್ನದ ಕಾರ್ಯಗಳನ್ನು ಆಯಾ ಪಕ್ಷದ ಪುರೋಹಿತರು ಆಯಾ ಪಕ್ಷದವರಿಗೆ ನಡೆಸಿಕೊಡುವ ಹೊಣೆ ಹೊತ್ತಿರುವರು. ಪ್ರಸ್ತುತ ಕನ್ಯೆಯನ್ನು ಧಾರೆಯೆರೆಯುವವರೆಗೂ ವರನ ಕಡೆಯ ಪುರೋಹಿತ ಅದಕ್ಕೆ ಸಾಕ್ಷಿಯಂತಿದ್ದು ಆ ಧಾರೆಯ ಕಾರ್ಯ ಪೂರೈಸುತ್ತಲೇ ಮುಂದಿನ ಕಾರ್ಯಭಾರದ ಸೂತ್ರವನ್ನು ತಾನು ವಹಿಸಿಕೊಳ್ಳಬೇಕು. ವಾಲ್ಮೀಕಿ ರಾಮಾಯಣದಲ್ಲಿ ಬಂದಿರುವಂತೆ ರಾಮನ ಕಡೆಯ ಪುರೋಹಿತಸ್ಥಾನದಲ್ಲಿ ಸ್ವಯಂ ವಸಿಷ್ಠರು ನೆಲೆಸಿದ್ದರು. ಜನಕರಾಜನ ಕಡೆಯ ಪೌರೋಹಿತ್ಯ ಶತಾನಂದರದಾಗಿತ್ತು. ವಿಶ್ವಾಮಿತ್ರರೊಂದಿಗೆ ರಾಮನನ್ನು ದಶರಥ ಕಳುಹಿಸಿದ್ದರಿಂದ ವಸಿಷ್ಠರೊಂದಿಗೆ ವಿಶ್ವಾಮಿತ್ರರೂ ದಶರಥನ ಪಕ್ಷದ ಪೌರೋಹಿತ್ಯ ವಹಿಸಿದ್ದರು. ಆದರೆ ವಿಶ್ವಾಮಿತ್ರರ ಸಮ್ಮತಿಯೊಂದಿಗೆ ವಸಿಷ್ಠರೇ ದಶರಥನ ಕಡೆಯ ಪುರೋಹಿತರಲ್ಲಿ ಪ್ರಧಾನ ಎನ್ನಿಸಿದ್ದರು. ಕನ್ಯೆಯ ಕಡೆಯವರ ಸಂಪ್ರದಾಯಗಳು ಧಾರೆಯೊಂದಿಗೆ ಮುಕ್ತಾಯವಾಗಿ ಮುಂದಿನ ಸಂಪ್ರದಾಯಗಳೆಲ್ಲಾ ವರನ ಕಡೆಯ ಸಂಪ್ರದಾಯಕ್ಕನುಗುಣವಾಗಿ ನಡೆಯುವುದು ಶಾಸ್ತ್ರಗಳ ವಿಧಿ.

# ಕಂಕಣಬಂಧನ

ವಧೂವರರ ಪರಸ್ಪರ ನಿರೀಕ್ಷಣದ ಅನಂತರ ಮಾಲಿಕಾರೋಪಣ, ಎಂದರೆ [೧]ವಧೂವರರು ಪರಸ್ಪರ ಮಾಲೆಗಳನ್ನು ಹಾಕಿಕೊಳ್ಳುವುದು ಎಂದರ್ಥ. ಇದರ ಬಳಿಕ ನಡೆಯಬೇಕಾದದ್ದು ಕಂಕಣಬಂಧನ. ಬ್ರಾಹ್ಮಣರು ವಧೂವರರ ಸುತ್ತಲೂ ಕುಳಿತು, ಹಾಲಿನಲ್ಲಿ ನೆನೆಸಿದ ಎರಡೆಳೆಯ ಬಿಳಿ ದಾರದಿಂದ ದಂಪತಿಗಳ ಕಂಠಪ್ರದೇಶಕ್ಕೆ ಬರುವಂತೆ ಈಶಾನ್ಯದಿಂದ ಪ್ರಾರಂಭಿಸಿ, ಪ್ರದಕ್ಷಿಣಾಕಾರವಾಗಿ, ಪರಿತ್ವಾ ಗಿರ್ವಣೋ ಗಿರಃ ಎಂಬ ಮಂತ್ರದಿಂದ ಸುತ್ತಬೇಕು. ಆ ಬಳಿಕ ಅದನ್ನು ಅಭಿಮಂತ್ರಿಸಿ, ಎರಡನೇ ಸಲ ಸುತ್ತಿದ ಕಂಕಣವನ್ನು ಕಂಠದ ಮೇಲಿಂದಲೂ, ಮೊದಲನೆಯ ಸಲ ಸುತ್ತಿದ ಕಂಕಣವನ್ನು ಕಟಿಪ್ರದೇಶದ ಕೆಳಗಿನಿಂದಲೂ ತೆಗೆಯಬೇಕು. ಆ ಎರಡು ಸೂತ್ರಗಳಿಗೂ ಕಂಬಳಿಯ ಎಳೆಯನ್ನು ಸೇರಿಸಿ, ಅರಿಶಿನದ ಕೊನೆಯನ್ನು ಕಟ್ಟಿ ಲೇಪಿಸಬೇಕು. ಅವುಗಳನ್ನು ಮಾಂಗಲ್ಯವನ್ನೂ ಜೊತೆಯಲ್ಲಿರಿಸಿ, ಪೂಜಿಸಿ, ಬ್ರಾಹ್ಮಣರಿಂದ ಆಶೀರ್ವಚನವನ್ನು

---

೧. ಅಥೋ ಕರಾಭ್ಯಾಂ ಪ್ರತಿಗೃಹ್ಯ ಮಾಲಾಮಮ್ಲಾನಪದ್ಮಾಂ ಜಲಜಾಯತಾಕ್ಷೀ ।
ಉಪೇತ್ಯ ಮಂದಂ ಲಲಿತೈಃ ಪದೈಸ್ತಾಂ ತದಂಸ ಆಸಜ್ಯ ಚ ಪಾರ್ಶ್ವತೋಽಭವತ್ ॥
-ಮ.ಭಾ.ತಾ.ನಿ.(೪/೨೮)

ಆಕಂಠಮಾಪಾದತಲಾನ್ಮುರಾರೇರ್ನೇತ್ರಾಂತನೀಲೋತ್ಪಲಚಾರುಮಾಲಾಮ್ ।
ಶ್ರೀಃ ಸಂದಧೇ ತತ್ಕ್ಷಣಹೃಷ್ಟರೋಮಸತ್ಕಂಚುಕಂ ಶ್ರೀಪತಿರಾತ್ಮಪತ್ನ್ಯಾಮ್ ॥....
ಪುತ್ರೋ ಯಸ್ಯ ಸ ಪದ್ಮಭೂಃ ಫಣಿಪತಿಃ ಶಯ್ಯಾ ಖಗೇಶೋ ರಥಃ
ಶಂಭುರ್ಯಚ್ಚರಣಾಂಬುಮೌಲಿರಗಭಿತ್ ತದ್ದತ್ತಸಾಮ್ರಾಜ್ಯಭುಕ್ ।
ನಿತ್ಯಂ ಯತ್ಪದಸಂಗತೌ ವಿಧುರವೀ ಯದ್ವಲ್ಲಭಾ ಶ್ರೀವಧೂ-
ಸ್ತಂ ವರ್ಯಂ ವರಯಾಂಬಭೂವ ಸುದತೀ ಸಾ ದ್ವಾರಕಾನಾಯಕಮ್ ॥
ಯಾ ವೈ ಚಂಪಕಸಂಪದಾಽಬ್ಜವಸತೇರ್ದೂರ್ವಾಶ್ರಿಯಾ ಸ್ವಾತ್ಮನಃ
ಕೇತಕ್ಯಾ ವಿಭವೇನ ಕೃತ್ತಿವಸನಸ್ಯಾಂಭೋಜಕಾಂತ್ಯಾ ವಿಧೋಃ ।
ಸನ್ನೀಲೋತ್ಪಲಶೋಭಯಾ ದಿನಮಣೇಃ ಶ್ರೀಮತ್ತುಲಸ್ಯಾಽಮತಾ
ಹೇರಂಬಸ್ಯ ಹರೇಃ ಪರಂ ಸಮುಚಿತಾ ಸಾ ಮಾಲಿಕಾ ಶೋಭತೇ ॥
ಹರೇಃ ಪ್ರಸಾದೈಕಭುಜಾಂ ಸುರಾಣಾಮಿಮಾಂ ಪ್ರದಾಸ್ಯಾಮಿ ಕಥಂ ತ್ವಿತೀವ ।
ರಮಾ ಪ್ರಮೋದೋತ್ಥಿತರೋಮರಾಜಿಃ ಸಮರ್ಪಯಾಮಾಸ ಮುಕುಂದಕಂಠೇ ॥
ಸಾ ಧಾರಾಂಬುಕದಂಬಕೇನ ಸಹ ಸುಪ್ರೇಮಾಶ್ರುಧಾರಾಂ ಹರೇ-
ರ್ಭ್ರಾಜನ್ಮಾಲಿಕಯಾ ಸಮಂ ಪ್ರಣಯಸನ್ಮಾಲಾಂ ಸುನೀರಾಜನಮ್ ।
ನೇತ್ರಾಂತೇನ ಶುಚಿಸ್ಮಿತಾಽಮೃತರಸೈರ್ನೈವೇದ್ಯಮಾವೇದ್ಯ ತ-
ತ್ಪಾರ್ಶ್ವಂ ಮಂದಮುಪಾಶ್ರಯತ್ಪಲಮಿವ ವ್ಯಾಲೋಲಹಾರೋಜ್ಜ್ವಲಾ ॥
ನಾರ್ಯೋಽಕ್ಷತಾನ್ ಪ್ರವವೃಷುರ್ನವಕುಂಕುಮಾಭಾನ್‌ಸಂಗೀತಮಂಗಲಕಥಾಃ ಸಮಲಂಕೃತಾಂಗ್ಯಃ।
ಸೌವರ್ಣವಿಷ್ಟರಗತೌ ಸದಯೈರಪಾಂಗೈಃಕನ್ಯಾವರೌ ಚ ಫಲಮಕ್ಷಯಮೇವ ತಾಸಾಮ್ ॥
-ರುಗ್ಮಿಣೀಶವಿಜಯ(೧೬/೩೮-೪೫)

ಪಡೆದು, ವಧುವು ವರನ ಕೈಗೂ, ವರನು ವಧುವಿನ ಕೈಗೂ [೧]ಕಟ್ಟಬೇಕು. ಈ ಕಂಕಣಕಟ್ಟಿದ ಬಳಿಕ ವಧೂವರರಲ್ಲಿ ಕ್ರಮವಾಗಿ ಲಕ್ಷ್ಮೀನಾರಾಯಣರ ಸನ್ನಿಧಾನ. ಆ ಬಳಿಕ ಅಕ್ಕಿಧಾರೆ.

ಘೃತಮಿಶ್ರಿತವಾದ ಕ್ಷೀರವಿರುವ ಒಂದು ಪಾತ್ರೆ, ಅದರ ಪಕ್ಕದಲ್ಲಿ ಅಕ್ಷತಾಪಾತ್ರೆ. ವರನು ಕೈ ಒದ್ದೆ ಮಾಡಿಕೊಂಡು ವಧುವಿನ ಹಸ್ತಕ್ಕೆ ೨ಸಲ ಹಾಲನ್ನು ಚಿಮುಕಿಸುವನು. ಬಳಿಕ ಅವುಗಳ ಕೈಗೆ ಬಿಳಿತಂಡುಲಗಳನ್ನು ೨ ಬಾರಿ ಹಾಕುವನು ಬಳಿಕ ಮತ್ತೆ ಅಭಿಗಾರ. ಬಳಿಕ ವರನು ಹಸ್ತದಲ್ಲಿ ಅಕ್ಕಿಯನ್ನು ಹಿಡಿದು ಅಕ್ಕಿ ತುಂಬಿದ ವಧುವಿನ ಕೈಯ ಮೇಲೆ ತನ್ನ ಬೊಗಸೆಯನ್ನಿರಿಸುವನು. ಬಳಿಕ ಕನ್ಯೆಯು ತನ್ನ ಕೈಯಲ್ಲಿನ ಅಕ್ಕಿಕಾಳುಗಳನ್ನು ವರನ ಶಿರಸ್ಸಿನ ಮೇಲೆ ಸುರಿಸುವನು. ಬಳಿಕ ವರ ತಾನು ಅವಳ ತಲೆಯ ಮೇಲೆ ಅಕ್ಕಿಯನ್ನು ಸುರಿಯುವನು. ಯಜ್ಞ ಭಗ ಧರ್ಮ ಶ್ರೀ ಯಶಸ್ಸು ಪ್ರಜೆ ಇವುಗಳನ್ನು ಪರಸ್ಪರ ಹಾರೈಸಿಕೊಳ್ಳುವರು. ಹೀಗೆ ೩ ಬಾರಿ ಅಕ್ಕಿಧಾರೆ ಪೂರೈಸುವರು.

## ಮಾಂಗಲ್ಯಧಾರಣೆ

ವಟುವಿಗೆ ಯಜ್ಞೋಪವೀತದಂತೆ ವಧುವಿಗೆ ಮಾಂಗಲ್ಯ. ಕಾಲುಂಗುರಗಳು ವಧುವಿಗೆ ಮತ್ತೊಂದು ಬಗೆಯ ವಿಶೇಷ. ಯಜ್ಞೋಪವೀತವು ಉಪನೀತನಾದುದಕ್ಕೆ ಸಂಕೇತವಾದಂತೆ ಮಾಂಗಲ್ಯವು ಸ್ತ್ರೀಯು ವಿವಾಹಿತೆಯಾಗುವುದರ ಸಂಕೇತ. ಸಾಮಾನ್ಯವಾಗಿ ಮಾಂಗಲ್ಯಧಾರಣೆಯೇ ವಿವಾಹದ ಅತ್ಯಂತ ಪ್ರಮುಖವಾದ ಅಂಗ ಎಂಬ ಅರ್ಥದಲ್ಲಿಯೇ ರೂಢಿಯಲ್ಲಿ ಬಂದಿರುವುದು ಇದಕ್ಕೆ ಪೋಷಕ. ಮಾಂಗಲ್ಯದಲ್ಲಿ ಬ್ರಹ್ಮ ವಿಷ್ಣು ಹಾಗೂ ಶಿವನ ಸಂಕೇತವಾಗಿ ಮೂರು ಎಳೆಗಳು ಇರಬೇಕು. ಇದು ಸಹ ಯಜ್ಞೋಪವೀತದ ಮೂರು ತಂತುಗಳಿಗೆ ಹೋಲುವಂತಹುದು. ಅದರಲ್ಲಿ ೩ ರತ್ನಗಳು ಇರಬೇಕು. ಸ್ತ್ರೀಯರಿಗೆ ಇತರ ಎಲ್ಲ ಆಭರಣಗಳಿಗಿಂತ ಮುಖ್ಯವಾದ ಆಭರಣವೆಂದರೆ ಈ ಮಾಂಗಲ್ಯವೇ. ಅನಿವಾರ್ಯ ಕಾರಣಗಳಿಂದ ಮಾಂಗಲ್ಯ ತಂತು ಕಳಚಿದಾಗ ಅದನ್ನು ಪುನಃ ಸಿದ್ಧಪಡಿಸುವ ವರೆಗೂ ಆ ಜಾಗದಲ್ಲಿ ಅರಿಶಿನಕೊಂಬನ್ನು ಕಟ್ಟಿಕೊಳ್ಳುವುದು ವಿಧಿ.

ಮಾಂಗಲ್ಯವನ್ನು ಕಟ್ಟುವ ಮುನ್ನ ಅದನ್ನು ಯಜ್ಞೋಪವೀತದಂತೆ ವೈದಿಕಮಂತ್ರಗಳಿಂದ ಅಭಿಮಂತ್ರಿಸಬೇಕು. ಅದನ್ನು ದೇವಪೂಜೆ, ಪಾಠಪ್ರವಚನಗಳಿಂದ ಸಿದ್ಧಿಪಡೆದ ವಿಪ್ರಶ್ರೇಷ್ಠರು[೨] ತಮ್ಮ ಕೈಯಿಂದ ಸ್ಪರ್ಶಿಸಿ, ನಿಜವಾದ ಅರ್ಥದಲ್ಲಿ ಅದು ಮಂಗಲಕರ-

---

೧. ಅಥ ಬ್ರಾಹ್ಮಣಾ ವಧೂವರಯೋಶ್ಚತುರ್ದಿಕ್ಷು ಸ್ಥಿತ್ವಾ ದುಗ್ಧಾಕ್ತೇನ ದ್ವಿಗುಣಶುಕ್ಲಸೂತ್ರೇಣ ದಂಪತ್ಯೋಃ ಕಂಠದೇಶೇ ಪ್ರಾಗುದೀಚೀಮಾರಭ್ಯ ಪ್ರದಕ್ಷಿಣಾವರ್ತೇನ ''ಪರಿತ್ವಾ ಗಿರ್ವಣೋ ಗಿರಃ'' ಇತಿ ಮಂತ್ರೇಣ।

೨. ಬ್ರಾಹ್ಮಣಾನಾಂ ಕರಸ್ಪರ್ಶಾತ್ ರಾಜ್ಞಶ್ಚಾಪಿ ಮಹಾತ್ಮನಃ।

ವೆನ್ನಿಸುವಂತೆ ಮಾಡಬೇಕು. ಇದರ ಬಗ್ಗೆ ಉಲ್ಲೇಖ ಭವಿಷ್ಯೋತ್ತರಪುರಾಣದ ವೆಂಕಟೇಶಮಹಾತ್ಮ್ಯದಲ್ಲಿ ಬಂದಿದೆ. ಹಾಗೆ ಸಿದ್ಧವಾದ ಮಾಂಗಲ್ಯವನ್ನು ಐದೆಯರು ತೆಗೆದುಕೊಂಡು ವರನ ಕೈಯಲ್ಲಿರಿಸಬೇಕು. ಈ ಕೆಳಗಿನ ಮಂತ್ರಗಳನ್ನು ಪಠಿಸುತ್ತಾ ವರ ಅದನ್ನು ವಧೂವಿನ ಕತ್ತಿಗೆ ಕಟ್ಟಬೇಕು. ಅದನ್ನು ಭದ್ರಪಡಿಸುವ ಮುಂದಿನ ಕಾರ್ಯ ಮುತ್ತೈದೆಯರದು :

ಮಾಂಗಲ್ಯಂ ತಂತುನಾಽನೇನ ಭರ್ತೃಜೀವನಹೇತುನಾ ।
ಕಂಠೇ ಬಧ್ನಾಮಿ ಸುಭಗೇ ತ್ವಂ(ಸಾ) ಜೀವ ಶರದಾಂ ಶತಮ್ ॥

ಆ ಸಮಯದಲ್ಲಿ ಸಭೆಯಲ್ಲಿನ ಗುರುಹಿರಿಯರು ಮೊದಲಾಗಿ ಸಕಲರೂ ವಧೂವರರ ಮೇಲೆ ಅಕ್ಷತೆಕಾಳನ್ನು ಹಾಕಿ ಹರಸಬೇಕು. ಸೂರ್ಯಾವರ್ಗದ ಪಠನೆಯನ್ನು ವಿಪ್ರರು ಮಾಡುತ್ತಾ ವಧೂವರರ ತಲೆಯ ಮೇಲೆ ಹಾಕಬೇಕು.

## ಅಗ್ನಿಸಾಕ್ಷಿಕ ವಿವಾಹ

ಪ್ರತಿಯೊಂದು ಕಾರ್ಯಕ್ಕೂ ಸಹ ದೈವವು ವಿಧಿಸಿರುವ ಸಾಕ್ಷಿಗಳು ೧೨ (ಮಹಾಭಾರತ[೧]). ಅದರಲ್ಲಿ ಅಗ್ನಿಯು ಒಂದಾಗಿದೆ. ಅದರೊಂದಿಗೆ ದಿವ್ಯಸಾಕ್ಷಿ ಎಂದು ಪರಿಗಣಿತವಾಗಿರುವ ಸಾಕ್ಷಿಗಳಲ್ಲಿ ಅಗ್ನಿಗೆ ವಿಶೇಷ ಮಹತ್ವವಿದೆ.

ಛಾಂದೋಗ್ಯೋಪನಿಷತ್ತಿನಲ್ಲಿ ಪ್ರಸ್ತಾಪಿತವಾಗಿರುವ ಆತತ್ತ್ವಮಸಿ ವಾಕ್ಯದ ವಿವರಣ ರೂಪವಾದ ಒಂಭತ್ತು ದೃಷ್ಟಾಂತಗಳಲ್ಲಿ ಈ ಅಗ್ನಿದಿವ್ಯವೂ ಸೇರಿದೆ. ಇದರಿಂದ ಅಗ್ನಿಯು ಸಕಲ ಕರ್ಮಗಳಿಗೂ ಸಾಕ್ಷಿಯಾದ ವಿಶೇಷ ದೇವತೆ[೨].

---

ಬಬಂಧ ಪೂತಂ ಮಾಂಗಲ್ಯಸೂತ್ರಂ ಮಂತ್ರಾಭಿಮಂತ್ರಿತಮ್ ।
ಕಂಠೇ ಪದ್ಮಾವತೀದೇವ್ಯಾಃ ಶ್ರೀನಿವಾಸೋ ಜಗತ್ಪತಿಃ ॥
-ವೇಂಕಟೇಶಮಾಹಾತ್ಮ್ಯ, ಭವಿಷ್ಯೋತ್ತರಪುರಾಣ(೧೧/೩೬೪)

೧. ಆದಿತ್ಯಚಂದ್ರಾವನಿಲೋಽನಲಶ್ಚ ದ್ಯೌರ್ಭೂಮಿರಾಪೋ ಹೃದಯಂ ಯಮಶ್ಚ।
ಅಹಶ್ಚರಾತ್ರಿಶ್ಚ ಉಭೇ ಚ ಸಂಧ್ಯೇ ಧರ್ಮಶ್ಚ ಜಾನಾತಿ ನರಸ್ಯ ವೃತ್ತಮ್ ॥ -(೧/೯೮/೧೧)

೨. ಪುರುಷಂ ಸೋಮ್ಯೋತ ಹಸ್ತಗೃಹೀತಮಾನಯಂತಿ ಅಪಾಹಾರ್ಷೀತ್ ಸ್ತೇಯಮಕಾರ್ಷೀತ್ ಪರಶುಮಸ್ಮೈ ತಪತೇತಿ । ಸ ಯದಿ ತಸ್ಯ ಕರ್ತಾ ಭವತಿ ತತ ಏವಾನೃತಮಾತ್ಮಾನಂ ಕುರುತೇ ಸೋಽನೃತಾಭಿಸಂಧೋಽನೃತೇನಾತ್ಮಾನಮಂತರ್ಧಾಯ ಪರಶುಂ ತಪ್ತಂ ಪ್ರತಿಗೃಹ್ಣಾತಿ ಸ ದಹ್ಯತೇಽಥ ಹನ್ಯತೇ, ಅಥ ಯದಿ ತಸ್ಯಾಕರ್ತಾ ಭವತಿ ತತ ಏವ ಸತ್ಯಮಾತ್ಮಾನಂ ಕುರುತೇ । ಸತ್ಯಾಭಿಸಂಧಃ ಸತ್ಯೇನಾತ್ಮಾನಮಂತರ್ಧಾಯ ಪರಶುಂ ತಪ್ತಂ ಪ್ರತಿಗೃಹ್ಣಾತಿ ಸ ನ ದಹ್ಯತೇಽಥ ಮುಚ್ಯತೇ । ಏವಮೇವ ಖಲು ಸೋಮ್ಯ ಆಚಾರ್ಯವಾನ್ ಪುರುಷೋ ವೇದ । ಇತಿ ಸ್ಥಾನನವಕೇಽಪಿ ಭೇದ ಏವ ದೃಷ್ಟಾಂತಾಭಿಧಾನಾತ್ ॥ - ಛಾಂದೋಗ್ಯೋಪನಿಷತ್

ವಿವಾಹವು ಅಗ್ನಿಸಾಕ್ಷಿಕವಾಗಿ ನಡೆಯುವುದು ವಿಹಿತ. ಧರ್ಮಪತ್ನಿಯನ್ನು ಅಗ್ನಿ-ಸಾಕ್ಷಿಕವಾಗಿ ಕೈಹಿಡಿದವಳು ಎಂದು ಕರೆಯುವುದು ರೂಢಿಯಲ್ಲೂ ಬಂದಿದೆ. ಇದಕ್ಕೆ ಮುಖ್ಯಕಾರಣ ಕನ್ಯೆಯನ್ನು ಧಾರೆಯೆರೆಯುವುದು ದಾನವೆನ್ನಿಸಿರುವುದು. ಯಾವುದೇ ದಾನವೂ ಸಹ ಸಸಾಕ್ಷಿಕವಾಗಿ ನಡೆಯಬೇಕು. ಕನ್ಯಾದಾನವು ಮಹಾದಾನಗಳಲ್ಲೊಂದೆಂದು ಪರಿಗಣಿತವಾಗಿರುವುದರಿಂದ ಇದೂ ಸಹ ಅಗ್ನಿಸಾಕ್ಷಿಕವಾಗಿ ನಡೆಯುವುದೇ ಉಚಿತ. ಶ್ರೀರಾಮ ಸುಗ್ರೀವನಿಗೆ ರಕ್ಷಣೆಯ ವಾಗ್ದಾನ ನೀಡಿದ್ದೂ ಅಗ್ನಿಸಾಕ್ಷಿಕವಾಗಿ ಎಂಬ ಉಲ್ಲೇಖ ರಾಮಾಯಣದಲ್ಲಿದೆ[೧].

ವಿವಾಹವು ಅಗ್ನಿಸಾಕ್ಷಿಕವಾಗಲು ಮತ್ತೊಂದು ಕಾರಣವೂ ಸಹ ಉಂಟು. ಕನ್ಯೆಯು ವಿವಾಹವಾಗುವ ಮುನ್ನದ ಮೂರುಹಂತಗಳಲ್ಲಿ ಮೂವರು ದೇವತೆಗಳ ರಕ್ಷಣೆಯಲ್ಲಿ ಬೆಳೆಯುವಳು ಎಂಬುದು ಶಾಸ್ತ್ರವಚನ :

ಪುನಃಪತ್ನೀಮಗ್ನಿರದಾದಾಯುಷಾ ಸಹ ವರ್ಚಸಾ ।
ದೀರ್ಘಾಯುರಸ್ಯಾ ಯಃ ಪತಿರ್ಜೀವತಿ ಶರದಃ ಶತಮ್ ॥ -ಋಗ್ವೇದ (೧೦/೮೫/೩೯)
ಸೋಮಃ ಪ್ರಥಮೋ ವಿವಿಧೇ ಗಂಧರ್ವೋ ವಿವಿದ ಉತ್ತರಃ ।
ತೃತೀಯೋ ಅಗ್ನಿಷ್ಟೇ ಪತಿಸ್ತುರೀಯಸ್ತೇ ಮನುಷ್ಯಜಾಃ ॥ -ಋಗ್ವೇದ (೧೦/೮೫/೪೦)
ಸೋಮೋಽದದದ್ಗಂಧರ್ವಾಯ ಗಂಧರ್ವೋಽದದದಗ್ನಯೇ ।
ರಯಿಂ ಚ ಪುತ್ರಾಂಶ್ಚಾದಾದಗ್ನಿರ್ಮಹ್ಯಮಥೋ ಇಮಾಮ್ ॥
-ಋಗ್ವೇದ (೧೦/೮೫/೪೧)

ಎಂದರೆ ಕನ್ಯೆಯು[೨] ಹುಟ್ಟಿನಿಂದ ಮೊದಲ ಏಳುವರ್ಷಗಳವರೆಗೆ ಚಂದ್ರನ ಒಡೆತನದಲ್ಲೂ, ಅನಂತರದ ಹಂತದಲ್ಲಿ ಎಂದರೆ ಪ್ರೌಢೆಯಾಗುವವರೆಗೆ ಗಂಧರ್ವನ ಒಡೆತನದಲ್ಲೂ, ಆ ಬಳಿಕ ಅಗ್ನಿಯ ಒಡೆತನದಲ್ಲೂ ಬೆಳೆಯುವಳು. ನಾಲ್ಕನೆಯದು ತನ್ನ ಕೈಹಿಡಿದವನ ಒಡೆತನದಲ್ಲಿ.

---

೧. ಸಖ್ಯಂ ಚಕಾರ ಹುತಭುಕ್ಪ್ರಮುಖೇ ಚ ತಸ್ಯ ರಾಮೇಣ ಶಾಶ್ವತನಿಜಾರ್ತಿಹರೇಣ ಶೀಘ್ರಮ್ ।
-ಮ.ಭಾ.ತಾ.ನಿ.(೮೮/೨)

೨. ಕನ್ಯೆಯು ಹೀಗೆ ದೇವತೆಗಳ ಅಧೀನಳಾಗುವುದರಿಂದ ಅವಳಿಗೆ ವಿಶೇಷವಾದ ಶುದ್ಧಿ, ಮಧುರವಾದ ಮಾತು, ಭಕ್ಷ್ಯ ಭೋಜ್ಯಗಳಲ್ಲಿ ತುಸು ವಿನಾಯಿತಿಯನ್ನು ಕ್ರಮವಾಗಿ ಸೋಮ, ಗಂಧರ್ವ ಹಾಗೂ ಅಗ್ನಿಯಿಂದ ಲಭಿಸಿದವು ಎಂಬ ಮಾತು ವಸಿಷ್ಠಸ್ಮೃತಿಯಲ್ಲಿದೆ; ಎಂದರೆ ಹೀಗೆ ದೇವತೆಗಳಿಂದ ಕನ್ಯೆಯು ಅನುಗ್ರಹೀತಳಾಗುವಳೇ ಹೊರತು ದೋಷಕ್ಕೆ ಪಾತ್ರಳಾಗಳು ಎಂಬುದು ವಿಶೇಷ :
ತಾಸಾಂ ಸೋಮೋಽದದಾಚ್ಛೌಚಂ ಗಂಧರ್ವಃ ಶಿಕ್ಷಿತಾಂ ಗಿರಮ್ ।
ಅಗ್ನಿಶ್ಚ ಸರ್ವಭಕ್ಷ್ಯತ್ವಂ ತಸ್ಮಾನ್ನಿಷ್ಕಲ್ಮಷಾಃ ಸ್ತ್ರಿಯಃ ॥
ಪೂರ್ವಂ ಸ್ತ್ರಿಯಃ ಸುರೈರ್ಭುಕ್ತಾಃ ಸೋಮಗಂಧರ್ವವಹ್ನಿಭಿಃ ।
ಗಚ್ಛಂತಿ ಮನುಜಾನ್ ಪಶ್ಚಾತ್ ನೈತಾ ದುಷ್ಯಂತಿ ಧರ್ಮತಃ ॥ -(೨೮/೬,೫)

ಸೋಮನಿಂದ ಶುದ್ಧಿ ; ಗಂಧರ್ವನಿಂದ ಇಂಪಾದ ದನಿ ಹಾಗೂ ಮಾತುಗಾರಿಕೆ ; ಅಗ್ನಿಯಿಂದ ವಿವಾಹಯಜ್ಞಕ್ಕೆ ಅರ್ಹಳಾಗುವ ಹಿರಿಮೆಯನ್ನು ನೀಡುವರು. ಇದರಿಂದ ತಿಳಿಯುವಂತೆ ವಿವಾಹದ ಮುನ್ನದ ಅವಧಿಯಲ್ಲಿ ಅವಳ ಒಡೆತನ ಅಗ್ನಿಯದಾಗಿರುವುದು. ಆದ್ದರಿಂದ ಅಗ್ನಿಸಾಕ್ಷಿಕವಾಗಿಯೇ ವಿವಾಹವನ್ನು ಶಾಸ್ತ್ರಗಳು ವಿಧಿಸಿವೆ.

ಇದನ್ನು ಬಿಟ್ಟು ಕೇವಲ ನೋಂದಣಿಯ ಮೂಲಕ ವಿವಾಹವಾಗುವ ಪದ್ಧತಿ ಇಂದು ಸಂಪ್ರದಾಯಸ್ಥರಲ್ಲೂ ಕಾಣಿಸಿಕೊಳ್ಳತೊಡಗಿರುವುದು ವಿಷಾದಕರ. ಆಧುನಿಕ ಜಗತ್ತಿನ ಅಗತ್ಯದಂತೆ ನೋಂದಣಿ ಮಾಡಿಸಿಕೊಳ್ಳುವುದರಲ್ಲಿ ದೋಷವೇನಿಲ್ಲ. ಆದರೆ ಅಷ್ಟಕ್ಕೇ ಶಾಸ್ತ್ರದ ವಿಧಿವಿಧಾನ ಪೂರೈಸುವುದಿಲ್ಲ. ಅದಕ್ಕೆ ಶಾಸ್ತ್ರರೀತಿಯ ಅಗ್ನಿಸಾಕ್ಷಿಕ ವಿವಾಹವೇ ವಿಹಿತ. ಹಾಗೆ ನಡೆದಾಗ ದೇವತೆಗಳ ಸಾಕ್ಷಿಯ ಭಾಗ್ಯ ಲಭಿಸುವುದರಿಂದ ವಿವಾಹವು ವಿಚ್ಛೇದನಾದಿ ದುರಂತಕ್ಕೆ ಎಡೆನೀಡದಂತಾಗುವುದು. ಇದಕ್ಕೆ ತಪ್ಪಿ ನಡೆಯುವ ವಿವಾಹಗಳ ಸಂಖ್ಯೆ ಹೆಚ್ಚುತ್ತಿರುವುದರಿಂದಲೇ, ವಿಚ್ಛೇದನ[1]ಗಳೂ ಸಹ ಊಹಿಸಲಾಗದಷ್ಟು ಹೆಚ್ಚು ಪ್ರಮಾಣದಲ್ಲಿ ನಡೆಯುತ್ತಿವೆ. ದೈವದ ಶ್ರೀರಕ್ಷೆ ಇಲ್ಲವಾದಲ್ಲಿ ಬಾಳು ದುರಂತ-ವಾಗುವುದರಲ್ಲಿ ಆಚ್ಚರಿ ಏನಿದೆ?

---

೧. ವಿವಾಹವಿಚ್ಛೇದನವು ಶಾಸ್ತ್ರೀಯ ಪರಿಕಲ್ಪನೆಗೆ ಹೊರತಾದದ್ದೇನೂ ಅಲ್ಲ. ವರ ಅಥವಾ ವಧು-ವಿನಲ್ಲಿ ಅಪರಿಹಾರ್ಯವಾದ ದೋಷಗಳಿದ್ದಲ್ಲಿ ವಿಚ್ಛೇದನಕ್ಕೆ ಅವಕಾಶವಿದೆ.

ಧರ್ಮವಿಘ್ನಕರೀಂ ಭಾರ್ಯಾಮಸತೀಂ ಚಾತಿಕೋಪನಾಮ್ ।
ತ್ಯಜೇದ್ಧರ್ಮಸ್ಯ ರಕ್ಷಾರ್ಥಂ ತಥೈವಾಪ್ರಿಯವಾದಿನೀಮ್ ॥ -ಬ್ರಹ್ಮಪುರಾಣ

ವರಶ್ಚೇತ್ಕುಲಶೀಲಾಭ್ಯಾಂ ನ ಯುಜ್ಯೇತ ಕಥಂ ಚನ ।
ನ ಮಂತ್ರಃ ಕಾರಣಂ ತತ್ರ ನ ಚ ಕನ್ಯಾನೃತಂ ಭವೇತ್ ॥
ಸಮಾಕೃಷ್ಯ ತು ತಾಂ ಕನ್ಯಾಂ ಬಲಾದಕ್ಷತಯೋನಿಕಾಮ್ ।
ಪುನರ್ಗುಣವತೇ ದದ್ಯಾದಿತಿ ಶಾತಾತಪೋಽಬ್ರವೀತ್ ॥ -ನಾರದಸ್ಮೃತಿ

ಸ ತು ಯದ್ಯನ್ಯಜಾತೀಯಃ ಪತಿತಃ ಕ್ಲೀಬ ಏವ ವಾ ।
ವಿಕರ್ಮಾ ವಾ ಸಗೋತ್ರೋ ವಾ ದಾಸೋ ದೀರ್ಘಾಮಯೋಽಪಿ ವಾ ।
ಊಢಾಽಪಿ ದೇಯಾ ಸಾಽನ್ಯಸ್ಮೈ ಸಪ್ರಾವರಣಭೂಷಣಾ ॥ -ಕಾತ್ಯಾಯನಸ್ಮೃತಿ

ನಷ್ಟೇ ಮೃತೇ ಪ್ರವ್ರಜಿತೇ ಕ್ಲೀಬೇ ಚ ಪತಿತೇ ಪತೌ ।
ಪಂಚಸ್ವಾಪತ್ಸು ನಾರೀಣಾಂ ಪತಿರನ್ಯೋ ವಿಧೀಯತೇ ॥ -ಪರಾಶರಸ್ಮೃತಿ(೪/೨೫)

ಊಢಾಯಾಃ ಪುನರುದ್ವಾಹಂ ಜ್ಯೇಷ್ಠಾಂಶಂ ಗೋವಧಂ ತಥಾ ।
ಕಲೌ ಪಂಚ ನ ಕುರ್ವೀತ ಭ್ರಾತೃಜಾಯಾಂ ಕಮಂಡುಲುಮ್ ॥ -ಆದಿತ್ಯಪುರಾಣ

ದೇವರಾತ್ತು ಸುತೋತ್ಪತ್ತಿಂ ಗೋಮೇಧಂ ಚ ಕಮಂಡುಲುಮ್ ।
ಅಕ್ಷತಾಂ ಪೌರುಷಂ ಮೇಧಂ ಕಲೌ ಪಂಚ ವಿವರ್ಜಯೇತ್ ॥ -ಸ್ಮೃತಿ

ವಿಧಿವತ್ಪ್ರತಿಗೃಹ್ಯಾಪಿ ತ್ಯಜೇತ್ಕನ್ಯಾಂ ವಿಗರ್ಹಿತಾಮ್ ।
ವ್ಯಾಧಿತಾಂ ವಿಪ್ರದುಷ್ಟಾಂ ವಾ ಛದ್ಮನಾ ಚೋಪಪಾದಿತಾಮ್ ॥ -ಮನುಸ್ಮೃತಿ(೯/೭೨)

# ವಿವಾಹ ಹೋಮಗಳು

ಕಂಕಣಬಂಧದ ಬಳಿಕದ ಮುಖ್ಯ ಕಾರ್ಯಗಳು ಲಾಜಹೋಮ, ಪಾಣಿಗ್ರಹಣ ಇತ್ಯಾದಿ. ವಧೂ ಭಾರ್ಯೆ ಎನ್ನಿಸಲು ಅಗತ್ಯವಾದ ಹೋಮ ಲಾಜಹೋಮ. ಪಾಣಿಗ್ರಹಣ ಅನಂತರದ ಕಾರ್ಯ. ಗೃಹ್ಯಾಗ್ನಿ ಪರಿಗ್ರಹದಲ್ಲಿ ಪಾಲ್ಗೊಳ್ಳುವುದರಿಂದ ಪತ್ನೀ ಎನ್ನಿಸುವ ಯೋಗ ಲಭಿಸುವುದು. ಹೀಗೆ ಅವಳಿಗೆ ಪತಿಯೊಂದಿಗೆ ಸಕಲ ಧರ್ಮಕಾರ್ಯಗಳಲ್ಲೂ ಪಾಲ್ಗೊಳ್ಳುವ ಅರ್ಹತೆ ಲಭಿಸುವುದರಿಂದ ಅವಳಿಗೆ ಧರ್ಮಪತ್ನಿ ಎಂಬ ಹೆಸರು ಸಾರ್ಥಕವೆನ್ನಿಸುವುದು.

# ಹೆಸರಿನ ಬದಲಾವಣೆ

ವಿವಾಹದ ಬಳಿಕ ವಧುವಿನ ಹೆಸರನ್ನು ಬದಲಾಯಿಸುವ ಸಂಪ್ರದಾಯ ಹಲವೆಡೆ ಉಂಟು. ಅದು [೧] ವಿವಾಹದ ಅಂಗವಾದ ಸಂಸ್ಕಾರವೇನೂ ಅಲ್ಲ. ಆದರೆ ಕಾರಣಾಂತರ-ದಿಂದ ಹೆಸರು ಬದಲಾವಣೆ ಅಗತ್ಯವೆಂದರೆ ತಪ್ಪೇನೂ ಅಲ್ಲ. ಆದರೆ ಅದು ಕಡ್ಡಾಯ-ವೆಂದೇನೂ ಭಾವಿಸಬೇಕಿಲ್ಲ.

ಕೆಲವೊಮ್ಮೆ ನಾಮಕರಣದ ಹೆಸರು ಅಶಾಸ್ತ್ರೀಯವಾಗಿದ್ದಾಗ ಅದನ್ನು ವರನ ಮನೆಯವರು ಬದಲಾಯಿಸುವುದು ಯೋಗ್ಯವೇ ಎನ್ನಬಹುದು. ಅದು ಹೀಗೆ; ಸ್ತ್ರೀಯರಿಗೆ ನಕ್ಷತ್ರ, ನದಿ, ವೃಕ್ಷ, ಪರ್ವತ ಹಾಗೂ ಕೆಟ್ಟ ಹೆಸರುಗಳು ನಿಷಿದ್ಧ. ಒಂದುವೇಳೆ ಅಂತಹ ಹೆಸರುಗಳನ್ನು ಕನ್ಯೆ ಹೊಂದಿದ್ದಲ್ಲಿ ವಿವಾಹದ ನಂತರ ವಿಹಿತ ರೀತಿಯ ನಾಮಕರಣವನ್ನು ಮಾಡುವುದು ಉಚಿತವೇ ಸರಿ. ಅಥವಾ ತಮ್ಮ ಆಯ್ಕೆಯ ಶಾಸ್ತ್ರೀಯ ನಾಮ ಅಗತ್ಯವೆನಿಸಿದಲ್ಲಿ ಅದು ತಪ್ಪೇನಲ್ಲ.

ಆದರೆ ಕನ್ಯೆಗೆ ಯೋಗ್ಯಹೆಸರೇ ಇದ್ದಾಗಲೂ ಸಹ ಕೇವಲ ಪ್ರತಿಷ್ಠೆಯ ಸಂಕೇತವಾಗಿ ಸಲ್ಲದ ಹೆಸರನ್ನು ಇರಿಸುವ ಪ್ರಯತ್ನ ಮಾತ್ರ ಸರ್ವಥಾ ಕೂಡದು.

---

೧. ವೇದಾದಿಶಾಸ್ತ್ರಗಳಿಗೆ ವಿರುದ್ಧವೆನ್ನಿಸದ ದೇಶಾಚಾರ, ಕುಲಧರ್ಮಗಳು ಸಹ ಪ್ರಮಾಣವೆನ್ನಿಸುವವು:

ದೇಶಾಚಾರಕುಲಧರ್ಮಾ ಆಮ್ನಾಯೈರವಿರುದ್ಧಾಃ ಪ್ರಮಾಣಮ್ -ವಸಿಷ್ಠಸ್ಮೃತಿ

ಯೇಷು ದೇಶೇಷು ಯೇ ದೇವಾ ಯೇಷು ದೇಶೇಷು ಯೇ ದ್ವಿಜಾಃ ।
ಯೇಷು ದೇಶೇಷು ಯತ್ತೋಯಂ ಯಾ ಚ ಯತ್ರೈವ ಮೃತ್ತಿಕಾ ॥
ಯೇಷು ಸ್ಥಾನೇಷು ಯಚ್ಛೌಚಂ ಧರ್ಮಾಚಾರಶ್ಚ ಯಾದೃಶಃ ।
ತತ್ರ ತಾನ್ನಾವಮನ್ಯೇತ ಧರ್ಮಸ್ತತ್ರೈವ ತಾದೃಶಃ ।
ಯಸ್ಮಿನ್ ದೇಶೇ ಪುರೇ ಗ್ರಾಮೇ ತ್ರೈವಿದ್ಯನಗರೇಽಪಿ ವಾ ।
ಯೋ ಯತ್ರ ವಿಹಿತೋ ಧರ್ಮಸ್ತಂ ಧರ್ಮಂ ನ ವಿಚಾಲಯೇತ್ ॥ -ದೇವಲಸ್ಮೃತಿ

# ಲಾಜಹೋಮ

ವಧುವಿಗೆ ಗೃಹಿಣಿ ಎನ್ನಿಸುವ ಹಿರಿಮೆಯ ಪ್ರಾಪ್ತಿಗಾಗಿ ವಿಹಿತವಾದ ಹೋಮ ಈ ಲಾಜಹೋಮ[೧]. ವರನಿಗೆ ಔಪಾಸನಾಗ್ನಿಯ ಸ್ವೀಕಾರಕ್ಕೂ ಸಹ ಇದು ಅಗತ್ಯವೆನ್ನಿಸಿದೆ. ಆ ಹೋಮದ ಅಗ್ನಿ ಯೋಜಕ ಅಗ್ನಿ. ಅದನ್ನು ತಂದು ನೀಡುವವಳು ವಧುವಿನ ತಾಯಿಯ ಕರ್ತವ್ಯ. ದೇವತೆ ಪ್ರಜಾಪತಿ, ಅದಕ್ಕೆ ಘೃತಮಿಶ್ರಿತವಾದ ಲಾಜದಿಂದ ಆಹುತಿ. ಪವಮಾನಾಗ್ನಿ ಪ್ರಧಾನಾಗ್ನಿಗಳಿಗೆ ಆಜ್ಯಾಹುತಿ; ಅರ್ಯಮಾ, ವರುಣ ಹಾಗೂ ಪೂಷಾ ಈ ಮೂವರಿಗೆ ಲಾಜದ ಆಹುತಿ; ಲಾಜ(ಭತ್ತದ ಅರಳು)ದಂತೆ ದಂಪತಿಗಳ ಜೀವನ ಸಮೃದ್ಧವಾಗಿ ಅರಳಲಿ ಎಂಬುದರ ಸಂಕೇತ ಈ ಲಾಜಹೋಮ. ಇದನ್ನು ಪತಿಯಾದವನು ತನ್ನ ಪತ್ನಿಗೆ ನೀಡಿ ಅವಳು ಮೊರದಿಂದ ಅಗ್ನಿಗೆ ಅವಳಿಂದ ನೇರವಾಗಿ ಮಾಡಿಸುವ ಹೋಮ ಎಂಬುದು ಇದರ ವಿಶೇಷ. ಹಾಗೆ ಅರ್ಪಿಸುವ ಹೋಮವನ್ನು ಸ್ವೀಕರಿಸುವವರು ಮೇಲೆ ಹೇಳಿದ ದೇವತೆಗಳ ಪುತ್ರಿಯರು. ಅವರು ವಿವಾಹಕ್ಕೆಂದು ಸಂಭ್ರಮ-ದಿಂದಾಗಮಿಸಿದ ಅವರಿಗೆ ಸಲ್ಲುವ ಗೌರವ ಈ [೨]ಹೋಮ. ಸೂರ್ಯಾವರ್ಗವನ್ನು ಈ ಸಮಯದಲ್ಲೂ ಪಠಿಸುವುದು ವಿಹಿತ[೩].

---

೧. ನಾರ್ಯೋಽಕ್ಷತಾನ್ ಪ್ರವವೃಷುರ್ನವಕುಂಕುಮಾಭಾನ್
ಸಂಗೀತಮಂಗಲಕಥಾಃ ಸಮಲಂಕೃತಾಂಗ್ಯಃ।
ಸೌವರ್ಣವಿಷ್ಟರಗತೌ ಸದಯೈರಪಾಂಗೈಃ
ಕನ್ಯಾವರೌ ಚ ಫಲಮಕ್ಷಯಮೇವ ತಾಸಾಮ್ ॥ -ರುಕ್ಮಿಣೀಶವಿಜಯ(೧೬/೪೬)

೨. ಹುತ್ವಾ ಶತ್ರುಸಮೂಹಮುನ್ಮುಖಶಿಖಸ್ವೀಯಪ್ರತಾಪಾನಲೇ
ಕೃತ್ವಾ ರಕ್ತರಸಾರ್ದ್ರತಾಮಪಿ ಶರಭ್ರಾಜದ್ಧೃತಿಶ್ರೇಣಿಭಿಃ।
ಸ್ವಸ್ಥಪ್ರೇಷಿತಪುಷ್ಪಲಾಜನಿಕರಾಕೀರ್ಣಃ ಕ್ಷಿತೀಶಾರ್ಪಿತೈ-
ರ್ವಿತ್ತೈಸ್ತತ್ಸಮಯೋಚಿತೈಃ ಸಹ ನಿಜಾಂ ನಿನ್ಯೇ ನಿಸರ್ಗಪ್ರಿಯಾಮ್ ॥ -ರು.ವಿ.(೧೫/೬)

ರುಕ್ಮಿಣೀಶವಿಜಯದ ಈ ಶ್ಲೋಕದಲ್ಲಿ ವಿವಾಹಸಂದರ್ಭದಲ್ಲಿ ನಡೆಯುವ ಓಕುಳಿಯಾಟ, ಲಾಜಾಹೋಮ ಮೊದಲಾದವುಗಳ ಉಲ್ಲೇಖಗಳು ಬಂದಿದ್ದು ಅವುಗಳು ವಿಹಿತಕಾರ್ಯಗಳು ಎಂಬುದಕ್ಕೆ ಸೂಚಕವಾಗಿದೆ.

ದೇವಕನ್ಯಾಃ ಸಮಾಯಾಂತಿ ವಿವಾಹಂ ದ್ರಷ್ಟುಮುತ್ಸುಕಾಃ।
ಅರ್ಯಮ್ಣಸ್ತನುಜಾಃ ಕಾಶ್ಚ ವರುಣಸ್ಯ ಚ ಕಾಶ್ಚನ।
ಪೂಷ್ಣಃ ಪ್ರಜಾಪತೇಶ್ಚಾಪಿ ಕಾಶ್ಚನಾಯಾಂತಿ ಚ ಸ್ತ್ರಿಯಃ ॥ -ಆಶ್ವಲಾಯನ ಸ್ಮೃತಿರತ್ನ

೩. ಸೂರ್ಯಾವರ್ಗ ಎಂಬುದು ಋಗ್ವೇದದ ದಶಮಮಂಡಲದಲ್ಲಿ ಬರುವ ೪೭ ಮಂತ್ರಗಳ ಸೂಕ್ತ. ಸೂರ್ಯಾ ಎಂಬ ಸವಿತೃದೇವನ ಪುತ್ರಿಯಾದ ಸಾವಿತ್ರಿ ಎಂಬುವವಳು ಈ ಮಂತ್ರದರ್ಶನಮಾಡಿದ ಋಷಿಕೆ. ಆದ್ದರಿಂದ ಸೂರ್ಯಾಸಾವಿತ್ರೀ ಎಂದು ಇವಳು ಪ್ರಸಿದ್ಧ. ಚಂದ್ರ ಸೂರ್ಯ ಮೊದಲಾದ ವಿವಾಹದೇವತೆಗಳ ಸ್ತುತಿರೂಪ ಮಂತ್ರಗಳು ಇದರಲ್ಲಿ ಸೇರಿವೆ. ವಿವಾಹದ ಪೂರ್ಣತೆಗೆ ಅವಶ್ಯ ಪಠನೀಯವಾದ ಮಂತ್ರಗುಚ್ಛ ಇದಾಗಿದೆ. ವಿವಾಹ ಸಮಾರಂಭದಲ್ಲಿ ಪಂಡಿತರ ಅಗತ್ಯ ಇಂತಹ

# [1]ಪಾಣಿಗ್ರಹಣ

ಪಾಣಿಗ್ರಹಣವು ಮಾಂಗಲ್ಯಧಾರಣೆಯ ಬಳಿಕ ನಡೆಯುವ ಅತ್ಯಂತ ಮುಖ್ಯವಾದ ವಿವಾಹದ ಅಂಗಗಳಲ್ಲಿ ಒಂದು. ವರನಾದವನು ಕನ್ಯೆಯ ಬಲಗೈಯ ಎಲ್ಲಾ ಬೆರಳುಗಳನ್ನೂ ಸಹ ತನ್ನ ಬಲಗೈಯಿಂದ ಸಂಪೂರ್ಣವಾಗಿ ಹಿಡಿಯುವುದು ಈ ಪಾಣಿಗ್ರಹಣದ ಮುಖ್ಯಾರ್ಥ. ಮಾಂಗಲ್ಯಧಾರಣೆ ಪೂರೈಸಿದ್ದರೂ ಕಾರಣಾಂತರದಿಂದ ಈ ಪಾಣಿಗ್ರಹಣ ಕಾರ್ಯ ನಡೆಯದೇ ಇದ್ದಲ್ಲಿ ಅಂತಹ ವಿವಾಹವು ಊರ್ಜಿತ-ವೆನ್ನಿಸಲಾರದು[2]. ಆ ವೇಳೆಗೆ ವರನ ಮರಣ ಇತ್ಯಾದಿ ಘಟಿಸಿ ವಿವಾಹ ನಿಂತಲ್ಲಿ ಕನ್ಯೆಯನ್ನು ಬೇರೆಯ ವರನಿಗಿತ್ತು ಮದುವೆ ಮಾಡುವುದು ದೋಷವೆನ್ನಿಸಲಾರದು.

ತನ್ನ ಬಲಗೈಯಿಂದ ವಧುವಿನ ಬಲಗೈಯನ್ನು ಬಿಗಿಯಾಗಿ ಹಿಡಿಯುವುದು ಮೇಲೆಬ್ಬಿಸುವ ಕ್ರಿಯೆ ಈ ಪಾಣಿಗ್ರಹಣ. ಗೃಭ್ಣಾಮಿ ತೇ ಸೌಭಗತ್ವಾಯ ಹಸ್ತಮ್[3] ಎಂಬುದು ಇದಕ್ಕೆ ವಿಹಿತವಾದ ಮಂತ್ರ. ಹಾಗೆ ಕೈಹಿಡಿಯುವುದು ಎಂದರೆ ಅವಳ ರಕ್ಷಣೆಯ ಭಾರವನ್ನು ಜೀವನಪೂರ್ತಿ ಹೊರುವುದು ಎಂದರ್ಥ. ವಧುವಿನ ಐದೂ ಬೆರಳುಗಳನ್ನು ತನ್ನ ಮುಷ್ಟಿಯಲ್ಲಿ ಹಿಡಿಯುವುದು ವಿಹಿತ. ಹಾಗೆ ಹಿಡಿದಲ್ಲಿ ಗಂಡು ಹೆಣ್ಣು ಎಂಬ ಎರಡು ಬಗೆಯ ಸಂತತಿಯನ್ನು ಪಡೆಯಲು ಸಾಧ್ಯ. ಬರಿ ಅಂಗುಷ್ಠವನ್ನು ಮಾತ್ರ

---

ವಿಶೇಷ ಮಂತ್ರಗಳ ಪಠನೆಗಾಗಿ ಎಂಬುದನ್ನು ಅರಿಯುವುದು ಅಗತ್ಯ (ಕೆಲವರು ಈ ಸೂರ್ಯಾವರ್ಗವನ್ನು ಸೂರ್ಯವರ್ಗ, ಸೂರ್ಯಸೂಕ್ತ ಎಂದು ತಪ್ಪಾಗಿ ಉಲ್ಲೇಖಿಸುವರು. ಸೂರ್ಯ ಬೇರೆ, ಸೂರ್ಯಪುತ್ರಿಯಾದ ಸೂರ್ಯಾ ಬೇರೆ ಎಂದು ತಿಳಿಯಬೇಕು).

೧. ಜನಾರ್ದನಶ್ಚ ರುಗ್ಮಿಣೀಕರಂ ಶುಭೇ ದಿನೇಽಗ್ರಹೀತ್ ।
ಮಹೋತ್ಸವಸ್ತದಾಽಭವತ್ ಕುಶಸ್ಥಲೀನಿವಾಸಿನಾಮ್ ॥ -ಮ.ಭಾ.ತಾ.ನಿ.(೧೭/೧೭೬)
ವೈವಾಹಿಕೀಂ ಕೃತಿಮಥ ವ್ಯದಧಾಚ್ಚ ಧೌಮ್ಯ-
ಯುಕ್ತಃ ಕ್ರಮೇಣ ಜಗೃಹುರ್ನಿಖಿಲಾಶ್ಚ ಪಾಣಿಮ್ ॥ -ಮ.ಭಾ.ತಾ.ನಿ(೧೯/೧೫೮)
ಶ್ರೀವಾದಿರಾಜರ ರುಕ್ಮಿಣೀಶವಿಜಯದಲ್ಲೂ ಇದರ ಉಲ್ಲೇಖವಿದೆ (೧೪/೫೫):
ಭೈಷ್ಮೀಕರಗ್ರಹಣಮೇಷ ಕರಿಷ್ಯತೀತಿ ವಕ್ತವ್ಯಮಸ್ತಿ ಕಿಮಿಹಾಶ್ರಿತಪಕ್ಷಪಾತೀ ।
ಯದ್ಬ್ರಾಹ್ಮಣಸ್ಯ ಸದಯಃ ಕರಪಲ್ಲವೇನ ಪ್ರತ್ಯಗ್ರಹೀದ್ವಚನಮಾತ್ರಹೃತೋಽಪಿ ಹಸ್ತಮ್ ॥

೨. ನೋದಕೇನ ನ ವಾಚಾ ವಾ ಕನ್ಯಾಯಾಃ ಪತಿರುಚ್ಯತೇ ।
ಪಾಣಿಗ್ರಹಣಸಂಸ್ಕಾರಾತ್ ಪತಿತ್ವಂ ಸಪ್ತಮೇ ಪದೇ ॥ -ಯಮಸ್ಮೃತಿ
-ಅನೇನ ಸಪ್ತಮಪದಾದರ್ವಾಕ್ ಪರಿಣೇತುಃ ಮರಣೇಽಪಿ ನವಿಧವಾತ್ವತ್ವಮುಕ್ತಂ ಭವತಿ । -ಸ್ಮೃತಿಚಂದ್ರಿಕಾ

೩. ಗೃಭ್ಣಾಮಿ ತೇ ಸೌಭಗತ್ವಾಯ ಹಸ್ತಂ ಮಯಾ ಪತ್ಯಾ ಜರದಷ್ಟಿರ್ಯಥಾಸಃ ।
ಭಗೋ ಅರ್ಯಮಾ ಸವಿತಾ ಪುರಂಧಿರ್ಮಹ್ಯಂ ತ್ವಾದುರ್ಗಾರ್ಹಪತ್ಯಾಯ ದೇವಾಃ ॥ -ಸೂರ್ಯಾಸೂಕ್ತ(೩೬)

ಹಿಡಿದಲ್ಲಿ ಪುತ್ರಸಂತತಿ, ಇತರ ನಾಲ್ಕು ಬೆರಳುಗಳನ್ನು ಮಾತ್ರ ಹಿಡಿದಲ್ಲಿ ಸ್ತ್ರೀಸಂತತಿ ಎಂಬುದು ಆಪಸ್ತಂಬಸ್ಮೃತಿಯ ಮಾತು. ಬಿಗಿಯಾಗಿ [೧] ಹಿಡಿಯುವುದು ಪೂರ್ಣವಶ-ವರ್ತಿಯನ್ನಾಗಿ ಮಾಡಿಕೊಳ್ಳುವ ಸಂಕೇತ. ಅದು ತಪ್ಪಿದಲ್ಲಿ ಹೆಣ್ಣಿನ ಕೈ ಮೇಲಾಗುವುದು ಎಂಬ ಮಾತೂ ಉಂಟು. ಈ ಪಾಣಿಗ್ರಹಣವನ್ನು 'ಪಾಣಿಪೀಡನ' ಎಂಬುದಾಗಿ ಕರೆಯುವುದು ಈ ಅರ್ಥದಲ್ಲಿ ಉಚಿತವೆನ್ನಿಸುವುದು.

## ಔಪಾಸನ

ಪಾಣಿಗ್ರಹಣಹೋಮ ನಡೆಸಿದ ಅಗ್ನಿಯಲ್ಲಿಯೇ ಔಪಾಸನವನ್ನೂ ಸಹ ಮಾಡಬೇಕು. ವಿವಾಹಾಗ್ನಿಯಲ್ಲಿ ಅಂದು [೨] ಸಾಯಮೌಪಾಸನ ಪ್ರಾರಂಭ. ಅಂದಿನಿಂದ ಪ್ರಾತಃ ಸಾಯಮೌಪಾಸನವನ್ನು ಗೃಹಸ್ಥನು ಪ್ರತಿನಿತ್ಯ ಆಚರಿಸಬೇಕು. ಹೋಮ ಪೂರೈಸಿದ ಬಳಿಕ ಆವಾಹಿಸಿದ ಅಗ್ನಿಯನ್ನು ಋಗ್ವೇದಿಯಾದರೆ ಸಮಿತ್ತಿನಲ್ಲೂ, ಯಜುರ್ವೇದಿಯಾದರೆ ಹೃದಯದಲ್ಲೂ ಪುನರಾವಾಹನೆ ಮಾಡಿಕೊಳ್ಳಬೇಕು.

## ಪರಿಣಯನ

ಮುಖ್ಯಾರ್ಥದಲ್ಲಿ ಪರಿಣಯ ಎಂದರೆ ಎಲ್ಲ ರೀತಿಯಲ್ಲೂ ತನ್ನ ಸಮೀಪಕ್ಕೆ ವಧೂವನ್ನು ಕರೆದುಕೊಳ್ಳುವುದು ಎಂದರ್ಥ. ಅಗ್ನಿಗೆ ಸುತ್ತುವರೆಯುವುದು ಎಂಬ ಅರ್ಥವೂ ಇದಕ್ಕೆ ಇದೆ (ಪರಿತಃ ನಯನಂ). ವಧೂವರರ ವಸ್ತ್ರಗಳಿಗೆ ಗಂಟುಹಾಕುವ ಕ್ರಿಯೆಯೂ ಇದರಲ್ಲಿದೆ. ಧ್ರುವ ಅರುಂಧತಿ ದರ್ಶನದ ವೇಳೆಯಲ್ಲಿ ಇದನ್ನು ಬಿಚ್ಚಬೇಕು ಎಂಬ ಮಾತು ಉಂಟು : ಪೂರ್ವಬದ್ಧೋತ್ತರೀಯಾಂತೌ ವಿಸ್ರಸ್ಯ - (ಬ್ರಹ್ಮಕರ್ಮ-ಸಮುಚ್ಚಯ). ಅಗ್ನಿಗೆ ಪ್ರದಕ್ಷಿಣೆಯ ಕಾಲದಲ್ಲಿ ಸಾಮೋಹಮಸ್ಮಿ ಎಂಬ ಮಂತ್ರ ವಿಹಿತ. ತಾವಿಬ್ಬರೂ ಸಹವರ್ತಿಗಳಾಗಿ ಜೀವನಪೂರ್ತಿ ಜೀವಿಸುವ ಸಂಕಲ್ಪ ಅದರಲ್ಲಿ ಅಡಗಿದೆ.

## ಅಶ್ಮಾರೋಪಣ

ಹಾಗೆ ಪ್ರದಕ್ಷಿಣೆ ಮಾಡಿದ ಅಗ್ನಿಯ ಹತ್ತಿರದಲ್ಲಿ ಒಂದು ಕಲ್ಲನ್ನು ಇರಿಸಿ, ಅದರ ಮೇಲೆ ಕನ್ಯೆಯನ್ನು ವರ ಏರಿಸಿ ನಿಲ್ಲಿಸಬೇಕು. ಅಶ್ಮಾರೋಪಣ ಎಂದರೆ ಇದೇ. ಜೀವನದಲ್ಲಿ ಎಂತಹ ಸಂಕಷ್ಟಗಳಿಗೂ ಅಂಜದೆ, ಕಲ್ಲಿನಂತೆ ಗಟ್ಟಿಯಾಗಿ ನಿಂತು ಯಶಸ್ಸನ್ನು ಸಾಧಿಸಬೇಕು ಎಂಬುದು ಈ ಕಾರ್ಯದ ಸಂಕೇತ. ಅದಕ್ಕೆ ವಿಹಿತವಾದ ಮಂತ್ರ ಹೀಗಿದೆ :

---

೧. ಗೃಭ್ಣಾಮಿ ತೇ ಸೌಭಗತ್ವಾಯ ಹಸ್ತಮಿತ್ಯಂಗುಷ್ಠಮೇವ ಗೃಹ್ಣೀಯಾತ್ । ಯದಿ ಕಾಮಯೀತ ಪುಮಾಂಸ ಏವ ಮೇ ಪುತ್ರಾ ಜಾಯೇರನ್ ಇತಿ ಅಂಗುಲೀರೇವ ಸ್ತ್ರೀಕಾಮಃ ಹೋಮಾಂತೇ ಹಸ್ತಂ ಸಾಂಗುಷ್ಠಮುಭಯಕಾಮಃ । -ಸೂತ್ರ

೨. ಈ ಔಪಾಸನವನ್ನು ಏಕಾದಶೀ ಹಾಗೂ ಕೃಷ್ಣಾಷ್ಟಮೀ ದಿನಗಳಂದು ಮಾಡುವಂತಿಲ್ಲ:
ಔಪಾಸನಂ ಬ್ರಹ್ಮಯಜ್ಞಂ ಕೃಷ್ಣಾಷ್ಟಮ್ಯಾಂ ನ ಕಾರಯೇತ್ । -ಬ್ರಹ್ಮವೈವರ್ತಪುರಾಣ

# [1]ಪಾಣಿಗ್ರಹಣ

ಪಾಣಿಗ್ರಹಣವು ಮಾಂಗಲ್ಯಧಾರಣೆಯ ಬಳಿಕ ನಡೆಯುವ ಅತ್ಯಂತ ಮುಖ್ಯವಾದ ವಿವಾಹದ ಅಂಗಗಳಲ್ಲಿ ಒಂದು. ವರನಾದವನು ಕನ್ಯೆಯ ಬಲಗೈಯ ಎಲ್ಲಾ ಬೆರಳುಗಳನ್ನೂ ಸಹ ತನ್ನ ಬಲಗೈಯಿಂದ ಸಂಪೂರ್ಣವಾಗಿ ಹಿಡಿಯುವುದು ಈ ಪಾಣಿಗ್ರಹಣದ ಮುಖ್ಯಾರ್ಥ. ಮಾಂಗಲ್ಯಧಾರಣೆ ಪೂರೈಸಿದ್ದರೂ ಕಾರಣಾಂತರದಿಂದ ಈ ಪಾಣಿಗ್ರಹಣ ಕಾರ್ಯ ನಡೆಯದೇ ಇದ್ದಲ್ಲಿ ಅಂತಹ ವಿವಾಹವು ಊರ್ಜಿತ-ವೆನ್ನಿಸಲಾರದು[2]. ಆ ವೇಳೆಗೆ ವರನ ಮರಣ ಇತ್ಯಾದಿ ಘಟಿಸಿ ವಿವಾಹ ನಿಂತಲ್ಲಿ ಕನ್ಯೆಯನ್ನು ಬೇರೆಯ ವರನಿಗಿತ್ತು ಮದುವೆ ಮಾಡುವುದು ದೋಷವೆನ್ನಿಸಲಾರದು.

ತನ್ನ ಬಲಗೈಯಿಂದ ವಧುವಿನ ಬಲಗೈಯನ್ನು ಬಿಗಿಯಾಗಿ ಹಿಡಿಯುವುದು ಮೇಲೆಬ್ಬಿಸುವ ಕ್ರಿಯೆ ಈ ಪಾಣಿಗ್ರಹಣ. ಗೃಭ್ಣಾಮಿ ತೇ ಸೌಭಗತ್ವಾಯ ಹಸ್ತಮ್[3] ಎಂಬುದು ಇದಕ್ಕೆ ವಿಹಿತವಾದ ಮಂತ್ರ. ಹಾಗೆ ಕೈಹಿಡಿಯುವುದು ಎಂದರೆ ಅವಳ ರಕ್ಷಣೆಯ ಭಾರವನ್ನು ಜೀವನಪೂರ್ತಿ ಹೊರುವುದು ಎಂದರ್ಥ. ವಧುವಿನ ಐದೂ ಬೆರಳುಗಳನ್ನು ತನ್ನ ಮುಷ್ಟಿಯಲ್ಲಿ ಹಿಡಿಯುವುದು ವಿಹಿತ. ಹಾಗೆ ಹಿಡಿದಲ್ಲಿ ಗಂಡು ಹೆಣ್ಣು ಎಂಬ ಎರಡು ಬಗೆಯ ಸಂತತಿಯನ್ನು ಪಡೆಯಲು ಸಾಧ್ಯ. ಬರಿ ಅಂಗುಷ್ಠವನ್ನು ಮಾತ್ರ

---

ವಿಶೇಷ ಮಂತ್ರಗಳ ಪಠನೆಗಾಗಿ ಎಂಬುದನ್ನು ಅರಿಯುವುದು ಅಗತ್ಯ (ಕೆಲವರು ಈ ಸೂರ್ಯಾವರ್ಗವನ್ನು ಸೂರ್ಯವರ್ಗ, ಸೂರ್ಯಸೂಕ್ತ ಎಂದು ತಪ್ಪಾಗಿ ಉಲ್ಲೇಖಿಸುವರು. ಸೂರ್ಯ ಬೇರೆ, ಸೂರ್ಯಪುತ್ರಿಯಾದ ಸೂರ್ಯಾ ಬೇರೆ ಎಂದು ತಿಳಿಯಬೇಕು).

೧. ಜನಾರ್ದನಶ್ಚ ರುಗ್ಮಿಣೀಕರಂ ಶುಭೇ ದಿನೇಽಗ್ರಹೀತ್ ।
ಮಹೋತ್ಸವಸ್ತದಾಽಭವತ್ ಕುಶಸ್ಥಲೀನಿವಾಸಿನಾಮ್ ॥ -ಮ.ಭಾ.ತಾ.ನಿ.(೧೭/೧೭೬)
ವೈವಾಹಿಕೀಂ ಕೃತಿಮಥ ವ್ಯದಧಾಚ್ಚ ಧೌಮ್ಯ-
ಯುಕ್ತಃ ಕ್ರಮೇಣ ಜಗೃಹುರ್ನಿಖಿಲಾಶ್ಚ ಪಾಣಿಮ್ ॥ -ಮ.ಭಾ.ತಾ.ನಿ.(೧೯/೧೫೮)
ಶ್ರೀವಾದಿರಾಜರ ರುಕ್ಮಿಣೀಶವಿಜಯದಲ್ಲೂ ಇದರ ಉಲ್ಲೇಖವಿದೆ (೧೪/೫೫):
ಭೈಷ್ಮೀಕರಗ್ರಹಣಮೇಷ ಕರಿಷ್ಯತೀತಿ ವಕ್ತವ್ಯಮಸ್ತಿ ಕಿಮಿಹಾಶ್ರಿತಪಕ್ಷಪಾತೀ ।
ಯದ್ಬ್ರಾಹ್ಮಣಸ್ಯ ಸದಯಃ ಕರಪಲ್ಲವೇನ ಪ್ರತ್ಯಗ್ರಹೀದ್ವಚನಮಾತ್ರಹೃತೋಽಪಿ ಹಸ್ತಮ್॥

೨. ನೋದಕೇನ ನ ವಾಚಾ ವಾ ಕನ್ಯಾಯಾಃ ಪತಿರುಚ್ಯತೇ ।
ಪಾಣಿಗ್ರಹಣಸಂಸ್ಕಾರಾತ್ ಪತಿತ್ವಂ ಸಪ್ತಮೇ ಪದೇ ॥ -ಯಮಸ್ಮೃತಿ
-ಅನೇನ ಸಪ್ತಮಪದಾದರ್ವಾಕ್ ಪರಿಣೇತುಃ ಮರಣೇಽಪಿ ನವಿಧವಾತ್ವಮುಕ್ತಂ ಭವತಿ ।
-ಸ್ಮೃತಿಚಂದ್ರಿಕಾ

೩. ಗೃಭ್ಣಾಮಿ ತೇ ಸೌಭಗತ್ವಾಯ ಹಸ್ತಂ ಮಯಾ ಪತ್ಯಾ ಜರದಷ್ಟಿರ್ಯಥಾಸಃ ।
ಭಗೋ ಅರ್ಯಮಾ ಸವಿತಾ ಪುರಂಧಿರ್ಮಹ್ಯಂ ತ್ವಾದುರ್ಗಾರ್ಹಪತ್ಯಾಯ ದೇವಾಃ ॥
-ಸೂರ್ಯಾಸೂಕ್ತ(೩೬)

ಹಿಡಿದಲ್ಲಿ ಪುತ್ರಸಂತತಿ, ಇತರ ನಾಲ್ಕು ಬೆರಳುಗಳನ್ನು ಮಾತ್ರ ಹಿಡಿದಲ್ಲಿ ಸ್ತ್ರೀಸಂತತಿ ಎಂಬುದು ಆಪಸ್ತಂಬಸ್ಮೃತಿಯ ಮಾತು. ಬಿಗಿಯಾಗಿ [೧] ಹಿಡಿಯುವುದು ಪೂರ್ಣವಶ-ವರ್ತಿಯನ್ನಾಗಿ ಮಾಡಿಕೊಳ್ಳುವ ಸಂಕೇತ.. ಅದು ತಪ್ಪಿದಲ್ಲಿ ಹೆಣ್ಣಿನ ಕೈ ಮೇಲಾಗುವುದು ಎಂಬ ಮಾತೂ ಉಂಟು. ಈ ಪಾಣಿಗ್ರಹಣವನ್ನು 'ಪಾಣಿಪೀಡನ' ಎಂಬುದಾಗಿ ಕರೆಯುವುದು ಈ ಅರ್ಥದಲ್ಲಿ ಉಚಿತವೆನ್ನಿಸುವುದು.

## ಔಪಾಸನ

ಪಾಣಿಗ್ರಹಣಹೋಮ ನಡೆಸಿದ ಅಗ್ನಿಯಲ್ಲಿಯೇ ಔಪಾಸನವನ್ನೂ ಸಹ ಮಾಡಬೇಕು. ವಿವಾಹಾಗ್ನಿಯಲ್ಲಿ ಅಂದು [೨] ಸಾಯಮೌಪಾಸನ ಪ್ರಾರಂಭ. ಅಂದಿನಿಂದ ಪ್ರಾತಃ ಸಾಯಮೌಪಾಸನವನ್ನು ಗೃಹಸ್ಥನು ಪ್ರತಿನಿತ್ಯ ಆಚರಿಸಬೇಕು. ಹೋಮ ಪೂರೈಸಿದ ಬಳಿಕ ಆವಾಹಿಸಿದ ಅಗ್ನಿಯನ್ನು ಋಗ್ವೇದಿಯಾದರೆ ಸಮಿತ್ತಿನಲ್ಲೂ, ಯಜುರ್ವೇದಿಯಾದರೆ ಹೃದಯದಲ್ಲೂ ಪುನರಾವಾಹನೆ ಮಾಡಿಕೊಳ್ಳಬೇಕು.

## ಪರಿಣಯನ

ಮುಖ್ಯಾರ್ಥದಲ್ಲಿ ಪರಿಣಯ ಎಂದರೆ ಎಲ್ಲ ರೀತಿಯಲ್ಲೂ ತನ್ನ ಸಮೀಪಕ್ಕೆ ವಧೂವನ್ನು ಕರೆದುಕೊಳ್ಳುವುದು ಎಂದರ್ಥ. ಅಗ್ನಿಗೆ ಸುತ್ತುವರೆಯುವುದು ಎಂಬ ಅರ್ಥವೂ ಇದಕ್ಕೆ ಇದೆ (ಪರಿತಃ ನಯನಂ). ವಧೂವರರ ವಸ್ತ್ರಗಳಿಗೆ ಗಂಟುಹಾಕುವ ಕ್ರಿಯೆಯೂ ಇದರಲ್ಲಿದೆ. ಧ್ರುವ ಅರುಂಧತಿ ದರ್ಶನದ ವೇಳೆಯಲ್ಲಿ ಇದನ್ನು ಬಿಚ್ಚಬೇಕು ಎಂಬ ಮಾತು ಉಂಟು : ಪೂರ್ವಬದ್ಧೋತ್ತರೀಯಾಂತೌ ವಿಸ್ರಸ್ಯ - (ಬ್ರಹ್ಮಕರ್ಮ-ಸಮುಚ್ಚಯ). ಅಗ್ನಿಗೆ ಪ್ರದಕ್ಷಿಣೆಯ ಕಾಲದಲ್ಲಿ ಸಾಮೋಹಮಸ್ಮಿ ಎಂಬ ಮಂತ್ರ ವಿಹಿತ. ತಾವಿಬ್ಬರೂ ಸಹವರ್ತಿಗಳಾಗಿ ಜೀವನಪೂರ್ತಿ ಜೀವಿಸುವ ಸಂಕಲ್ಪ ಅದರಲ್ಲಿ ಅಡಗಿದೆ.

## ಅಶ್ಮಾರೋಪಣ

ಹಾಗೆ ಪ್ರದಕ್ಷಿಣೆ ಮಾಡಿದ ಅಗ್ನಿಯ ಹತ್ತಿರದಲ್ಲಿ ಒಂದು ಕಲ್ಲನ್ನು ಇರಿಸಿ, ಅದರ ಮೇಲೆ ಕನ್ಯೆಯನ್ನು ವರ ಏರಿಸಿ ನಿಲ್ಲಿಸಬೇಕು. ಅಶ್ಮಾರೋಪಣ ಎಂದರೆ ಇದೇ. ಜೀವನದಲ್ಲಿ ಎಂತಹ ಸಂಕಷ್ಟಗಳಿಗೂ ಅಂಜದೆ, ಕಲ್ಲಿನಂತೆ ಗಟ್ಟಿಯಾಗಿ ನಿಂತು ಯಶಸ್ಸನ್ನು ಸಾಧಿಸಬೇಕು ಎಂಬುದು ಈ ಕಾರ್ಯದ ಸಂಕೇತ. ಅದಕ್ಕೆ ವಿಹಿತವಾದ ಮಂತ್ರ ಹೀಗಿದೆ :

---

೧. ಗೃಭ್ಣಾಮಿ ತೇ ಸೌಭಗತ್ವಾಯ ಹಸ್ತಮಿತ್ಯಂಗುಷ್ಠಮೇವ ಗೃಹ್ಣೀಯಾತ್ । ಯದಿ ಕಾಮಯೀತ ಪುಮಾಂಸ ಏವ ಮೇ ಪುತ್ರಾ ಜಾಯೇರನ್ ಇತಿ ಅಂಗುಲೀರೇವ ಸ್ತ್ರೀಕಾಮಃ ಹೋಮಾಂತೇ ಹಸ್ತಂ ಸಾಂಗುಷ್ಠಮುಭಯಕಾಮಃ। -ಸೂತ್ರ

೨. ಈ ಔಪಾಸನವನ್ನು ಏಕಾದಶೀ ಹಾಗೂ ಕೃಷ್ಣಾಷ್ಟಮೀ ದಿನಗಳಂದು ಮಾಡುವಂತಿಲ್ಲ: ಔಪಾಸನಂ ಬ್ರಹ್ಮಯಜ್ಞಂ ಕೃಷ್ಣಾಷ್ಟಮ್ಯಾಂ ನ ಕಾರಯೇತ್ । -ಬ್ರಹ್ಮವೈವರ್ತಪುರಾಣ

ಇಮಮಶ್ಮಾನಮಾರೋಹಾಶ್ಮೇವ ತ್ವಂ ಸ್ಥಿರಾ ಭವ ।
ಸಹಸ್ವ ಪೃತನಾಯತೋಽಭಿತಿಷ್ಠ ಪೃತನ್ಯತ ಇತಿ ॥

ಸುತ್ತುವರೆಯುವುದು(ಪರಿಣಯನ) ಮೂರು ಸಲ. ಆದರಂತೆ ಈ ಅಶ್ಮಾರೋಪಣವೂ ಮೂರು ಸಲ. ಶ್ರೀಪುರಂದರದಾಸರ 'ಕಲ್ಲಾಗಿ ಇರಬೇಕು ಕಠಿಣ ಭವತೊರೆಯೊಳಗೆ' ಎಂಬ ಮಾತಿನಲ್ಲಿ ಇದರ ಸೂಚನೆಯೂ ಬಂದಿದೆ ಎಂದು ತಿಳಿಯಬಹುದು.

## ಸಪ್ತಪದೀ

ಸಪ್ತಪದಿಯು ವಿವಾಹದ ಅತ್ಯಂತ ಮುಖ್ಯವಾದ ಅಂಗ. ಅದು ಪೂರೈಸುವ [೧]ಮುನ್ನ ಮಾಂಗಲ್ಯಧಾರಣೆ ಮೊದಲಾದವುಗಳು ನಡೆದಿದ್ದರೂ ಸಹ ಕಾರಣಾಂತರದಿಂದ ಸಪ್ತಪದಿಯು ಪೂರೈಸದೇ ಇದ್ದಲ್ಲಿ ವಿವಾಹವು ಅನೂರ್ಜಿತ ಎನ್ನಿಸುವುದು[೨]. ಕೆಲವರು ಇದನ್ನು ಗಮನಿಸದೆ ಮಾಂಗಲ್ಯಧಾರಣೆಯೇ ವಿವಾಹದ ಮುಖ್ಯಾಂಗ ಎಂದು ತಪ್ಪಾಗಿ ತಿಳಿಯುವರು. ಸಪ್ತಪದಿಗಿಂತ ಮುಂಚಿತವಾಗಿ ಕಾರಣಾಂತರದಿಂದ ವಿವಾಹ ನಿಂತು-ಹೋದಲ್ಲಿ ವಧುವು ಕನ್ಯೆಯಾಗಿಯೇ ಉಳಿಯುವಳು. ಬೇರೊಂದು ಗಂಡಿನೊಂದಿಗೆ ಅವಳ ವಿವಾಹಕ್ಕೆ ಶಾಸ್ತ್ರದ ಸಮ್ಮತಿ ಉಂಟು. ಸಪ್ತಪದಿಯ ಬಳಿಕ ಮಾತ್ರ ವಿವಾಹದ ಪೂರ್ಣವಿಧಿ ಮುಕ್ತಾಯಗೊಂಡಂತೆ ಆಗುವುದರಿಂದ ಆದಕ್ಕೆ ಅವಕಾಶವಿರುವುದಿಲ್ಲ ಎಂಬುದು ಗಮನಾರ್ಹವಾದ ಅಂಶ.

[೩]ಹರಿವಂಶದಲ್ಲಿ ಸತ್ಯವ್ರತ ಹೀಗೆ ಮಾಡಿದ ಒಂದು ಪ್ರಸಂಗದ ಉಲ್ಲೇಖವಿದೆ. ತನ್ನ ರಾಜ್ಯದಲ್ಲಿ ಒಬ್ಬ ಹೆಣ್ಣಿಗೆ ವಿವಾಹ ನಡೆದಿದ್ದಾಗ ಅಲ್ಲಿಗೆ ತೆರಳಿದ್ದ ರಾಜಕುಮಾರ ಸತ್ಯವ್ರತ ಅವಳಲ್ಲಿ ಮೋಹಗೊಂಡು ಸಪ್ತಪದಿ ಪೂರೈಸುವ ಮುನ್ನ ಅವಳನ್ನು ತಾನು ಕರೆತಂದು

---

೧. ಪ್ರಾಹುಃ ಸಾಪ್ತಪದಂ ಮೈತ್ರಂ ಬುಧಾಸ್ತತ್ತ್ವಾರ್ಥದರ್ಶಿನಃ ।
(ಸಾವಿತ್ರಿಯ ಮಾತು) -ಮಹಾಭಾರತ, ವನಪರ್ವ(೨೯೮/೨೪)
The marriage becomes completed only when the seventh step is taken. Till then it is imperfect and revocable.
-The Hindu marriage act, section 437

೨. ಪಾಣಿಗ್ರಹಣಮಂತ್ರಾಣಾಂ ನಿಷ್ಠಾ ಸ್ಯಾತ್ ಸಪ್ತಮೇ ಪದೇ ।
ನ ಚ ಸತ್ಯವ್ರತಸ್ತಸ್ಯ ತಮುಪಾಂಶುಮಬುದ್ಧ್ಯತ ॥ -ಹರಿವಂಶ(೧/೧೩/೭)
- ಸಖಾ ಸಪ್ತಪದೀ ಭವ ಇತ್ಯಂತಿಮಮಂತ್ರಾಂತೇ ಭಾರ್ಯಾತ್ವಮುತ್ಪದ್ಯತೇ । ನ ತತಃ ಪ್ರಾಕ್
-ಹರಿವಂಶ ವ್ಯಾಖ್ಯಾನ

ಪಾಣಿಗ್ರಹಣಿಕಾ ಮಂತ್ರಾ ನಿಯತಂ ದಾರಲಕ್ಷಣಮ್ ।
ತೇಷಾಂ ನಿಷ್ಠಾ ತು ವಿಜ್ಞೇಯಾ ವಿದ್ವದ್ಭಿಃ ಸಪ್ತಮೇ ಪದೇ ॥ -ಮನುಸ್ಮೃತಿ(೮/೨೨೭)

೩. ತಸ್ಯ ಸತ್ಯವ್ರತೋ ನಾಮ ಕುಮಾರೋಽಭೂನ್ಮಹಾಬಲಃ ।
ಪಾಣಿಗ್ರಹಣಮಂತ್ರಾಣಾಂ ವಿಘ್ನಂ ಚಕ್ರೇ ಸುದುರ್ಮತಿಃ ॥ -ಹರಿವಂಶ (೧/೧೨/೧೨)

ವಿವಾಹವಾಗುವನು. ಆ ಬಗ್ಗೆ ರಾಜನ ಆಸ್ಥಾನದಲ್ಲಿ ವಿಚಾರ ನಡೆದಾಗ ತಾನು ಪರಸ್ತ್ರೀ ಅಪಹರಣ ಮಾಡಿದ ದೋಷಕ್ಕೆ ಪಾತ್ರನಾಗುವಂತಿಲ್ಲ ; ಕಾರಣ ಅವಳಿಗಿನ್ನೂ ಸಪ್ತಪದಿ ಪೂರೈಸಿರಲಿಲ್ಲ ಎಂಬ ವಾದವನ್ನು ಮುಂದಿಡುವನು. ಆದರಿಂದಾಗಿ ಅವನ ವಿವಾಹ ಅನೂರ್ಜಿತ ಎನ್ನಿಸದಂತಾಗುವುದು. ಮಹಾಭಾರತದ ಸಾವಿತ್ರೀ ಉಪಾಖ್ಯಾನದಲ್ಲೂ ಸಪ್ತಪದಿಯು ಒಂದು ಗೆಳೆತನಕ್ಕೆ ಆಗುವ ನಾಂದಿ ಎಂಬ ಮಾತು ಬಂದಿದೆ. ಪತಿಯು ವಧುವಿನ ಕೈಹಿಡಿದು ಯಜ್ಞಾಗ್ನಿಯ ಬಳಿಗೆ ಬಂದು ಅದರ ಉತ್ತರ ದಿಕ್ಕಿನಲ್ಲಿ ನಿಂತು ಅಲ್ಲಿ ಸಿದ್ಧಪಡಿಸಿದ ಏಳು ತಂಡುಲರಾಶಿಯಲ್ಲಿ ಅವಳ ಬಲಗಾಲ ಹೆಬ್ಬೆರಳನ್ನು ಕ್ರಮವಾಗಿ ಒಂದೊಂದನ್ನು ತುಳಿಸುತ್ತಾ ಹೆಜ್ಜೆಗಳನ್ನು ಮುಂದೆ ಇರಿಸುತ್ತಾ ಈಶಾನ್ಯ ಅಥವಾ ಪೂರ್ವದಿಕ್ಕಿನ ಕಡೆಗೆ ಸಾಗುವನು. ಪ್ರತಿಯೊಂದು ಹೆಜ್ಜೆಗೂ ವಿಹಿತವಾದ ಮಂತ್ರಗಳು ಹೀಗಿವೆ :

೧. ಇಷ ಏಕಪದೀ ಭವ, ಸಾ ಮಾಮನುವ್ರತಾ ಭವ ।
ಪುತ್ರಾನ್ ವಿಂದಾವಹೈ ಬಹೂಂಸ್ತೇ ಸಂತು ಜರದಷ್ಟಯಃ ॥
೨. ಊರ್ಜೇ ದ್ವಿಪದೀ ಭವ, ಸಾ ಮಾಮನುವ್ರತಾ ಭವ ।
ಪುತ್ರಾನ್ ವಿಂದಾವಹೈ ಬಹೂಂಸ್ತೇ ಸಂತು ಜರದಷ್ಟಯಃ ॥
೩. ರಾಯಸ್ಪೋಷಾಯ ತ್ರಿಪದೀ ಭವ, ಸಾ ಮಾಮನುವ್ರತಾ ಭವ ।
ಪುತ್ರಾನ್ ವಿಂದಾವಹೈ ಬಹೂಂಸ್ತೇ ಸಂತು ಜರದಷ್ಟಯಃ ॥
೪. ಮಾಯೋಭವ್ಯಾಯ ಚತುಷ್ಪದೀ ಭವ, ಸಾ ಮಾಮನುವ್ರತಾ ಭವ ।
ಪುತ್ರಾನ್ ವಿಂದಾವಹೈ ಬಹೂಂಸ್ತೇ ಸಂತು ಜರದಷ್ಟಯಃ ॥
೫. ಪ್ರಜಾಭ್ಯಃ ಪಂಚಪದೀ ಭವ, ಸಾ ಮಾಮನುವ್ರತಾ ಭವ ।
ಪುತ್ರಾನ್ ವಿಂದಾವಹೈ ಬಹೂಂಸ್ತೇ ಸಂತು ಜರದಷ್ಟಯಃ ॥
೬. ಋತುಭ್ಯಃ ಷಟ್ಪದೀ ಭವ, ಸಾ ಮಾಮನುವ್ರತಾ ಭವ ।
ಪುತ್ರಾನ್ ವಿಂದಾವಹೈ ಬಹೂಂಸ್ತೇ ಸಂತು ಜರದಷ್ಟಯಃ ॥
೭. ಸಖಾ ಸಪ್ತಪದೀ ಭವ, ಸಾ ಮಾಮನುವ್ರತಾ ಭವ ।
ಪುತ್ರಾನ್ ವಿಂದಾವಹೈ ಬಹೂಂಸ್ತೇ ಸಂತು ಜರದಷ್ಟಯಃ[೧] ॥
ಸಖಾಯೌ ಸಪ್ತಪದಾ ಬಭೂವ ಸಖ್ಯಂ ತೇ ಗಮೇಯಮ್ ।
ಸಖ್ಯಾತ್ತೇ ಮಾಯೋಷಂ ಸಖ್ಯಾನ್ಮೇ ಮಾ ಯೋಷ್ಠಾಃ ॥

ಮೊದಲನೇ ಹೆಜ್ಜೆ ಸಹಬಾಳ್ವೆ ಹಾಗೂ ಅನ್ನಪ್ರಾಪ್ತಿಗೆ, ಎರಡನೇ ಹೆಜ್ಜೆ ಬಲವೀರ್ಯಗಳ ಸಂವೃದ್ಧಿಗೆ, ಮೂರನೇ ಹೆಜ್ಜೆ ಸಂಪತ್ ಸಮೃದ್ಧಿಗೆ, ನಾಲ್ಕನೇ ಹೆಜ್ಜೆ ಲೋಕೋತ್ತರ ಭವ್ಯಸುಖದ ಪ್ರಾಪ್ತಿಗೆ, ಐದನೇ ಹೆಜ್ಜೆ ಉತ್ತಮಸಂತತಿಗೆ, ಆರನೇ ಹೆಜ್ಜೆ

---

೧. ಆಶ್ವಲಾಯನಗೃಹ್ಯಸೂತ್ರ (೧/೭/೧೩)

ಇಮಮಶ್ಮಾನಮಾರೋಹಾಶ್ಮೇವ ತ್ವಂ ಸ್ಥಿರಾ ಭವ।
ಸಹಸ್ವ ಪೃತನಾಯತೋಽಭಿತಿಷ್ಠ ಪೃತನ್ಯತ ಇತಿ ॥

ಸುತ್ತುವರೆಯುವುದು(ಪರಿಣಯನ) ಮೂರು ಸಲ. ಆದರಂತೆ ಈ ಅಶ್ಮಾರೋಪಣವೂ ಮೂರು ಸಲ. ಶ್ರೀಪುರಂದರದಾಸರ 'ಕಲ್ಲಾಗಿ ಇರಬೇಕು ಕಠಿಣ ಭವತೊರೆಯೊಳಗೆ' ಎಂಬ ಮಾತಿನಲ್ಲಿ ಇದರ ಸೂಚನೆಯೂ ಬಂದಿದೆ ಎಂದು ತಿಳಿಯಬಹುದು.

## ಸಪ್ತಪದೀ

ಸಪ್ತಪದಿಯು ವಿವಾಹದ ಅತ್ಯಂತ ಮುಖ್ಯವಾದ ಅಂಗ. ಅದು ಪೂರೈಸುವ [೧]ಮುನ್ನ ಮಾಂಗಲ್ಯಧಾರಣೆ ಮೊದಲಾದವುಗಳು ನಡೆದಿದ್ದರೂ ಸಹ ಕಾರಣಾಂತರದಿಂದ ಸಪ್ತಪದಿಯು ಪೂರೈಸದೇ ಇದ್ದಲ್ಲಿ ವಿವಾಹವು ಅನೂರ್ಜಿತ ಎನ್ನಿಸುವುದು[೨]. ಕೆಲವರು ಇದನ್ನು ಗಮನಿಸದೆ ಮಾಂಗಲ್ಯಧಾರಣೆಯೇ ವಿವಾಹದ ಮುಖ್ಯಾಂಗ ಎಂದು ತಪ್ಪಾಗಿ ತಿಳಿಯುವರು. ಸಪ್ತಪದಿಗಿಂತ ಮುಂಚಿತವಾಗಿ ಕಾರಣಾಂತರದಿಂದ ವಿವಾಹ ನಿಂತು-ಹೋದಲ್ಲಿ ವಧುವು ಕನ್ಯೆಯಾಗಿಯೇ ಉಳಿಯುವಳು. ಬೇರೊಂದು ಗಂಡಿನೊಂದಿಗೆ ಅವಳ ವಿವಾಹಕ್ಕೆ ಶಾಸ್ತ್ರದ ಸಮ್ಮತಿ ಉಂಟು. ಸಪ್ತಪದಿಯ ಬಳಿಕ ಮಾತ್ರ ವಿವಾಹದ ಪೂರ್ಣವಿಧಿ ಮುಕ್ತಾಯಗೊಂಡಂತೆ ಆಗುವುದರಿಂದ ಅದಕ್ಕೆ ಅವಕಾಶವಿರುವುದಿಲ್ಲ ಎಂಬುದು ಗಮನಾರ್ಹವಾದ ಅಂಶ.

[೩]ಹರಿವಂಶದಲ್ಲಿ ಸತ್ಯವ್ರತ ಹೀಗೆ ಮಾಡಿದ ಒಂದು ಪ್ರಸಂಗದ ಉಲ್ಲೇಖವಿದೆ. ತನ್ನ ರಾಜ್ಯದಲ್ಲಿ ಒಬ್ಬ ಹೆಣ್ಣಿಗೆ ವಿವಾಹ ನಡೆದಿದ್ದಾಗ ಅಲ್ಲಿಗೆ ತೆರಳಿದ್ದ ರಾಜಕುಮಾರ ಸತ್ಯವ್ರತ ಅವಳಲ್ಲಿ ಮೋಹಗೊಂಡು ಸಪ್ತಪದಿ ಪೂರೈಸುವ ಮುನ್ನ ಅವಳನ್ನು ತಾನು ಕರೆತಂದು

---

೧. ಪ್ರಾಹುಃ ಸಾಪ್ತಪದಂ ಮೈತ್ರಂ ಬುಧಾಸ್ತತ್ತ್ವಾರ್ಥದರ್ಶಿನಃ।
(ಸಾವಿತ್ರಿಯ ಮಾತು) -ಮಹಾಭಾರತ, ವನಪರ್ವ(೨೯೮/೨೪)
The marriage becomes completed only when the seventh step is taken. Till then it is imperfect and revocable.
-The Hindu marriage act, section 437

೨. ಪಾಣಿಗ್ರಹಣಮಂತ್ರಾಣಾಂ ನಿಷ್ಠಾ ಸ್ಯಾತ್ ಸಪ್ತಮೇ ಪದೇ।
ನ ಚ ಸತ್ಯವ್ರತಸ್ತಸ್ಯ ತಮುಪಾಂಶುಮಬುಧ್ಯತ ॥ -ಹರಿವಂಶ(೧/೧೩/೬)
- ಸಖಾ ಸಪ್ತಪದೀ ಭವ ಇತ್ಯಂತಿಮಮಂತ್ರಾಂತೇ ಭಾರ್ಯಾತ್ವಮುತ್ಪದ್ಯತೇ। ನ ತತಃ ಪ್ರಾಕ್
-ಹರಿವಂಶ ವ್ಯಾಖ್ಯಾನ

ಪಾಣಿಗ್ರಹಣಿಕಾ ಮಂತ್ರಾ ನಿಯತಂ ದಾರಲಕ್ಷಣಮ್।
ತೇಷಾಂ ನಿಷ್ಠಾ ತು ವಿಜ್ಞೇಯಾ ವಿದ್ವದ್ಭಿಃ ಸಪ್ತಮೇ ಪದೇ ॥ -ಮನುಸ್ಮೃತಿ(೮/೨೨೬)

೩. ತಸ್ಯ ಸತ್ಯವ್ರತೋ ನಾಮ ಕುಮಾರೋಽಭೂನ್ಮಹಾಬಲಃ।
ಪಾಣಿಗ್ರಹಣಮಂತ್ರಾಣಾಂ ವಿಘ್ನಂ ಚಕ್ರೇ ಸುದುರ್ಮತಿಃ ॥ -ಹರಿವಂಶ (೧/೧೨/೧೨)

ವಿವಾಹವಾಗುವನು. ಆ ಬಗ್ಗೆ ರಾಜನ ಆಸ್ಥಾನದಲ್ಲಿ ವಿಚಾರ ನಡೆದಾಗ ತಾನು ಪರಸ್ತ್ರೀ ಅಪಹರಣ ಮಾಡಿದ ದೋಷಕ್ಕೆ ಪಾತ್ರನಾಗುವಂತಿಲ್ಲ ; ಕಾರಣ ಅವಳಿಗಿನ್ನೂ ಸಪ್ತಪದಿ ಪೂರೈಸಿರಲಿಲ್ಲ ಎಂಬ ವಾದವನ್ನು ಮುಂದಿಡುವನು. ಆದರಿಂದಾಗಿ ಅವನ ವಿವಾಹ ಅನೂರ್ಜಿತ ಎನ್ನಿಸದಂತಾಗುವುದು. ಮಹಾಭಾರತದ ಸಾವಿತ್ರೀ ಉಪಾಖ್ಯಾನದಲ್ಲೂ ಸಪ್ತಪದಿಯು ಒಂದು ಗೆಳೆತನಕ್ಕೆ ಆಗುವ ನಾಂದಿ ಎಂಬ ಮಾತು ಬಂದಿದೆ. ಪತಿಯು ವಧುವಿನ ಕೈಹಿಡಿದು ಯಜ್ಞಾಗ್ನಿಯ ಬಳಿಗೆ ಬಂದು ಅದರ ಉತ್ತರ ದಿಕ್ಕಿನಲ್ಲಿ ನಿಂತು ಅಲ್ಲಿ ಸಿದ್ಧಪಡಿಸಿದ ಏಳು ತಂಡುಲರಾಶಿಯಲ್ಲಿ ಅವಳ ಬಲಗಾಲ ಹೆಬ್ಬೆರಳನ್ನು ಕ್ರಮವಾಗಿ ಒಂದೊಂದನ್ನು ತುಳಿಸುತ್ತಾ ಹೆಜ್ಜೆಗಳನ್ನು ಮುಂದೆ ಇರಿಸುತ್ತಾ ಈಶಾನ್ಯ ಅಥವಾ ಪೂರ್ವದಿಕ್ಕಿನ ಕಡೆಗೆ ಸಾಗುವನು. ಪ್ರತಿಯೊಂದು ಹೆಜ್ಜೆಗೂ ವಿಹಿತವಾದ ಮಂತ್ರಗಳು ಹೀಗಿವೆ :

೧. ಇಷ ಏಕಪದೀ ಭವ, ಸಾ ಮಾಮನುವ್ರತಾ ಭವ।
ಪುತ್ರಾನ್ ವಿಂದಾವಹೈ ಬಹೂಂಸ್ತೇ ಸಂತು ಜರದಷ್ಟಯಃ ॥
೨. ಊರ್ಜೇ ದ್ವಿಪದೀ ಭವ, ಸಾ ಮಾಮನುವ್ರತಾ ಭವ।
ಪುತ್ರಾನ್ ವಿಂದಾವಹೈ ಬಹೂಂಸ್ತೇ ಸಂತು ಜರದಷ್ಟಯಃ ॥
೩. ರಾಯಸ್ಪೋಷಾಯ ತ್ರಿಪದೀ ಭವ, ಸಾ ಮಾಮನುವ್ರತಾ ಭವ।
ಪುತ್ರಾನ್ ವಿಂದಾವಹೈ ಬಹೂಂಸ್ತೇ ಸಂತು ಜರದಷ್ಟಯಃ ॥
೪. ಮಾಯೋಭವ್ಯಾಯ ಚತುಷ್ಪದೀ ಭವ, ಸಾ ಮಾಮನುವ್ರತಾ ಭವ।
ಪುತ್ರಾನ್ ವಿಂದಾವಹೈ ಬಹೂಂಸ್ತೇ ಸಂತು ಜರದಷ್ಟಯಃ ॥
೫. ಪ್ರಜಾಭ್ಯಃ ಪಂಚಪದೀ ಭವ, ಸಾ ಮಾಮನುವ್ರತಾ ಭವ।
ಪುತ್ರಾನ್ ವಿಂದಾವಹೈ ಬಹೂಂಸ್ತೇ ಸಂತು ಜರದಷ್ಟಯಃ ॥
೬. ಋತುಭ್ಯಃ ಷಟ್ಪದೀ ಭವ, ಸಾ ಮಾಮನುವ್ರತಾ ಭವ।
ಪುತ್ರಾನ್ ವಿಂದಾವಹೈ ಬಹೂಂಸ್ತೇ ಸಂತು ಜರದಷ್ಟಯಃ ॥
೭. ಸಖಾ ಸಪ್ತಪದೀ ಭವ, ಸಾ ಮಾಮನುವ್ರತಾ ಭವ।
ಪುತ್ರಾನ್ ವಿಂದಾವಹೈ ಬಹೂಂಸ್ತೇ ಸಂತು ಜರದಷ್ಟಯಃ[೧] ॥
ಸಖಾಯೌ ಸಪ್ತಪದಾ ಬಭೂವ ಸಖ್ಯಂ ತೇ ಗಮೇಯಮ್।
ಸಖ್ಯಾತ್ತೇ ಮಾಯೋಷಂ ಸಖ್ಯಾನ್ಮೇ ಮಾ ಯೋಷ್ಠಾಃ ॥

ಮೊದಲನೇ ಹೆಜ್ಜೆ ಸಹಬಾಳ್ವೆ ಹಾಗೂ ಅನ್ನಪ್ರಾಪ್ತಿಗೆ, ಎರಡನೇ ಹೆಜ್ಜೆ ಬಲವೀರ್ಯಗಳ ಸಂವೃದ್ಧಿಗೆ, ಮೂರನೇ ಹೆಜ್ಜೆ ಸಂಪತ್ ಸಮೃದ್ಧಿಗೆ, ನಾಲ್ಕನೇ ಹೆಜ್ಜೆ ಲೋಕೋತ್ತರ ಭವ್ಯಸುಖದ ಪ್ರಾಪ್ತಿಗೆ, ಐದನೇ ಹೆಜ್ಜೆ ಉತ್ತಮಸಂತತಿಗೆ, ಆರನೇ ಹೆಜ್ಜೆ

---

೧. ಆಶ್ವಲಾಯನಗೃಹ್ಯಸೂತ್ರ (೧/೭/೧೩)

ಅನುಗಾಲದ ಸುಖಕ್ಕಾಗಿ, ಏಳನೇ ಹೆಜ್ಜೆ ಅನುಗಾಲದ ಒಡನಾಟಕ್ಕೆ ಎಂಬುದು ಇವುಗಳ ಭಾವ. ಕನ್ಯೆಯ ಗೋತ್ರ ವರನ ಗೋತ್ರಕ್ಕೆ ಪರಿವರ್ತನೆಗೊಳ್ಳುವ ಸಂದರ್ಭವೂ ಇದೇ ಆಗಿದೆ[೧]. ಇನ್ನು ಮುಂದೆ ವಧೂವರರು ಪತಿಪತ್ನಿಯರು ಎಂದು ವ್ಯವಹರಿಸಲ್ಪಡುವರು.

## ಶಿರೋಧಾರೆ

ಇದು ಆಡುಭಾಷೆಯಲ್ಲಿ ಸುರಗಿ ಎಂಬುದಾಗಿ ಪ್ರಸಿದ್ಧವಾಗಿರುವ ಕಾರ್ಯ. ವಧೂವರರು ಪರಸ್ಪರ ಕೈಹಿಡಿದು ಒಬ್ಬರ ತಲೆ ಮತ್ತೊಬ್ಬರ ತಲೆಗೆ ತಾಕುವಂತೆ ಪಶ್ಚಿಮಾಭಿಮುಖವಾಗಿ ನಿಲ್ಲಬೇಕು. ಅವರಿಬ್ಬರ ಶಿರಸ್ಸಿನ ಮೇಲೆ ಆ ಮುನ್ನವೇ ಸಿದ್ಧಪಡಿಸಿದ ಕಲಶಗಳ ನೀರನ್ನು ಸುರಿಯುವುದೇ ಈ ಶಿರೋಧಾರೆಯ ಅರ್ಥ. ಆ ಸಮಯದಲ್ಲಿ ಆಶೀರ್ವಾದ ರೂಪವಾಗಿ ವಿಪ್ರವರ್ಯರು ಕೆಳಗಿನ ಮಂತ್ರಗಳನ್ನು ಹೇಳಬೇಕು. ಪ್ರತಿಮಂತ್ರದ ಕೊನೆಗೂ ಶಾಂತಿರಸ್ತು , ಪುಷ್ಟಿರಸ್ತು ಎಂಬುದಾಗಿ ಹಾರೈಸಬೇಕು :

ಅವಿಧವಾ ಭವ ವರ್ಷಾಣಿ ಶತಂ ಸಾಗ್ರಂ ತು ಸುವ್ರತಾ ।
ತೇಜಸ್ವಿ ಚ ಯಶಸ್ವೀ ಚ ಧರ್ಮಪತ್ನೀ ಪತಿವ್ರತಾ ॥
ಜನಯದ್ಬಹುಪುತ್ರಾಣಿ ಮಾ ಚ ದುಃಖಂ ಲಭೇತ್ ಕ್ವಚಿತ್ ।
ಭರ್ತಾ ತೇ ಸೋಮಪಾ ನಿತ್ಯಂ ಭವೇದ್ಧರ್ಮಪರಾಯಣಃ ॥
ಅಷ್ಟಪುತ್ರಾ ಭವ ತ್ವಂ ಚ ಸುಭಗಾ ಚ ಪತಿವ್ರತಾ ।
ಭರ್ತುಶ್ಚೈವ ಪಿತುರ್ಭ್ರಾತುರ್ಹೃದಯಾನಂದಿನೀ ಸದಾ ॥
ಇಂದ್ರಸ್ಯ ತು ಯಥೇಂದ್ರಾಣೀ ಶ್ರೀಧರಸ್ಯ ಯಥಾ ಶ್ರಿಯಾ ।
ಶಂಕರಸ್ಯ ಯಥಾ ಗೌರೀ ತದ್ವದ್ಭರ್ತುರಪಿ ಭರ್ತರಿ ॥
ಅತ್ರೇರ್ಯಥಾನುಸೂಯಾ ಸ್ಯಾದ್ವಸಿಷ್ಠಸ್ಯಾಪ್ಯರುಂಧತೀ ।
ಕೌಶಿಕಸ್ಯ ಯಥಾ ಸತೀ ತಥಾ ತ್ವಮಪಿ ಭರ್ತರಿ ॥
ಧ್ರುವೈಧಿಪೋಷ್ಯಾ ಮಯಿ ಮಹ್ಯಂ ತ್ವಾದಾದ್ಬೃಹಸ್ಪತಿಃ ।
ಮಯಾ ಪತ್ಯಾ ಪ್ರಜಾವತೀ ಸಂಜೀವ ಶರದಃ ಶತಮ್ ॥

## ಗೃಹಪ್ರವೇಶನೀಯ ಹೋಮ

ವಿವಾಹದಿನದಂದು ಸಂಜೆ ವರನು ವಧುವಿನೊಂದಿಗೆ ತನ್ನ ಮನೆಗೆ ಆಗಮಿಸುವನು. ಇದು ಮನೆತುಂಬಿಸಿಕೊಳ್ಳುವ ಕಾರ್ಯ ಎಂಬುದಾಗಿ ಪ್ರಸಿದ್ಧ. ಆ ಕಾಲಕ್ಕೆ ನಡೆಸಬೇಕಾದ ಹೋಮವೇ ಗೃಹಪ್ರವೇಶನೀಯ ಹೋಮ. ಇದು ಮುಖ್ಯವಾಗಿ ವರನ ಸ್ವಗೃಹದಲ್ಲಿ ನಡೆಯಬೇಕಾದ ಹೋಮ. ಹೆಚ್ಚಾಗಿ ವಿವಾಹದ ಸ್ಥಳದಲ್ಲೇ ನಡೆಯುವ ಪದ್ಧತಿ ಉಂಟು. ವರನು ಸಾಯಂಸಂಧ್ಯಾವಂದನೆ ಅನಂತರ ಔಪಾಸನವನ್ನು ಆರಂಭಿಸುವನು. ವಿವಾಹ

---

೧. ಸ್ವಗೋತ್ರಾದ್ಭ್ರಶ್ಯತೇ ನಾರೀ ವಿವಾಹಾತ್ ಸಪ್ತಮೇ ಪದೇ । -ಕಪಿಲಸ್ಮೃತಿ(೪೧೦) ಲಿಖಿತಸ್ಮೃತಿ(೨೬)

ಹೋಮದ ಅಗ್ನಿಯನ್ನು ಹೃದಯದಲ್ಲಿ ಸಮಾರೋಪಿಸಿಕೊಂಡು, ಅದನ್ನು ಈ ಅಗ್ನಿಯಲ್ಲಿ ಆವಾಹಿಸುವ ಅಗ್ನಿಪ್ರತ್ಯವರೋಹಣ ಕ್ರಿಯೆ ನಡೆಯುವುದು. ಈ ಅಗ್ನಿಯಲ್ಲಿ ಅಗ್ನಿ ಹಾಗೂ ಸಪತ್ನೀಕರಾದ ಪ್ರಜಾಪತಿಗೆ ಆಹುತಿಪ್ರದಾನ. ಸೂರ್ಯಪ್ರಜಾಪತಿಗೆ ಮಾಡುವ ಉಪಸ್ಥಾನ ಪ್ರಾತರೌಪಾಸನ ಎನ್ನಿಸಿದರೆ ಅಗ್ನಿ ಪ್ರಜಾಪತಿಗೆ ಮಾಡುವ ಉಪಸ್ಥಾನ ಸಾಯಮೌಪಾಸನ ಎನ್ನಿಸುವುದು. ಔಪಾಸನಾಗ್ನಿಯಲ್ಲಿಯೇ ಔಪಾಸನ ಪೂರೈಸಿದ ಮೇಲೆ ಹೋಮ ನಡೆಯುವುದು. ಆದರಲ್ಲಿ ಸೂರ್ಯಾಸಾವಿತ್ರಿಗೆ ೪ ಆಹುತಿಗಳು ನಡೆಯುವವು. ಪತ್ನೀ ಜೊತೆಯಲ್ಲಿ ಇರುವಳು. ದಧಿಪ್ರಾಶನ ಹಾಗೂ ಹುತಭಸ್ಮಗಳ ಧಾರಣಗಳೊಂದಿಗೆ ಹೋಮಕಾರ್ಯ ಪೂರೈಸುವುದು. ಆ ವೇಳೆಗ ಹಸೆಮಣೆಯ ಮೇಲೆ ಕೂಡಿಸಿ, ವಧೂವರರಿಗೆ ಸುವಾಸಿನಿಯರಿಂದ ಆರತಿಯ ಕಾರ್ಯಕ್ರಮ.

## ಧ್ರುವಾರುಂಧತೀ ದರ್ಶನ

ವಿವಾಹದ ದಿನದಂದು ರಾತ್ರಿಯಲ್ಲಿ ವಧುವಿಗೆ ವರನು ಆಗಸದಲ್ಲಿ ಧ್ರುವನಕ್ಷತ್ರ, ಸಪ್ತರ್ಷಿಮಂಡಲ ಹಾಗೂ ಅರುಂಧತಿ ನಕ್ಷತ್ರಗಳನ್ನು ತೋರಿಸುವನು[೧]. ಧ್ರುವನ ದರ್ಶನವು ದೀರ್ಘಾಯುಷ್ಯಕ್ಕೆ, ಸಪ್ತರ್ಷಿಗಳ ದರ್ಶನವು ಸದಾಚಾರ ಪರಾಯಣತೆಗೆ ಸಾಧನವಾದರೆ [೨]ಅರುಂಧತೀ ನಕ್ಷತ್ರದ ದರ್ಶನ ವಧೂವಿಗೆ ಅರುಂಧತಿಯಂತೆ ಆದರ್ಶ

---

೧. ಧ್ರುವ-ಅರುಂಧತಿದರ್ಶನ ಮೇಲ್ನೋಟಕ್ಕೆ ಆ ನಕ್ಷತ್ರಗಳ ದರ್ಶನ ಮಾತ್ರ ಎನ್ನಿಸುವುದು. ಆದರೆ ವಸ್ತುಸ್ಥಿತಿ ಅದಲ್ಲ, ಅದರ ಮುಖ್ಯ ಉದ್ದೇಶ ಧ್ರುವ-ಅರುಂಧತಿಯರ ಆದರ್ಶವನ್ನು ವಧೂವರರಿಗೆ ತಿಳಿಯಪಡಿಸುವ ಮೂಲಕ ಅವರಿಗೆ ಜೀವನದಲ್ಲಿ ಅಪಾರವಾದ ಸಾಧನೆ ಮಾಡುವ ಅವಕಾಶವನ್ನು ಅರಿತು ಮಾಡುವಂತೆ ಕಲ್ಪಿಸಿಕೊಡುವುದೇ ಆಗಿದೆ ಎಂಬುದನ್ನು ಅರಿಯುವ ಅಗತ್ಯವಿದೆ. ಧ್ರುವ ೫ ವರ್ಷದ ಮಗುವಾಗಿದ್ದಾಗಲೇ ತಾಯಿಯ ಆದೇಶದಂತೆ ಕಾಡಿಗೆ ತೆರಳಿ ಅಪ್ರತಿಮವಾದಂತಹ ತಪಸ್ಸನ್ನಾಚರಿಸಿ, ಆಗಸದಲ್ಲಿ ಶಾಶ್ವತ ಬೆಳಗುವ ಧ್ರುವತಾರೆ ಎನ್ನಿಸಿದ್ದು ಪೌರಾಣಿಕ ವಿವರ. ಧ್ರುವ ವಯಸ್ಸಿನಲ್ಲಿ ಚಿಕ್ಕವನಾದರೂ ಅಪ್ರತಿಮ ಸಾಧನೆ ಮಾಡಿ ಶ್ರೀಹರಿಯ ವಾಸುದೇವರೂಪವನ್ನು ಸಾಕ್ಷಾತ್ಕರಿಸಿಕೊಂಡ ಅದ್ಭುತ ಸಾಧನೆ ಮಾಡಿದವನು. ವಾಸುದೇವರೂಪ ಮೋಕ್ಷದಾಯಕವಾದ ಭಗವದ್ರೂಪ. ಜೀವನದಲ್ಲಿ ಉತ್ತಮಸಾಧನೆ ಮಾಡುತ್ತಾ ಭಗವದನುಗ್ರಹದಿಂದ ಮುಕ್ತಿ ಗಳಿಸುವ ಗುರಿಯನ್ನು ತಲುಪುವ ಧ್ರುವತಾರೆಯಂತೆ ಬದುಕುವುದು ಇದರ ಸಂದೇಶ. ಇನ್ನು ಅರುಂಧತಿಯು ಕರ್ದಮ-ದೇವಹೂತಿಯರ ಪುತ್ರಿ. ವಸಿಷ್ಠರ ಪತ್ನಿ ಎನ್ನಿಸಿ ತನ್ನ ಅನುಪಮ ಪಾತಿವ್ರತ್ಯದಿಂದ ಸ್ತ್ರೀಕುಲಕ್ಕೆ ದಾರಿದೀಪವೆನ್ನಿಸುವಂತಹ ಬದುಕನ್ನು ಬಾಳಿದ ಮಹಾಸತಿ. ಈ ಅರುಂಧತಿ ಆದರ್ಶ ವಧೂವಿನ ಪಾಲಿಗೆ ಪಾತಿವ್ರತ್ಯದ ನಿಜವಾದ ಅರ್ಥವನ್ನು ತಿಳಿಯುವ ಸದವಕಾಶವಾಗಿದ್ದು ಜೀವನದಲ್ಲಿ ಅದ್ಭುತ ಸಾಧನೆಗೆ ಸ್ಫೂರ್ತಿನೀಡುವ ಪ್ರತೀಕದಂತಿದೆ ಎಂಬ ತತ್ತ್ವವನ್ನು ತಿಳಿಯಬೇಕು.

೨. ವಧೂವರರು ಬಿಳಿಎತ್ತಿನ ಚರ್ಮದ ಮೇಲೆ ಆಗಲೀ, ಅಥವಾ ಕುಶಗಳ ಮೇಲೆ ಆಗಲೀ ಕುಳಿತು ನಕ್ಷತ್ರ ದರ್ಶನಕ್ಕೆ ಕಾಯಬೇಕು. ದಂಪತಿಗಳಿಬ್ಬರು ಪರಸ್ಪರ ಪೂರ್ವ ಹಾಗೂ ಉತ್ತರಕ್ಕೆ ಮುಖಮಾಡಿ ಕುಳಿತುಕೊಳ್ಳಬೇಕು. ಪೂರ್ವದಿಕ್ಕಿಗೆ ಕುಳಿತಾಗ ಪತಿಯ ಬಲಭಾಗದಲ್ಲಿ ಭಾರ್ಯೆಯು,

ಸತಿಯಾಗುವ ಸ್ಫೂರ್ತಿಗೆ ಸಾಧನ. ಸಪ್ತರ್ಷಿಮಂಡಲದಲ್ಲಿ ವಸಿಷ್ಠ ನಕ್ಷತ್ರದ ಬಳಿ ಕಂಡೂಕಾಣದಂತಿರುವ ಕಿರು ನಕ್ಷತ್ರ ಅರುಂಧತೀ. ಈ ಕಿರುನಕ್ಷತ್ರವನ್ನು ನೋಡುವುದು ಸಾಹಸದ ಕಾರ್ಯವೇ ಸರಿ. ಸಂಸ್ಕೃತದಲ್ಲಿ ಇದು ಅರುಂಧತೀದರ್ಶನನ್ಯಾಯ ಎಂಬುದಾಗಿ ಪ್ರಸಿದ್ಧ. ಈ ಅರುಂಧತೀ ದರ್ಶನದ ವರೆಗೂ ನವದಂಪತಿಗಳಿಗೆ ಪರಸ್ಪರ ಮಾತುಕತೆಗೆ ಅವಕಾಶವಿರುವುದಿಲ್ಲ ಎಂಬುದು ವಿಶೇಷ[1]. ಆ ಬಳಿಕ ಮಾತುಕತೆಗಳು ಪರಸ್ಪರ ಹೊಂದಾಣಿಕೆಗೆ ಪೂರಕವೆನ್ನಿಸುವ ಅನುಗ್ರಹವನ್ನು ವಾಕ್ಕೋವಿದರಾದ ಋಷಿಗಳು ನೀಡುವರು ಎಂಬುದು ಇದರ ಹಿನ್ನೆಲೆ[2]. ಈ ಋಷಿಗಳ ಆರಾಧನೆಯ ಮುಂದೆ ಋಷಿಪಂಚಮಿ ವ್ರತಕ್ಕೆ ಪೂರಕವೆನ್ನಿಸುವಂತಿರುವುದು ಗಮನಾರ್ಹ. ಸ್ವತಃ ಗೃಹಸ್ಥರಾಗಿದ್ದು ಅಪಾರವಾದ ಆಧ್ಯಾತ್ಮಿಕ ಸಾಧನೆಗೆ ಹೆಸರಾದವರು ಈ ಋಷಿಗಳು ಎಂಬುದು ವಿಶೇಷ. ಅವರ ಆದರ್ಶ ಗೃಹಸ್ಥಾಶ್ರಮಿಗಳಿಗೆ ಅತ್ಯಗತ್ಯ ಎಂಬ ಸಂದೇಶವೂ ಈ ಪ್ರಸಂಗದಿಂದ ಸೂಚಿತ.

---

ಉತ್ತರಮುಖವಾಗಿ ಕುಳಿತ ಪಕ್ಷದಲ್ಲಿ ಪತಿಯ ಹಿಂಭಾಗ ಅಥವಾ ಎಡಭಾಗದಲ್ಲಿ ಭಾರ್ಯೆಯು ಕುಳಿತುಕೊಳ್ಳಬೇಕು. ಹಾಗೆ ಕುಳಿತು ನಕ್ಷತ್ರೋದಯದ ವರೆಗೆ ಮೌನದಿಂದಿರಬೇಕು. ನಕ್ಷತ್ರ ಉದಯ ವಾದ ಬಳಿಕ ಪ್ರಾಙ್ಮುಖ ಅಥವಾ ಉದಙ್ಮುಖರಾಗಿ ದಿಕ್ಕುಗಳನ್ನು ಪೂಜಿಸಬೇಕು. ನಕ್ಷತ್ರಾದಿಗಳು ಮೋಡ ಮೊದಲಾದ ಅಡಚಣೆಗಳಿಂದಾಗಿ ಕಾಣದೇ ಹೋದಾಗ ಆ ದಿಕ್ಕಿಗೆ ಪೂಜೆಯನ್ನಾದರೂ ಸಲ್ಲಿಸಬೇಕು. ಆ ಸಮಯದಲ್ಲಿ ವಧುವಿನೊಂದಿಗೆ ಮಧುರ ನುಡಿಗಳನ್ನಾಡಿ, ಪುನಃ ಮಂಟಪಕ್ಕೆ ಹಿಂತಿರುಗಿ ಅಗ್ನಿಯಲ್ಲಿ ಆರಾಧನೆಯನ್ನು ಮುಂದುವರೆಸಬೇಕು.

ಪ್ರಾಙ್ಮುಖತ್ವಪಕ್ಷೇ ಪತ್ಯುರ್ದಕ್ಷಿಣತೋ ಭಾರ್ಯಾ । ಉದಙ್ಮುಖತ್ವಪಕ್ಷೇ ತಸ್ಯ ಪೃಷ್ಠತೋ ವಾಮಭಾಗೇ ವಾ । ಉಭಯೋರ್ಮಂತ್ರಃ । ಇತ ಆರಭ್ಯ ನಕ್ಷತ್ರೋದಯಪರ್ಯಂತಂ ವಾಗ್ಯತಾ-ವಾಸಾತೇ । ನಕ್ಷತ್ರೋದಯೇ ಸತಿ ಪ್ರಾಙ್ಮುಖಾವುದಙ್ಮುಖೌ ವಾ ಭೂತ್ವಾ ದಿಶ ಉಪತಿಷ್ಠತೇ । ನಕ್ಷತ್ರಾದೀನಾಮಭ್ರಾದಿನಾ ಪ್ರತಿಬಂಧೇನಾದರ್ಶನೇಽಪಿ ತಸ್ಯಾಂ ತಸ್ಯಾಂ ದಿಶ್ಯುಪಸ್ಥಾನಂ ಕರ್ತವ್ಯಮ್ । ತತ ಉಪಸ್ಥಾನದೇಶ ಏವ ಮನಸ ಆಹ್ಲಾದಕೇನ ವಚಸಾ ಭಾರ್ಯಾಂ ಸಂಭಾಷ್ಯ ಪುನಃ ಶಾಲಾಂ ಪ್ರವಿಶ್ಯ ಭಾರ್ಯಯಾ ಸಹಾಪರೇಣಾಗ್ನಿಂ ಪ್ರಾಙ್ಮುಖ ಉಪವಿಶತಿ ।

ಧ್ರುವ-ಅರುಂಧತಿದರ್ಶನ ರಾತ್ರಿಕಾಲದಲ್ಲೇ ವಿಹಿತವಾದ ಕಾರ್ಯಕ್ರಮ. ಆದರೆ ಇಂದಿನ ದಿನಗಳಲ್ಲಿ ಅವಸರ, ಅವಿವೇಕ ಇತ್ಯಾದಿ ಕಾರಣಗಳಿಂದ ಮಧ್ಯಾಹ್ನದಂದೇ ಈ ಕಾರ್ಯಕ್ರಮವನ್ನೂ ಪೂರೈಸಿಬಿಡುವುದುಂಟು. ಅದು ಸರಿ ಎನ್ನಿಸದು. ರಾತ್ರಿಕಾಲದಲ್ಲೂ ಸಹ ಅರುಂಧತೀ ದರ್ಶನ ಸುಲಭಸಾಧ್ಯ ಎನ್ನಿಸುವುದಿಲ್ಲ. ಅಂತಹುದನ್ನು ಹಗಲಲ್ಲೇ ಮಾಡುವುದು ಎಂದರೆ ಶಾಸ್ತ್ರನಿಯಮಗಳ ಅಣಕಮಾತ್ರ ಎನ್ನಿಸುವುದು. ರಾತ್ರಿಯಲ್ಲಿ ಸೂರ್ಯದರ್ಶನ ಮಾಡುವ ಪ್ರಯತ್ನದಷ್ಟೇ ಆಭಾಸ. ಇವನ್ನು ಸರಿಪಡಿಸಿಕೊಳ್ಳದಿದ್ದಲ್ಲಿ ದಂಪತಿಗಳು ಆದರಿಂದ ಲಭಿಸಬಹುದಾದ ನಿರೀಕ್ಷಿತ ಫಲದಿಂದ ವಂಚಿತರಾಗುವುದು ನಿಶ್ಚಿತ.

೧. ದಂಪತೀ ನ ವ್ಯಾಹರೇತ ಯಾವದ್ಧ್ರುವನಿರೀಕ್ಷಣಮ್ । -ಸ್ಮೃತಿರತ್ನ

೨. ತಾನ್ ದೃಷ್ಟ್ವಾ ಸೃಜತೋರ್ವಾಚಂ ತಯೋರಾಶಿಷ ಉತ್ತಮಾಃ । -ಸ್ಮೃತಿರತ್ನ

# ಐರಿಣೀ ಪೂಜಾ ಹಾಗೂ ದಾನ

ಮಂಟಪಪ್ರತಿಷ್ಠಾಪನೆಯ ಅಥವಾ ಪಾಣಿಗ್ರಹಣದಿಂದ ನಾಲ್ಕನೇ ದಿವಸದ ರಾತ್ರಿಯಲ್ಲಿ ಶಿಷ್ಟಾಚಾರಕ್ಕೆ ಅನುಗುಣವಾಗಿ ವರನ ತಾಯಿಗೆ ಬೀಗಿತ್ತಿಯಾದವಳು ಐರಿಣೀ ಎಂಬ ಬಿದಿರಿನ ಪಾತ್ರೆಯನ್ನು ದಾನವಾಗಿ ನೀಡಬೇಕು[೧]. ಇವು ಮುಖ್ಯವಾಗಿ[೨]:

ಸವಸ್ತ್ರಫಲತಾಂಬೂಲಂ ದಂಪತ್ಯೋರ್ವಂಶವರ್ಧನಮ್ ।
ಐರಿಣ್ಯಾಖ್ಯಂ ವಂಶಪಾತ್ರಂ ಪಕ್ವಾನ್ನೈಃ ಪರಿಪೂರಿತಮ್ ॥
ಕರಕೈ ರುದ್ರಸಂಖ್ಯೈಸ್ತು ಸುವರ್ಣೇನ ಸಮನ್ವಿತೈಃ ।
ಏತಾವದ್ಯೈರಿಣೀರೂಪಂ ಕರ್ತವ್ಯಂ ಕಿಲ ಸೂರಿಭಿಃ ॥
ಐರಿಣೀ ತ್ವಮುಮಾದೇವೀ ಮಹೇಶೋ ಗಿರಿಜಾಪತಿಃ ।
ಅತಸ್ತ್ವಾ ಪೂಜಯಿಷ್ಯಾಮಿ ಐರಿಣೀಂ ಸರ್ವಕಾಮದಾಮ್ ॥
ಸವಸ್ತ್ರಾಂ ಚ ಸದೀಪಾಂ ಚ ಶೂರ್ಪೈಃ ಷೋಡಶಭಿರ್ಯುತಾಮ್ ।
ವರಮಾತ್ರೇ ಪ್ರದಾಸ್ಯಾಮಿ ಕನ್ಯಾದಾನಸ್ಯ ಸಿದ್ಧಯೇ ॥
ವಂಶೋ ವಂಶಕರಃ ಶ್ರೇಷ್ಠೋ ವಂಶೋ ವಂಶಸಮುದ್ಭವಃ ।
ಅನೇನ ವಂಶದಾನೇನ ತುಷ್ಟೋ ವೃದ್ಧಿಂ ಕರೋತು ಮೇ ॥
ವಂಶಪಾತ್ರಮಿದಂ ಪುಣ್ಯಂ ವಂಶಜಾತಿಸಮುದ್ಭವಮ್ ।
ವಂಶಾನಾಮುತ್ತಮಂ ದಾನಮತಃ ಶಾಂತಿಂ ಪ್ರಯಚ್ಛ ಮೇ ॥
ವಂಶಪಾತ್ರಾಣಿ ಸರ್ವಾಣಿ ಮಯಾ ಸಂಪಾದಿತಾನಿ ವೈ ।
ಉಮಾಕಾಂತಾಯ ದತ್ತಾನಿ ಮಮ ಗೋತ್ರಾಭಿವೃದ್ಧಯೇ ॥
ವಂಶವೃದ್ಧಿಕರಂ ದಾನಂ ಸೌಭಾಗ್ಯಾದಿಸಮನ್ವಿತಮ್ ।
ವಸ್ತ್ರೇಣಾಚ್ಛಾದಿತಂ ಪೂರ್ಣಂ ಫಲಹೇಮಸಮನ್ವಿತಮ್ ॥
ಸರ್ವಪಾಪಕ್ಷಯಕರಂ ನಾನಾದ್ರವ್ಯೈಸ್ತು ಪೂರಿತಮ್ ।
ದಾನಾನಾಮುತ್ತಮಂ ದಾನಮತಃ ಶಾಂತಿಂ ಪ್ರಯಚ್ಛ ಮೇ ॥
ಸಪ್ತವರ್ಷಾ ತ್ವಿಯಂ ಕನ್ಯಾ ಪುತ್ರವತ್ ಪಾಲಿತಾ ಮಯಾ ।
ಇದಾನೀಂ ತವ ಪುತ್ರಾಯ ದತ್ತಾ ಸ್ನೇಹೇನ ಪಾಲ್ಯತಾಮ್ ॥

---

೧. ಅಥೈರಿಣೀಪೂಜನಂ ದಾನಂ ಚ - ಮಂಡಪಪ್ರತಿಷ್ಠಾದಿನಾತ್ಪಾಣಿಗ್ರಹಣಾದಿನಾದ್ವಾ ಚತುರ್ಥೇ ದಿವಸೇ ರಾತ್ರೌ ತತ್ರ ಭದ್ರಾದಿ ಸಂಭವೇ ದಿನೇ ಶಿಷ್ಟಾಚಾರಪ್ರಾಪ್ತಂ ವರಮಾತ್ರೇಽಭಾವೇ ತತ್ಸಮಾತ್ರೈವಾ ಕನ್ಯಾದಾತ್ರೈರಿಣ್ಯಾಖ್ಯವಂಶಪಾತ್ರದಾನಂ ಕಾರ್ಯಮ್ । -ಸಂಸ್ಕಾರಪದ್ಧತಿ

೨. ವರ್ಷಾಮಿರಪಥೇನೋಹಃ ಕರ್ತವ್ಯಃ । ವರಮಾತ್ರಾದ್ಯುತ್ಸಂಗೇ ವಧೂಮಾತಾ ಕನ್ಯಾಂ ತಥೈವೋಪವೇಶ್ಯ ಪ್ರಾರ್ಥಯೇತ್ । ತತೋ ವರಮಾತ್ರಾ । ವಧೂಮಾತ್ರಾದಿತತ್ಕ್ಷೇಯಸುವಾಸಿನೀಭ್ಯಃ ಸಕಂಚುಕಕ್ಷುದ್ರವಂಶಶೂರ್ಪವಾಯನಾನಿ ವಧ್ವಾ ದಾಪನೀಯಾನಿ ಆಚಾರಾತ್ । ತತೋ ದಾತಾ ಕರ್ಮಸಾದ್ಗುಣ್ಯಾಯ ವಿಷ್ಣುಂ ಸಂಸ್ಮರೇತ್ । ಏತಚ್ಚ ಸರ್ವಂ ಸಪತ್ನೀಕೇನಾಭುಕ್ತೇನೈವ ಕಾರ್ಯಮ್ । ಇತ್ಯೈರಿಣೀಪೂಜನಂ ದಾನಂ ಚ ॥ -ಸಂಸ್ಕಾರಪದ್ಧತಿ

## ಭೂಮದ ಊಟ

ವಿವಾಹದ ದಿನ ನೂತನ ವಧೂವರರನ್ನು ಜೊತೆಯಾಗಿ ಕೂಡಿಸಿ ಭೋಜನ ಮಾಡಿಸುವುದು ಶಾಸ್ತ್ರವು ನೀಡಿರುವ ವಿಶೇಷ ಅವಕಾಶ. ಜೀವನದಲ್ಲಿ ಆ ದಿನದ ಹೊರತು ಉಳಿದಂತೆ ಎಂದೂ ಸಹ ಪತಿಪತ್ನಿಯರು ಜೊತೆಯಲ್ಲಿ ಕುಳಿತು ಊಟ ಮಾಡುವಂತಿಲ್ಲ ಎಂಬುದು ಶಾಸ್ತ್ರಗಳ ಆದೇಶ. ಸಮಾವರ್ತನದಂದು ವರನು ಕೈಗೊಳ್ಳುವ ವಿಶೇಷ ನಿಯಮಗಳಲ್ಲಿ ಇದೂ ಸಹ ಸೇರಿದೆ ಎಂಬುದನ್ನು ಈಗಾಗಲೇ ಗಮನಿಸಲಾಗಿದೆ. ಆದರೆ ಅಂದು ಮಾತ್ರ ಅಂತಹ ವಿಶೇಷ ಅವಕಾಶ. ಆದರೆ ಇಂದಿನ ದಿನಗಳಲ್ಲಿ ಇದು ನೂತನ ದಂಪತಿಗಳು ಪರಸ್ಪರ ಒಂದೇ ಪಾತ್ರದಲ್ಲಿ ಭೋಜನ ಮಾಡುವ ಹಾಗೂ ಮಧ್ಯೆ ಮಧ್ಯೆ ಪರಸ್ಪರರ ಎಂಜಲನ್ನು ತಿನ್ನಿಸುವ ವಿಕೃತವಾದ ರೂಢಿ ಎಲ್ಲೆಡೆ ಕಂಡುಬರುತ್ತಿದೆ. ಇದು ಶಾಸ್ತ್ರದೃಷ್ಟಿಯಿಂದ ಮಾತ್ರವಲ್ಲದೆ, ಆರೋಗ್ಯದ ದೃಷ್ಟಿಯಿಂದಲೂ ಸಹ ನಿಷಿದ್ಧವೆನ್ನಿಸುವ ಕಾರ್ಯ. ತಿಳಿದವರಲ್ಲಿ ನಡೆಯುವ ವಿವಾಹಗಳಲ್ಲೂ ಇಂತಹ ಧರ್ಮವಿರುದ್ಧವಾದ ಉಚ್ಛಿಷ್ಟಭೋಜನದ ಪದ್ಧತಿ ವ್ಯಾಪಕವಾಗಿ ಕಂಡುಬರುವುದು ವಿಷಾದಕರ.

## ವಧೂಪ್ರವೇಶಕಾಲ

ವಿವಾಹದ ಬಳಿಕ ೧೬ನೇ ದಿವಸದ ಒಳಗೆ ಸಮದಿನಗಳಲ್ಲಿ ಅಥವಾ ೫, ೭, ೯ನೇ ದಿನಗಳಲ್ಲಿ ರಾತ್ರಿಕಾಲದಲ್ಲಿ ಸ್ಥಿರಲಗ್ನದಲ್ಲಿ ವಧೂಪ್ರವೇಶವು ಶುಭಕರ. ವಿವಾಹದ ದಿನವೂ ಪ್ರವೇಶಕ್ಕೆ ವಿಹಿತ. ೬ನೇ ದಿನವೂ ಆದೀತು. ಈ ೧೬ ದಿನಗಳಲ್ಲಿ ಚಂದ್ರಬಲ, ತಾರಾಬಲ, ಗುರುಶುಕ್ರ ಅಸ್ತ ಮೊದಲಾದ ಯಾವುದೇ ದೋಷಗಳು ಸಹ ಗಣನೆಗೆ ಬರುವುದಿಲ್ಲ. ೧೬ ದಿವಸಗಳು ಕಳೆದ ಮೇಲೆ ೧ ತಿಂಗಳ ವರೆಗೆ ವಿಷಮ ದಿನಗಳಲ್ಲಿ ಪ್ರವೇಶವು ಶುಭ. ಆ ಬಳಿಕ ೧ ವರ್ಷದವರೆಗೆ ವಿಷಮಮಾಸಗಳಲ್ಲಿ ವಿಷಮದಿನಗಳಲ್ಲಿ ವಧೂಪ್ರವೇಶವು ಶುಭ. ಸಮಮಾಸ, ಸಮ ದಿನಗಳು ನಿಷಿದ್ಧ. ೧೬ ದಿವಸ ಕಳೆದ ಮೇಲೆ ನಕ್ಷತ್ರಾದಿಗಳ ವಿವರವನ್ನೂ ಗಮನಿಸತಕ್ಕದ್ದು.

ಮದುವೆಯಾದ ಮೊದಲವರ್ಷದಲ್ಲಿ ಆಷಾಢಮಾಸದಲ್ಲಿ ವಧೂ ಗಂಡನ ಮನೆಯಲ್ಲಿದ್ದರೆ ತಾಯಿಗೆ ಅನಿಷ್ಟ ಜ್ಯೇಷ್ಠಮಾಸದಲ್ಲಿ ವರನ ಅಣ್ಣನಿಗೆ ಅನಿಷ್ಟ ಪುಷ್ಯಮಾಸದಲ್ಲಿ ಮಾವನಿಗೆ, ಅಧಿಕಮಾಸದಲ್ಲಿ ಹಾಗೂ ಚೈತ್ರಮಾಸದಲ್ಲಿ ತವರು-ಮನೆಯಲ್ಲಿದ್ದರೆ ತಂದೆಗೆ ಅನಿಷ್ಟ[1]. ಇವರಾರೂ ಜೀವಿಸಿರದಿದ್ದಲ್ಲಿ ಅನಿಷ್ಟದ ಪ್ರಸಕ್ತಿ

---

೧. ಉದ್ವಾಹಾತ್ ಪ್ರಥಮೇ ಶುಚೌ ಯದಿ ವಸೇದ್ಭರ್ತುರ್ಗೃಹೇ ಕನ್ಯಕಾ
ಹನ್ಯಾತ್ ತಜ್ಜನನೀಂ ಕ್ಷಯೇ ನಿಜತನುಂ ಜ್ಯೇಷ್ಠೇ ಪತಿಜ್ಯೇಷ್ಠಕಮ್ ।
ಪೌಷೇ ಚ ಶ್ವಶುರಂ ಪತಿಂ ಚ ಮಲಿನೇ ಚೈತ್ರೇ ಸ್ವಪಿತ್ರಾಲಯೇ
ತಿಷ್ಠಂತೀ ಪಿತರಂ ನಿಯಂತಿ ನ ಭಯಂ ತೇಷಾಮಭಾವೇ ಭವೇತ್ ॥ -ಜ್ಯೋತಿರ್ನಿಬಂಧ

ಇರದು. ಅನಿವಾರ್ಯ ಕಾರಣಗಳಿಂದ ಈ ಮಾಸ ನಿಯಮವನ್ನು ಪಾಲಿಸದಿದ್ದಲ್ಲಿ ಒಂದು ಪಕ್ಷ ಅಥವಾ ಒಂದು ವಾರ ಅಥವಾ ಕೇವಲ ೩ ದಿನಗಳ ವರೆಗಾದರೂ ಸಹ ವಧುವು ಈ ಮಾಸಗಳಲ್ಲಿ ತನ್ನ ತವರುಮನೆಯಲ್ಲಿ ಇರುವಷ್ಟು ನಿಯಮವನ್ನಾದರೂ ಪಾಲಿಸಬೇಕು ಎಂಬುದು ಸಂಪ್ರದಾಯ.

## ತ್ರಿರಾತ್ರವ್ರತ

ಅಂದಿನಿಂದ ನವದಂಪತಿಗಳಿಗೆ ೩ ದಿನಗಳ ಕಾಲ ಮೌನ ಹಾಗೂ ಬ್ರಹ್ಮಚರ್ಯದ ವಿಧಿಯ ಪಾಲನೆಯೊಂದಿಗೆ ದೇವತಾರಾಧನೆಯೂ ವಿಹಿತ. ಆ ಮೂರು ರಾತ್ರಿಗಳಲ್ಲಿ ಮೊದಲನೆಯ ದಿನ ಅವರಲ್ಲಿ ರೋಹಿಣೀ-ಚಂದ್ರರ ಸನ್ನಿಧಾನ ಹಾಗೂ ಅವರಿಂದ ದಾಕ್ಷಾಯಣಿಯ ಪೂಜೆ. ೨ನೆಯ ದಿನ ಅವರಲ್ಲಿ ಅಪ್ಸರೆ ಹಾಗೂ ಗಂಧರ್ವರ ಸನ್ನಿಧಾನ, ಆ ದಿನ ಪಾರ್ವತಿಯ ಮಹಾದೇವೀರೂಪದ ಆರಾಧನೆ ; ತೃತೀಯದಿನದಂದು ಸ್ವಾಹಾ-ಅಗ್ನಿಯರ ಸನ್ನಿಧಾನ, ಅಂದು ಕಾಳಿಕಾರೂಪದ ಆರಾಧನೆ. ನಾಲ್ಕನೆಯ ದಿನದಂದು ಸ್ವತಃ ಸತಿಪತಿಯರು[೧].

ತ್ರಿರಾತ್ರವ್ರತ ಅಥವಾ ವಿವಾಹವ್ರತ ಎಂದರೆ ಇದೇ. ಈ ಮೂರು ದಿನಗಳಂದು ಉಪ್ಪುಖಾರವಿಲ್ಲದ ಭೋಜನ ವಿಹಿತ. ಅದರಂತೆ ಮೌನವ್ರತವೂ ಸಹ. ನಾಲ್ಕನೇದಿನ ಪ್ರಾತಃಕಾಲದಲ್ಲಿ ವಧುವು ತಾನು ಧರಿಸಿದ ವಾಧೂಯವಸ್ತ್ರ(ಧಾರೆಯಸೀರೆ)ವನ್ನು ಸೂರ್ಯಾವರ್ಗವನ್ನು ಪಠಿಸಿದ ವಿಪ್ರನಿಗೆ ನೀಡಿ ನಮಸ್ಕರಿಸಬೇಕು. ಅವರು ಅದನ್ನು ಪುನಃ ಇವಳಿಗೆ ಕಾಣಿಕೆಯನ್ನಾಗಿ ನೀಡಿ, ಆಶೀರ್ವದಿಸುವರು. ಇಷ್ಟಪಟ್ಟಲ್ಲಿ ಅವರೇ ಅದನ್ನು ತಮಗಾಗಿ ಇರಿಸಿಕೊಳ್ಳುವುದೂ ಉಂಟು : ಸೂರ್ಯಾಂ ಯೋ ಬ್ರಹ್ಮಾ ವಿದ್ಯಾತ್ ಸ ಇತ್ ವಾಧೂಯಮರ್ಹತಿ. ಬಳಿಕ ಅಂದು ಪ್ರಾತರೌಪಾಸನ- ಕಾರ್ಯ ನಡೆಯಬೇಕು. ಐದೆಯರಿಗೆ ಫಲತಾಂಬೂಲಾದಿಗಳ ಸಮರ್ಪಣಕಾರ್ಯ ಆ ಬಳಿಕದ್ದು. ವಧೂವರರು ಆ ಬಳಿಕ ಕ್ಷೀರ ಹಾಗೂ ಆಜ್ಯವನ್ನು ಪ್ರಾಶನ ಮಾಡಿ, ಮಂಗಲಸ್ನಾನವನ್ನು ಪೂರೈಸಬೇಕು. ಮೊದಲ ಬಾರಿಗೆ ವಧುವು ವರನ ಪಾದವನ್ನು ತೊಳೆದು ಶಿರಸಾ ಧರಿಸಬೇಕು. ಇತರರೊಂದಿಗೆ ಮಂಗಲತೈಲ ಧರಿಸಿ, ಸ್ನಾನಕ್ಕೆಂದು ತೀರ್ಥದ ಬಳಿಗೆ ತೆರಳುವುದು ಉತ್ತಮಪಕ್ಷ. ಆ ಬಳಿಕ ಆ ನೀರಿನಲ್ಲಿ ಮೀನು ಹಿಡಿಯುವ ಆಟ[೨]. ಆ

---

೧. ಸೋಮೋಽದದತ್ ಗಂಧರ್ವಾಯ ಗಂಧರ್ವೋಽದದತ್ ಅಗ್ನಯೇ ।
ರಯಿಂ ಚ ಪುತ್ರಾಂಶ್ಚಾದಾದಗ್ನಿರ್ಮಹ್ಯಮಥೋ ಇಮಾಮ್ ॥ -ಸೂರ್ಯಾವರ್ಗ

೨. ಪ್ರಾಚೀನಕಾಲದಲ್ಲಿ ನವದಂಪತಿಗಳು ಕಿರಿವಯಸ್ಸಿನವರು ಆಗಿರುತ್ತಿದ್ದುದೇ ಹೆಚ್ಚು. ಆದರಿಂದಾಗಿ ಅವರಲ್ಲಿ ಪರಸ್ಪರ ಆತ್ಮೀಯತೆ ಬೆಳೆಯಲು ಇಂತಹ ಕಾರ್ಯಕ್ರಮಗಳನ್ನು ಯೋಜಿಸುತ್ತಿದ್ದುದು ಸಹಜವಾಗಿರುತ್ತಿತ್ತು, ಇತರರಿಗೆ ಅದರ ನೋಟ ಆಪ್ಯಾಯಮಾನವಾಗಿರುತ್ತಿತ್ತು. ಆದರೆ ಇಂದಿನ

ವರೆಗೆ ತನ್ನ ಕೈಲಿ ಹಿಡಿದಿದ್ದ ಬಿದಿರಿನ ದಂಡವನ್ನು ಆ ತೀರ್ಥದ ಬಳಿಯೇ ತೊರೆಯಬೇಕು. ಬಳಿಕ ವಸ್ತ್ರಾಂತರಮಾಡಿ ಆ ತೀರ್ಥ ತೀರದ ಮಂಡಲದಲ್ಲಿ ಸವಿತೃದೇವತೆಯನ್ನು ಆರಾಧಿಸಬೇಕು : ಶರ್ಮಾಸಿ ಶರ್ಮಾವಾಭ್ಯಾಂ ಯಚ್ಛ ಎಂದು ಬೇಡಿಕೊಳ್ಳಬೇಕು. ಬಳಿಕ ಊರಿನ ದೇವಸ್ಥಾನಕ್ಕೆ ತೆರಳಿ, ಅಲ್ಲಿ ನವವಧುವಿನಿಂದ ದ್ವಾರಲಕ್ಷ್ಮಿಯ ಪೂಜೆ ನಡೆಯಬೇಕು. ಅನಂತರ ಧಾನ್ಯ ಚೆಲ್ಲಿ ಭಾಗ್ಯಲಕ್ಷ್ಮಿಯಂತೆ ಮನೆಯೊಳಗೆ ಕಾಲಿರಿಸಬೇಕು. ಕೊನೆಯದಾಗಿ ಮತ್ತೊಮ್ಮೆ ಪುಣ್ಯಾಹವಾಚನ. ಬ್ರಾಹ್ಮಣ-ಸುವಾಸಿನಿಯರ ಭೋಜನ, ಅನ್ನಸಂತರ್ಪಣೆ ಹಾಗೂ ಮುಕ್ತಾಯ.

## ನಾಗಬಲಿ

ಈ ನಾಗಬಲಿ ಅಥವಾ ನಾಕಬಲಿಯು ನಾಗೋಲಿ ಕರೆಯಲ್ಪಡುವುದು. ಇಲ್ಲಿ ನಾಗ ಎಂದರೆ ಸರ್ಪ ಎಂದಲ್ಲ, ಆನೆ ಎಂದರ್ಥ. ಭೂಮಿಯನ್ನು ಹೊತ್ತಿರುವ ಅಷ್ಟದಿಗ್ಗಜಗಳಿಗೂ ಸಲ್ಲುವ ಪೂಜೆ ಎಂದು ಇದರ ಅರ್ಥ. [೧] ಶಾಸ್ತ್ರಗಳಲ್ಲಿ ಬಂದಿರುವಂತೆ ನಾನಾ ವರ್ಣಗಳಿಂದ ಮಾನಸ ಸರೋವರವನ್ನು ಬರೆದು ಅದರಲ್ಲಿ ಕಲ್ಪೋಕ್ತ ದೇವತೆಗಳನ್ನು, ಅಷ್ಟ ದಿಗ್ಗಜಗಳನ್ನು ಆಹ್ವಾನಿಸಿ ಪೂಜಿಸುವುದು ವಿಹಿತ ಪದ್ಧತಿ. ಇತ್ತೀಚಿನ ದಿನಗಳಲ್ಲಿ ಅಷ್ಟದಳ ಪದ್ಮವನ್ನು ಬರೆದು ಅದರ ಮೇಲೆ ೨ ಕಲಶಗಳನ್ನಿರಿಸಿ ಅವಕ್ಕೆ ಪೂಜೆ ಸಲ್ಲಿಸಿ, ೪ ದಿಕ್ಕಿನ ದೇವತೆಗಳಿಗೂ ಬಲಿಸಮರ್ಪಿಸುವ ಪದ್ಧತಿ ಇದೆ.

## ಆರತಕ್ಷತೆ

ಆರತಕ್ಷತೆ ಪ್ರತ್ಯೇಕವಾಗಿ ವಿವಾಹದ ಅಂಗವೆಂದು ಪರಿಗಣಿತವಾದ ಕಾರ್ಯಕ್ರಮವೇನಲ್ಲ, ಆದರೆ ವಧೂವರರ ಸಂದರ್ಶನ ಮೊದಲಾದ ಕಾರಣಗಳಿಂದ ಅದು ಇಂದು ಅವಾಂತರ ಪ್ರಧಾನಕಾರ್ಯವೆಂಬಂತೆ ಪರಿಗಣಿತವಾಗಿದೆ. ಅದರಲ್ಲಿ ತಪ್ಪೇನಿಲ್ಲ. ಆದರೆ ಅದು ನಡೆಯುವ ರೀತಿ ಮಾತ್ರ ಸಂತೋಷಕೊಡುವಂತಹುದಲ್ಲ. ಹೆಚ್ಚಿನ ಸಂದರ್ಭಗಳಲ್ಲಿ ವಧುಗಳು ಅಂದಿನ ದಿನ ಬ್ಯೂಟಿಪಾರ್ಲರ್‌ಗೆ ತೆರಳಿ ಅಲಂಕಾರ ಮಾಡಿಸಿಕೊಂಡು ಬರುವುದು ಸಾಮಾನ್ಯವೆನಿಸಿದೆ. ಬ್ಯೂಟಿಪಾರ್ಲರ್ ಎಂದರೆ ಒಂದು ರೀತಿಯಲ್ಲಿ ಹೆಂಗಸರ

---

ದಿನಗಳಲ್ಲಿ ಕೇವಲ ಪ್ರೌಢವಿವಾಹದ್ದೇ ಭರಾಟೆ. ಮದುವೆಗೆ ಮುನ್ನವೇ ಒಡನಾಟ. ಇದರಿಂದಾಗಿ ಇವುಗಳು ಅರ್ಥಕಳೆದುಕೊಂಡಂತಾಗಿದ್ದು ಆಚರಣೆಯಲ್ಲೂ ಉಳಿದುಕೊಂಡುಬಂದಿಲ್ಲ.

೧. ತತಶ್ಚತುರ್ಥೇ ದಿವಸೇ ಕಿಲ್ಕೈತೌ ಚಿರಂ ರತೌ ತಲ್ಪತನೌ ಫಣೀಂದ್ರೇ।
ವಿಲಂಬಿನಿ ಕ್ಷ್ಮಾಂ ವಹತೇತಿ ನೂನಂ ಪ್ರಚಕ್ರತುರ್ನಾಗಬಲಿಂ ಪ್ರಹೃಷ್ಟೌ॥ -ರು.ವಿ.(೧೬/೪೭)
-ದಿಗ್ಗಜೈರ್ಯುಷ್ಮಾಭಿಃ ಸಹ ಭೂಮಂಡಲಧಾರಿಶೇಷೇ ಅಸ್ಮದ್ಭೋಗಾರ್ಥಂ ಕಲ್ಪತಯಾ ಭೂಮೇರುಪರ್ಯೇವ ಸ್ಥಿತೇ ಸತಿ ಯೂಯಮೌದಾಸೀನ್ಯಂ ವಿಹಾಯ ಕ್ಷ್ಮಾಂ ಧಾರಯತೇತಿ ಧಿಯಾ ತದ್ಬಲಿರಿತಿ ಉತ್ಪ್ರೇಕ್ಷಾ। -ರುಗ್ಮಿಣೀಶವಿಜಯವ್ಯಾಖ್ಯಾನ(ಭಾವಪ್ರಕಾಶಿಕಾ)

ಕ್ಷೌರದ ಅಂಗಡಿ ಎನ್ನಬಹುದು. ಎಂದರೆ ಅಲ್ಲಿನ ವಾತಾವರಣವೇ ಮೈಲಿಗೆ ಎನ್ನಿಸುವಂತಹುದು. ಕೇಶಗಳನ್ನು ಕತ್ತರಿಸದೆ ಅಲಂಕಾರ ಮಾಡುವುದು ಅಲ್ಲಿ ಅಶಕ್ಯ. ಎಂದರೆ ಕೇಶಕರ್ತನವು ಮತ್ತೊಂದು ಬಗೆಯ ಮೈಲಿಗೆ. ಕನ್ಯೆ ಹಾಗೂ ಸುವಾಸಿನಿ ಸ್ತ್ರೀಯರಿಗಂತೂ ಅದು ವಿಹಿತವೇ ಆಗಿಲ್ಲ. ಆ ಸ್ಥಳ ಹಾಗೂ ಅಲ್ಲಿಯ ರೀತಿ ಎಲ್ಲವೂ ಮಂಗಳವೆನ್ನಿಸುವಂತಹುದಲ್ಲ. ಎಂದರೆ ವಿವಾಹದಂತಹ ಮಂಗಳಕಾರ್ಯದಲ್ಲಿ ಇಂತಹ ಅಮಂಗಳದ ಪ್ರವೇಶ ಎಂತಹ ಆಭಾಸ ಎಂಬುದನ್ನು ಜನ ಅರ್ಥಮಾಡಿಕೊಳ್ಳಬೇಕು. ಕೇವಲ ತೋರಿಕೆಗೋಸ್ಕರ ಇಂತಹ ಶಾಸ್ತ್ರಬಾಹಿರವಾದ ಕೃತ್ಯಗಳು ವಿವಾಹದಂತಹ ಮಂಗಲಕಾರ್ಯದಲ್ಲಿ ಹೇರಳವಾಗಿ ಪ್ರವೇಶ ಪಡೆದುಕೊಂಡಿದ್ದು ವಿವಾಹ ಒಂದು ಶುಭಕಾರ್ಯ ಎಂಬ ಭಾವವನ್ನೇ ಅಳಿಸಿಹಾಕುವಂತಾಗಿದೆ. ಅನೇಕ ಸಂಪ್ರದಾಯಸ್ಥರೂ ಸಹ ಈ ಬಗೆಯ ವ್ಯಾಮೋಹಕ್ಕೆ ಒಳಗಾಗಿರುವುದು ಸಮಾಜ ಸಾಗುತ್ತಿರುವ ದಿಕ್ಕನ್ನು ಸೂಚಿಸುವಂತಿದೆ. **ಗತಾನುಗತಿಕೋ ಲೋಕಃ ನ ಲೋಕಃ ಪಾರಮಾರ್ಥಿಕಃ** ಎಂಬ ಮಾತಿನಂತೆ ಯಾರೋ ಮಾಡಿದ್ದನ್ನು ತಾವು ಸಹ ಮಾಡಬೇಕೆಂಬ ಒಣ ಪ್ರತಿಷ್ಠೆ ಇಂತಹ ಬಗೆಬಗೆಯ ಅನರ್ಥಕ್ಕೆ ಪ್ರೇರಣೆಯಾಗಿದೆ. ಪುರೋಹಿತರು, ಗುರುಹಿರಿಯರು ಮೊದಲಾದವರು ಸೂಕ್ತ ಮಾರ್ಗದರ್ಶನ ಮಾಡುವ ಎಚ್ಚರ ವಹಿಸದಿದ್ದಲ್ಲಿ ಧಾರ್ಮಿಕ ಸಂಸ್ಕಾರಗಳು ನಗೆಪಾಟಲಿಗೀಡಾಗುವುದರಲ್ಲಿ ಸಂಶಯವಿಲ್ಲ. ಕೆಲವೊಮ್ಮೆ ವಿವಾಹದ ಇತರ ಪ್ರಧಾನ ಸಂಸ್ಕಾರಗಳು ಗೌಣವೆನ್ನಿಸಿ ಇಂತಹ ವಿಕೃತ ಆರತಕ್ಷತೆಯೇ ಪ್ರಧಾನ ಸ್ಥಾನವನ್ನಲಂಕರಿಸುವುದೂ ಉಂಟು. ಮತ್ತೆ ಕೆಲವರಂತೂ ವಿವಾಹದ ಹಿಂದಿನ ದಿನ ಸಂಜೆಯೇ ಆರತಕ್ಷತೆಯನ್ನು ಅಂದು ಸಾರ್ವಜನಿಕ ರಜೆ ಇತ್ಯಾದಿ ಕಾರಣಗಳಿಂದಾಗಿ ಏರ್ಪಡಿಸುವ ತಪ್ಪನ್ನು ಮಾಡುವುದುಂಟು. ಇದು ಸಹ ಶಾಸ್ತ್ರಸಮ್ಮತ ವೆನ್ನಿಸದು. ವಿವಾಹದ ಮುನ್ನ ಕನ್ಯಾವರರು ಹಾಗೆ ಜೊತೆಯಾಗಿ ಕೂಡುವುದನ್ನು ಶಾಸ್ತ್ರಗಳಿರಲಿ, ವಿವೇಕಿಗಳ ಸಂಪ್ರದಾಯವೂ ಸಹ ಒಪ್ಪಲಾರದು. ಇಂತಹ ಪ್ರಸಂಗಗಳಲ್ಲಿ ಸೀಮಾಂತ-ಪೂಜೆಯಂತಹ ಮುಖ್ಯ ಕಾರ್ಯದ ಜಾಗವನ್ನು ಇದು ಆಕ್ರಮಿಸುವ ಮತ್ತೊಂದು ಅಪಚಾರವೂ ಅನಿವಾರ್ಯವೆನ್ನಿಸುವುದು. ಅಲ್ಲೊಮ್ಮೆ ಇಲ್ಲೊಮ್ಮೆ ನಡೆಯುತ್ತಿದ್ದ ಇಂತಹ ಪ್ರಸಂಗ ದಿನೇ ದಿನೇ ಹೆಚ್ಚುತ್ತಿರುವುದು ಮಾತ್ರ ಆತಂಕದ ಸಂಗತಿಯೇ ಸರಿ.

ಆರತಕ್ಷತೆಯ ಮತ್ತೊಂದು ವಿಕೃತಿ ಎಂದರೆ 'ಆರ್ಕೆಸ್ಟ್ರಾ'(ವಾದ್ಯಗೋಷ್ಠಿ-ಗಾಯನ) ಎಂಬ ಹೆಸರಿನಲ್ಲಿ ಮನಸ್ಸಿಗೆ ಉದ್ವೇಗ ಹುಟ್ಟಿಸುವಂತಹ ವಾತಾವರಣದ ಶಾಂತತೆಗೆ ಧಕ್ಕೆ ತರಿಸುವಂತಹ ವಾದ್ಯಗೋಷ್ಠಿಗಳು. ಇವುಗಳಲ್ಲಿ ಸಾಮಾನ್ಯವಾಗಿ ಯುವಕರ ಮನಸ್ಸನ್ನು ವಿಕೃತ ಗೊಳಿಸುವಂತಹ ಉದ್ವೇಗಕರವಾದ ಚಲನಚಿತ್ರಗೀತೆಗಳೇ ತುಂಬಿರುತ್ತವೆ. ಪಾಶ್ಚಿಮಾತ್ಯ ಸಂಗೀತದ ಬೆರಕೆಯೊಂದಿಗೆ ಅವುಗಳ ಪರಿಣಾಮ ಸಾತ್ವಿಕ ಮನಸ್ಸಿಗೆ ಸ್ವಲ್ಪವೂ ಮುದನೀಡುವಂತಿರುವುದಿಲ್ಲ. ಅಂತಹ ವಾದ್ಯಗೋಷ್ಠಿಗಳಲ್ಲಿ ವಿಕೃತ ಹಾವ-

ಭಾವಗಳ ಮಿಶ್ರಿತವಾದ ಕುಣಿತವೂ ಸೇರಿ, ವಿವಾಹದಂತಹ ಧರ್ಮಕಾರ್ಯದ ಮಹತ್ವಕ್ಕೆ ಕುಂದುಂಟಾಗುವುದು ನಿಶ್ಚಿತ. ಇಂತಹ ಗೋಷ್ಠಿಗಳಿಗೆ ತೆರುವ ಹಣವೂ ಸಹ ದುಂದುವೆಚ್ಚದ ಸಾಲಿಗೆ ಸೇರುವಂತಹುದು. ಅನಿವಾರ್ಯವೆನ್ನಿಸಿದಲ್ಲಿ ದಾಸವಾಣಿಗಳನ್ನು ಏರ್ಪಡಿಸಿದಲ್ಲಿ ಅದು ಭೂಷಣವೆನ್ನಿಸಿ, ಪಾವಿತ್ರ್ಯಕ್ಕೆ ಮೆರುಗು ಬರುವಂತಾಗುವುದು.

ವಿವಾಹವು ಸಾಂಗೋಪಾಂಗವೆನ್ನಿಸಲು ಈ ರೀತಿಯಾದ ಕ್ರಮದ ವಿವೇಚನೆ ಅತ್ಯಗತ್ಯ. ಶ್ರುತಿಸ್ಮೃತಿಗಳಲ್ಲಿ ಬಂದಿರುವ ವಿವರಗಳನ್ನು ಪ್ರಾಚೀನ ಪ್ರಯೋಗಕ್ಕೆ ಅನುಗುಣವಾಗಿ ನಿಬಂಧಗ್ರಂಥಕಾರರು ಸಂಗ್ರಹಿಸಿ ಕೊಟ್ಟಿರುವರು. ಈ ಸಂಸ್ಕಾರದ ಪರಿವೆ ಇದ್ದಲ್ಲಿ ಸ್ವಲ್ಪಮಟ್ಟಿಗಾದರೂ ಕ್ರಮಬದ್ಧತೆ ಸಾಧ್ಯ. ಇಂದಿನ ಜನಾಂಗಕ್ಕೆ ಪ್ರಾಚೀನ ವಿವಾಹದ ಪರಿಕಲ್ಪನೆ ನಿರೀಕ್ಷೆಗಿಂತ ಹೆಚ್ಚಿನ ಪ್ರಮಾಣದಲ್ಲಿ ಮರೆಯಾಗಿದೆ. ಇತರ ಧರ್ಮಕಾರ್ಯ-ಗಳಂತೆ ಇದೂ ಸಹ ಒಂದು ಅಣಕು ಸಂಸ್ಕಾರದಂತೆ ಉಳಿದುಕೊಂಡಿದೆ. ಹೆಚ್ಚಿನ ವಿವಾಹಗಳು ಧರ್ಮದ ಚೌಕಟ್ಟಿನ ಹತ್ತಿರವೂ ಬಾರದಂತಹವು. ಇದರಿಂದಾಗಿಯೇ ವಿಧಿವಿಧಾನಗಳಿಗೆ ಲೋಪ ಅನಿವಾರ್ಯವೆನ್ನಿಸಿದೆ. ಜ್ಯೋತಿಷಿಗಳು, ಪುರೋಹಿತರು, ತಂದೆತಾಯಿಗಳು, ಗುರುಹಿರಿಯರು ಮೊದಲಾಗಿ ಹೆಚ್ಚಿನವರಿಗೆ ಪ್ರಾಚೀನ ಸಂಸ್ಕೃತಿಯ ಬಗ್ಗೆ ಆಸ್ಥೆಯೇ ಮರೆಯಾಗಿದೆ. ಅರಿತವರೂ ಮಾಡದ ಪಾಲು ಜ್ಯೋತಿಷಿಗಳದು ಗ್ರಹಾಧಾರಿತ ಬದುಕಾದರೆ, ಪುರೋಹಿತರದು ತಂತ್ರಾರಾಧಿತ ಬದುಕಾಗಿದೆ. ಮಂತ್ರಕ್ಕಿಂತ ಹೆಚ್ಚು ತಂತ್ರದ್ದೇ ಪ್ರಾಧಾನ್ಯ. ಅರ್ಥತಿಳಿದು, ಸ್ವತಃ ಪುಣ್ಯಸಂಪಾದನೆಯ ಪರಿಕಲ್ಪನೆಯಲ್ಲಿ ವಿವಾಹಾದಿ ಸಂಸ್ಕಾರಗಳನ್ನು ಮಾಡಿಸುವ ಎಚ್ಚರ ಹೆಚ್ಚಿನ ಪುರೋಹಿತರಲ್ಲಿ ಮಾಯವಾಗಿದೆ. ಮಾಡುವ ಆಸ್ಥೆ ಕನ್ಯಾವರರ ಕಡೆಯವರಿಗಿಲ್ಲವಾದರೆ ಮಾಡಿಸುವ ಆಸ್ಥೆ ಜ್ಯೋತಿಷಿಪುರೋಹಿತರಲ್ಲಿ ಅಷ್ಟಾಗಿ ಉಳಿದಿಲ್ಲ. ಪರಿಣಾಮವಾಗಿ ಇಂತಹ ಹೆಚ್ಚಿನ ವಿವಾಹಗಳು ಅಲ್ಪಕಾಲದಲ್ಲಿಯೇ ವಿಚ್ಛೇದನಗೊಂಡು ಸಂಸಾರದೊಂದಿಗೆ ಸಮಾಜವೂ ಸಹ ಸಂಸ್ಕೃತಿಯ ಪರಿಜ್ಞಾನದಿಂದ ವಂಚಿತರಾಗುವಂತಾಗಿದೆ.

## ಮೊದಲ ವರ್ಷದಲ್ಲಿ ಕೆಲವು ವಿಶೇಷ ನಿಯಮಗಳು

ವಿವಾಹವಾದ ಮೊದಲ ವರ್ಷ ಕೆಲವು ವಿಶೇಷ ನಿಯಮಗಳನ್ನು ಶಾಸ್ತ್ರಗಳು ವಿಧಿಸಿವೆ[1]:

---

೧. ವಿವಾಹವಾದ ಬಳಿಕ ೧ ವರ್ಷದವರೆಗೆ ಸಚೈಲಸ್ನಾನ, ಪ್ರೇತಾನುಯಾನ, ಅಪೂರ್ವ ತೀರ್ಥಯಾತ್ರೆಗಳು, ವಿಶೇಷ ದೇವತಾದರ್ಶನ, ಶಿರೋಮುಂಡನ, ಹೊಸತಾಗಿ ಗೃಹನಿರ್ಮಾಣ ಇತ್ಯಾದಿಗಳು ಪ್ರಶಸ್ತವಲ್ಲ. ೬ ತಿಂಗಳವರೆಗಾದರೂ ಇವುಗಳನ್ನು ವರ್ಜಿಸಬೇಕು. ಇತರ ಸಂಸ್ಕಾರಗಳ ಬಳಿಕ ೧ ತಿಂಗಳು, ಚೌಲಸಂಸ್ಕಾರದ ಬಳಿಕ ೩ ತಿಂಗಳು ಈ ಕಾರ್ಯಗಳು ಉಚಿತವಲ್ಲ ;ತಂದೆತಾಯಿಗಳ ಹೊರತು ಪಿಂಡಪ್ರದಾನಪೂರ್ವಕ ಶ್ರಾದ್ಧಗಳು ಪ್ರಶಸ್ತವಲ್ಲ. ಪಿತೃಶ್ರಾದ್ಧಾದಿಗಳು ಮುಗಿದ ಬಳಿಕವೇ ವಿವಾಹಾದಿ ಸಂಸ್ಕಾರಗಳನ್ನು ಹಮ್ಮಿಕೊಳ್ಳುವುದು ಅತ್ಯಂತ ಪ್ರಶಸ್ತ.

ಒಬ್ಬ ತಾಯಿಯ ಮಕ್ಕಳಾದ ಸೋದರರ ವಿವಾಹ ಒಂದೇ ವರ್ಷದಲ್ಲಿ ನಡೆಯುವಂತಿಲ್ಲ. ಅನಿವಾರ್ಯ ಪ್ರಸಂಗಗಳಲ್ಲಿ ಅದನ್ನು ಸ್ವಗೃಹದಲ್ಲಿ ಮಾಡದೆ, ಇತರ ಪುಣ್ಯತೀರ್ಥ, ಪುಣ್ಯಕ್ಷೇತ್ರಾದಿಗಳಲ್ಲಿ ಮಾಡಬಹುದು[೧].

---

ನ ಸ್ನಾಯಾದುತ್ಸವೇऽತೀತೇ ಮಂಗಲಂ ವಿನಿವರ್ತ್ಯ ಚ ।
ಅನುವ್ರಜ್ಯ ಸುಹೃದ್ಬಂಧೂನರ್ಚಯಿತ್ವೇಷ್ಟದೇವತಾಮ್ ।
ಸ್ನಾನಂ ಸಚೈಲಂ ತಿಲಮಿಶ್ರಕರ್ಮ ಪ್ರೇತಾನುಯಾನಂ ಕಲಶಪ್ರದಾನಮ್ ।
ಅಪೂರ್ವತೀರ್ಥಾಮರದರ್ಶನಂ ಚ ವಿವರ್ಜಯೇನ್ಮಂಗಲತೋऽಬ್ದಮೇಕಮ್ ।
ಮಾಸಷಟ್ಕಂ ವಿವಾಹಾದೌ ವ್ರತಪ್ರಾರಂಭಣೇऽಪಿ ಚ ।
ಜೀರ್ಣಭಾಂಡಾದಿ ನ ತ್ಯಾಜ್ಯಂ ಗೃಹಸಂಮಾರ್ಜನಂ ತಥಾ ।
ಊರ್ಧ್ವಂ ವಿವಾಹಾತ್ ಪುತ್ರಸ್ಯ ತಥಾ ಚ ವ್ರತಬಂಧನಾತ್ ।
ಆತ್ಮನೋ ಮುಂಡನಂ ನೈವ ವರ್ಷಂ ವರ್ಷಾರ್ಧಮೇವ ಚ ।
ಮಾಸಮನ್ಯತ್ರ ಸಂಸ್ಕಾರೇ ತ್ರಿಮಾಸಂ ಚೌಲಕರ್ಮಣಿ ।
ಪಿಂಡದಾನಂ ಮೃದಾ ಸ್ನಾನಂ ನ ಕುರ್ಯಾತ್ ತಿಲತರ್ಪಣಮ್ ।

ಅಯಂ ವಿವಾಹವ್ರತಬಂಧಚೌಲೋತ್ತರಂ ವರ್ಷಷಣ್ಮಾಸತ್ರಿಮಾಸೇಷು ಅನ್ಯವೃದ್ಧಿಶ್ರಾದ್ಧಯುತ ಮಂಗಲೋತ್ತರಂ ಚ ಮಾಸಮೇಕಂ ಪಿಂಡದಾನತಿಲತರ್ಪಣನಿಷೇಧಸ್ತ್ರಿಪುರುಷಸಪಿಂಡಾನಾಮೇವ । ಏವಂ ಮುಂಡನನಿಷೇಧೋऽಪಿ ವ್ರತೋದ್ವಾಹೌ ತು ಮಂಗಲಮ್ । ಇತಿ ಪಕ್ಷೇ ಮೌಂಜ್ಯುತ್ತರಂ ಮುಂಡನನಿಷೇಧಃ । ವ್ರತಬಂಧಸ್ಯ ಮುಂಡನರೂಪತ್ವಪಕ್ಷೇ ತು ನ ನಿಷೇಧಃ । ಆತ್ಮನೋ ಮುಂಡನಂ ಇತಿ ಕರ್ಮಾಂಗತಯಾ ಪ್ರಾಪ್ತಂ ರಾಗಪ್ರಾಪ್ತಂ ಚ ಮುಂಡನಂ ನಿಷಿಧ್ಯತೇ । ಅತ್ರಾಪವಾದಃ -

ಗಂಗಾಯಾಂ ಭಾಸ್ಕರಕ್ಷೇತ್ರೇ ಮಾತಾಪಿತ್ರೋರ್ಮೃತೇऽಹನಿ ।
ಆಧಾನೇ ಸೋಮಯಾಗಾದೌ ದರ್ಶಾದೌ ಕ್ಷೌರಮಿಷ್ಯತೇ ।
ಮಹಾಲಯೇ ಗಯಾಶ್ರಾದ್ಧೇ ಪಿತ್ರೋಃ ಪ್ರತ್ಯಾಬ್ದಿಕೇ ತಥಾ ।
ಸಪಿಂಡ್ಯಂತೇ ಪ್ರೇತಕರ್ಮ ಶ್ರಾದ್ಧಷೋಡಶಕೇಷ್ವಪಿ ।
ಕೃತೋದ್ವಾಹಾದಿಕಃ ಕುರ್ಯಾತ್ ಪಿಂಡದಾನಂ ಚ ತರ್ಪಣಮ್ ।
ಕೇಚಿದ್ಭ್ರಾತೃಪಿತೃವ್ಯಾದೇರಾಬ್ದಿಕೇऽಪ್ಯೇವಮೂಚಿರೇ ।

ಏವಂ ಪಿಂಡಪಿತೃಯಜ್ಞೇ ಅಷ್ಟಕಾನ್ವಷ್ಟಕಾಪೂರ್ವೇದ್ಯುಃ ಶ್ರಾದ್ಧೇಷು ನ ಪಿಂಡದಾನನಿಷೇಧಃ । ದರ್ಶಶ್ರಾದ್ಧಂ ತ್ವಪಿಂಡಕಮೇವ ತೇನ ಬಹ್ವೃಚಾನಾಂ ವ್ಯತಿಷಂಗೋ ನ । -ಧರ್ಮಸಿಂಧು

ಏಕೋದರಾಣಾಂ ಪುಂಸಾಂ ಸ್ಯಾದ್ವಿವಾಹೋ ನೈಕವತ್ಸರೇ ।
ಭಿನ್ನೋದರಾಣಾಂ ಕುರ್ವೀತ ಸ್ತ್ರೀಣಾಂ ಚೈವ ನ ಸಂಶಯಃ ॥ -ಸಂಗ್ರಹಕಾರ

೧. ಏಕಮಾತೃಪ್ರಸೂತಾನಾಮೇಕಸ್ಮಿನ್ ವತ್ಸರೇ ಯದಿ ।
ವಿವಾಹೋ ನೈವ ಕರ್ತವ್ಯೋ ನಿರ್ಗತೇ ತು ಋತುತ್ರಯೇ ।
ಗ್ರಾಮಾಂತರೇऽಪಿ ಕರ್ತವ್ಯಃ ಕರ್ತವ್ಯೋ ನೈಕವೇಶ್ಮನಿ ॥ -ಗಾರ್ಗ್ಯಸ್ಮೃತಿ

ಒಬ್ಬ ಮಗಳ ವಿವಾಹದ ಬಳಿಕ ಇನ್ನೊಬ್ಬ ಮಗಳ ವಿವಾಹವನ್ನು ೪ ದಿನಗಳ ಒಳಗೆ ಮಾಡುವಂತಿಲ್ಲ[೧]. ಅದರಂತೆ ಇತರ ಮಕ್ಕಳಿಗೆ ಆ ವರ್ಷದೊಳಗೆ ವಿವಾಹ ಮಾಡುವುದು ವಿಹಿತವಲ್ಲ. ಅನಿವಾರ್ಯ ಪ್ರಸಂಗಗಳಲ್ಲಿ ೪ ಅಥವಾ ೬ ತಿಂಗಳುಗಳ ಅಂತರವನ್ನಾದರೂ ಪಾಲಿಸಬೇಕು[೨]. ಮಗನಿಗೆ ಉಪನಯನ ಮಾಡಿದ ೬ ತಿಂಗಳ ಒಳಗೆ ಮಗಳ ವಿವಾಹ ನಿಷಿದ್ಧ[೩].

ವಿವಾಹಕ್ಕೆ ಸಂಬಂಧಿಸಿರುವಂತೆ ಇಲ್ಲಿ ಬಂದಿರುವ ಜಾತಕದ ಹೊಂದಾಣಿಕೆ ಮೊದಲಾದ ಸಕಲ ನಿಯಮಗಳು ಅನ್ವಯಿಸುವುದು ಧರ್ಮಕ್ಕೆ ಅನುಗುಣವಾಗಿ ನಡೆಯುವ ವಿವಾಹಗಳಿಗೆ ಮಾತ್ರ. ಧರ್ಮಬಾಹಿರವಾಗಿ ನಡೆಯುವ ವಿವಾಹಗಳಿಗೆ ಇವು ಯಾವುವೂ ಅನ್ವಯಿಸಲಾರವು ಎಂಬುದು ಮತ್ತೊಂದು ವಿಶೇಷ[೪]. ವಿವಾಹವೇ ಧರ್ಮಬಾಹಿರವಾದಾಗ ಅದರ ವಿಧಿವಿಧಾನಗಳಿಗೆ ಅರ್ಥವಾದರೂ ಎಲ್ಲಿರುವುದು ಅಲ್ಲವೆ !

ವಿವಾಹಕ್ಕೆ ಸಂಬಂಧಿಸಿದಂತೆ ಮತ್ತೊಂದು ವಿಶೇಷವು ನಾರದಸ್ಮೃತಿಯಲ್ಲಿದೆ : ಜನ್ಮಮಾಸ, ಜನ್ಮನಕ್ಷತ್ರ ಹಾಗೂ ಜನ್ಮತಿಥಿಗಳಂದು ಹಿರಿಯ ಮಗ ಅಥವಾ ಮಗಳ ವಿವಾಹವನ್ನು ಮಾಡಕೂಡದು[೫].

ವಿವಾಹವಾದ ಬಳಿಕ ೬ ತಿಂಗಳ ಮುನ್ನ ಬೆಟ್ಟ ಹತ್ತುವುದು ನಿಷಿದ್ಧ[೬].

---

೧. ಪುತ್ರೀಪರಿಣಯಾದೂರ್ಧ್ವಂ ಯಾವದ್ದಿನಚತುಷ್ಟಯಮ್ ।
ಪುತ್ರ್ಯಂತರಸ್ಯ ಕುರ್ವೀತ ನೋದ್ವಾಹಮಿತಿ ಸೂರಯಃ ॥
ಏಕಸ್ಮಿಂಸ್ತು ಗೃಹೇ ಕುರ್ಯಾದೇಕಾಮೇವ ಶುಭಕ್ರಿಯಾಮ್ ।
ಅನೇಕಾಂ ಯಸ್ತು ಕುರ್ವೀತ ಸ ನಾಶಮಧಿಗಚ್ಛತಿ ॥ -ಗಾರ್ಗ್ಯಸ್ಮೃತಿ

೨. ಏಕಃ ಕರ್ಮ ಶುಭಂ ಕುರ್ಯಾನ್ನ ಪುತ್ರ್ಯೋಃ ಪುತ್ರಯೋರಪಿ ।
ಷಣ್ಮಾಸೇ ವಾ ಚತುರ್ಮಾಸೇ ಪೂರ್ಣೇ ವರ್ಷೇ ಶುಭಾವಹಮ್ ॥ -ಮಿಹಿರಾಚಾರ್ಯ

೩. ಏಕಮಾತೃಪ್ರಸೂತಾನಾಮೇಕಸ್ಮಿನ್ನೇವ ವತ್ಸರೇ ।
ವಿವಾಹೋ ನೈವ ಕರ್ತವ್ಯಃ ಶುಭತ್ರಯಮೃತುತ್ರಯೇ ।
ನ ಕುರ್ಯಾದ್ವರ್ಷಭೇದೇ ತು ತ್ರಿಮಾಸಾದೂರ್ಧ್ವಮಾಚರೇತ್ ॥ -ಅಂಗೀರಾಃ
ಪುತ್ರಸ್ಯ ಪಾಣಿಗ್ರಹಣಾತ್ ಪರಸ್ತಾನ್ನ ಮಾಸಷಟ್ಕಾತ್ ತನಯಾವಿವಾಹಃ ।
ತದ್ವದ್ವಿವಾಹಾದಪಿ ನೋಪನೀತಿಸ್ತಥೋಪನೀತೇಃ ಪರತಶ್ಚ ಚೌಲಮ್ ॥ -ಶ್ರೀಧರೀಯ

೪. ಧರ್ಮ್ಯೇಷ್ವೇವ ವಿವಾಹೇಷು ಕಾಲಪ್ರತೀಕ್ಷಣಂ ನಾಧರ್ಮ್ಯೇಷು । -ಗೃಹ್ಯಪರಿಶಿಷ್ಟ

೫. ನ ಜನ್ಮಮಾಸೇ ಜನ್ಮರ್ಕ್ಷೇ ನ ಚ ಜನ್ಮದಿನೇ ತಥಾ ।
ಆದ್ಯಗರ್ಭಸುತಸ್ಯಾಥ ದುಹಿತುರ್ವಾ ಕರಗ್ರಹಃ ॥
ನ ಜನ್ಮಮಾಸೇ ಜನ್ಮರ್ಕ್ಷೇ ನ ಜನ್ಮದಿವಸೇ ತಥಾ । -ಗರ್ಗಃ

೬. ಷಣ್ಮಾಸಾವಧಿ ಲಕ್ಷ್ಮೀಶೋ ದೀಕ್ಷಿತೋಽಹಂ ಮಹಾಮತೇ ।
ನ ಶೈಲರಾಜಮಾರೋಹಮಿತಿ ನಿಶ್ಚಿತ್ಯ ದೇವರಾಟ್ ।

ಮಗಳಿಗೆ ಒಂದು ಮಗುವಾಗುವ ಮುನ್ನ ಅವಳ ಮನೆಯಲ್ಲಿ ಅವಳ ತಂದೆತಾಯಿಗಳಿಗೆ ಭೋಜನವು ಅಷ್ಟು ಪ್ರಶಸ್ತವಲ್ಲ:

ಅಪ್ರಜಾಯಾಂ ತು ಕನ್ಯಾಯಾಂ ನ ಭುಂಜೀತ ಕದಾಚನ ।
ದೌಹಿತ್ರಸ್ಯ ಮುಖಂ ದೃಷ್ಟ್ವಾ ಕಿಮರ್ಥಂ ಅನುಶೋಚತಿ ॥ -ಭವಿಷ್ಯಪುರಾಣ

ವಿಷ್ಣುಂ ಜಾಮತರಂ ಮನ್ಯೇ ತಸ್ಯ ಕೋಪಂ ನ ಕಾರಯೇತ್ ।
ಅಪ್ರಜಾಯಾಂ ತು ಕನ್ಯಾಯಾಂ ನಾಶ್ನೀಯಾತ್ ತಸ್ಯ ವೈ ಗೃಹೇ॥ -ಆದಿತ್ಯಪುರಾಣ

## ವಧುವಿಗೆ ಉಪದೇಶ್

ಸಂಸಾರದಲ್ಲಿ ವಧೂ-ವರರಿಬ್ಬರೂ ಒಂದು ಗಾಡಿಯ ಎತ್ತುಗಳಿದ್ದಂತೆ. ಇಬ್ಬರೂ ಪರಸ್ಪರ ಸಹಕರಿಸಿ ವರ್ತಿಸಿದಲ್ಲಿ ಜೀವನಯಾತ್ರೆ ಸುಖಕರವೆನ್ನಿಸುವುದು. ಆದರಲ್ಲಿ ಒಬ್ಬರ ಹಾದಿ ಬೇರೆ ಎನ್ನಿಸಿದರೂ ಸುಗಮಸಂಸಾರಕ್ಕೆ ಅಡ್ಡಿ ಆತಂಕಗಳು ತಪ್ಪಿದ್ದಲ್ಲ. ಇದರಲ್ಲಿ ಇಬ್ಬರದೂ ಸಮಾನಪಾಲು ಎಂಬುದು ನಿರ್ವಿವಾದ. ಆದರೆ ಹೆಣ್ಣಿನ ಪಾಲು ಸ್ವಲ್ಪ ಹೆಚ್ಚಿನದು ಎಂಬುದನ್ನು ಗಮನಿಸಬೇಕು. ಹೆಚ್ಚಿನ ಪ್ರಸಂಗಗಳಲ್ಲಿ ಸಂಪಾದನೆ ಗಂಡಿನ ಕರ್ತವ್ಯವಾದರೆ, ಮನೆಯ ನಿರ್ವಹಣೆ ಹೆಣ್ಣಿನ ಕರ್ತವ್ಯ : 'ಗೃಹಿಣೀ ಗೃಹಮುಚ್ಯತೇ[೨]' ಎಂಬ ಮಹಾಭಾರತದ ಮಾತು ಇದನ್ನು ಸ್ಫುಟಪಡಿಸಿದೆ. 'ನ ಭಾರ್ಯಾಸದೃಶಂ ಭಾಗ್ಯಮ್[೩]' ಎಂಬ ವೆಂಕಟೇಶಕಲ್ಯಾಣದ ಮಾತಿನಲ್ಲಿ ಪತ್ನಿಯು ಭಾಗ್ಯ ಎಂಬ ಮಾತು ಬಂದಿದೆ. ಇಂದೂ ಸಹ ಪ್ರಧಾನವಾಗಿ ಸಂಪಾದನೆ ಗಂಡಿನದೇ ಎಂಬ ಪ್ರಸಕ್ತಿ ಉಳಿದುಕೊಂಡಿದೆ. ನಗರ-ಪಟ್ಟಣಗಳಲ್ಲಿ ಇದಕ್ಕೆ ಅಪವಾದಗಳು ದೊರೆಯಬಹುದಾದರೂ, ಇತರೆಡೆಗಳಲ್ಲಿ ಇದು ಹೆಚ್ಚಾಗಿ ಕಂಡುಬರುವ ಪ್ರವೃತ್ತಿ. ಈ ಕಾರಣದಿಂದಾಗಿಯೇ ಮನೆಯಲ್ಲಿನ ಶಾಂತಿ-ಸಮಾಧಾನಗಳ ಸಂರಕ್ಷಣೆಗೆ ಗಂಡಿಗಿಂತ ಹೆಣ್ಣೇ ಹೆಚ್ಚು ಸಂಯಮದಿಂದ ವರ್ತಿಸಬೇಕಾದ ವಿಧಿಯನ್ನು ಪ್ರಾಚೀನಸಂಸ್ಕೃತಿ ಸಾರಿದೆ.

---

ಅಗಸ್ತ್ಯಭವನಂ ಗತ್ವಾ ತತ್ರ ವಾಸಮಕಲ್ಪಯತ್ ॥
- ಭವಿಷ್ಯೋತ್ತರಪುರಾಣ, ವೇಂಕಟೇಶಮಾಹಾತ್ಮ್ಯ(೧೧/೪೩೭)

೧. ಸಾವಿತ್ರೀವ ಚ ಕಲ್ಯಾಣೀ ಬಹುಪುತ್ರವತೀ ಭವ ।
ಸರ್ವಲೋಕಸ್ಯ ಜನನೀ ಭವ ಮಂಗಲದಾಯಿನೀ ॥
-ಭವಿಷ್ಯೋತ್ತರಪುರಾಣ, ವೇಂಕಟೇಶಮಾಹಾತ್ಮ್ಯ (೧೧/೩೬೨)

೨. ಗೃಹಾ ವೈ ಪತ್ನ್ಯೈ ಪ್ರತಿಷ್ಠಾಃ । -ಶತಪಥಬ್ರಾಹ್ಮಣ

೩. ನ ಚ ಮಾತೃಸಮಂ ಮಿತ್ರಂ ಜನಕೇನ ಸಮಂ ಸುಖಮ್ ।
ನ ಭಾರ್ಯಾ ಸದೃಶಂ ಭಾಗ್ಯಂ ನ ಪುತ್ರೇಣ ಸಮಾ ಗತಿಃ ।
ನ ಹಿ ಭ್ರಾತೃಸಮೋ ಬಂಧುಃ ನ ವಿಷ್ಣೋರ್ದೇವತಾ ಪರಾ ॥
-ಭವಿಷ್ಯೋತ್ತರಪುರಾಣ, ವೆಂಕಟೇಶಮಹಾತ್ಮ್ಯ(೧೧/೧೯-೨೦)

ಹೆಣ್ಣು ಸಹನೆಯ ಮೂರ್ತಿ ಎಂಬ ಮಾತಿನಲ್ಲೂ ಈ ಅಂಶ ಧ್ವನಿತವಾಗಿದೆ. ಈ ಹಿನ್ನೆಲೆಯಲ್ಲಿ ಪ್ರಾಚೀನಕಾಲದಿಂದಲೂ ವಧುವಿಗೆ ಉಪದೇಶ ಎಂಬುದು ರೂಢಿಯಲ್ಲಿ ಬಂದಿದೆ. ವೇದಮಂತ್ರಗಳಲ್ಲಿ ಕಂಡುಬರುವಂತೆ ವಧುವಿಗೆ ನೀಡಬೇಕಾದ ಹಿತೋಕ್ತಿಗಳು ಹೀಗಿವೆ :

ಮಹಾಭಾರತದ ದ್ರೌಪದೀ-ಸತ್ಯಭಾಮಾ ಸಂವಾದ ಪ್ರಸಂಗದಲ್ಲಿ ಬಂದಿರುವ ಸ್ತ್ರೀಧರ್ಮ[೧]ದ ವಿವರಗಳು ಸುಖಸಂಸಾರದ ಸೂತ್ರಗಳಂತೆ ಮಾನ್ಯವಾಗಿವೆ. ಪಾಂಡವರು ವನವಾಸದಲ್ಲಿದ್ದಾಗ ಅವರ ಕುಶಲವನ್ನು ವಿಚಾರಿಸಲೆಂದು ಶ್ರೀಕೃಷ್ಣ-ಸತ್ಯಭಾಮೆಯರು ಆಗಮಿಸಿದ ಪ್ರಸಂಗದಲ್ಲಿ ಸತ್ಯಭಾಮೆ ದ್ರೌಪದಿಯನ್ನು ಪಾತಿವ್ರತ್ಯಧರ್ಮಗಳ ಬಗ್ಗೆ ವಿವರಿಸಲು ಕೇಳಿದಾಗ ದ್ರೌಪದಿಯ ಮಾತಿನಲ್ಲಿ ಬಂದಿರುವ ವಿವರಗಳ ಸಾರ ಹೀಗಿದೆ :

ನ ಜಾತು ವಿಪ್ರಿಯಂ ಭರ್ತುಃ[೨] ಸ್ತ್ರಿಯಾ ಕಾರ್ಯಂ ಕಥಂಚನ । ......
ಅಹಂಕಾರಂ ವಿಹಾಯಾಹಂ ಕಾಮಕ್ರೋಧೌ ಚ ಸರ್ವದಾ ।
ಸದಾರಾನ್ ಪಾಂಡವಾನ್ ನಿತ್ಯಂ ಪ್ರಯತೋಪಚರಾಮ್ಯಹಮ್ ॥.....

ಪ್ರಣಯಂ ಪ್ರತಿಸಂಹೃತ್ಯ ನಿಧಾಯಾತ್ಮಾನಮಾತ್ಮನಿ ।
ಶುಶ್ರೂಷುರ್ನಿರಹಮ್ಮಾನಾ ಪತೀನಾಂ ಚಿತ್ತರಕ್ಷಿಣೀ ॥....

ದುರ್ವ್ಯಾಹೃತಾತ್ ಶಂಕಮಾನಾ ದುಃಸ್ಥಿತಾದ್ದುರವೇಕ್ಷಿತಾತ್ ।
ದುರಾಶಿತಾತ್ ದುರ್ವ್ರಜಿತಾದಿಂಗಿತಾಧ್ಯಾಸಿತಾದಪಿ ॥.....

ದೇವೋ ಮನುಷ್ಯೋ ಗಂಧರ್ವೋ ಯುವಾ ಚಾಪಿ ಸ್ವಲಂಕೃತಃ ।
ದ್ರವ್ಯವಾನಭಿರೂಪೋ ವಾ ನ ಮೇಽನ್ಯಃ ಪುರುಷೋ ಮತಃ ॥........

---

೧. ಕಾಳಿದಾಸನ ಸುಪ್ರಸಿದ್ಧ ಕೃತಿಯಾದ 'ಅಭಿಜ್ಞಾನಶಾಕುಂತಲ'ದಲ್ಲಿ ಕಣ್ವಮುನಿಯು ಪತಿಗೃಹಕ್ಕೆ ತೆರಳಿನಿಂತ ತನ್ನ ಸಾಕುಮಗಳಾದ ಶಕುಂತಲೆಗೆ ನೀಡುವ ಹಿತೋಕ್ತಿ ಆ ಕೃತಿಯ ಅತ್ಯುತ್ತಮ ನಾಲ್ಕುಶ್ಲೋಕಗಳಲ್ಲಿ ಒಂದು ಎಂಬುದಾಗಿ ಪರಿಗಣಿತವಾಗಿದೆ :

ಶುಶ್ರೂಷಸ್ವ ಗುರೂನ್ ಕುರು ಪ್ರಿಯಸಖೀವೃತ್ತಿಂ ಸಪತ್ನೀಜನೇ ।
ಭರ್ತುರ್ವಿಪ್ರಕೃತಾಽಪಿ ರೋಷಣತಯಾ ಮಾ ಸ್ಮ ಪ್ರತೀಪಂ ಗಮಃ ।
ಭೂಯಿಷ್ಠಂ ಭವ ದಕ್ಷಿಣಾ ಪರಿಜನೇ ಭಾಗ್ಯೇಷ್ವನುತ್ಸೇಕಿನೀ ।
ಯಾಂತ್ಯೇವಂ ಗೃಹಿಣೀಪದಂ ಯುವತಯೋ ವಾಮಾಃ ಕುಲಸ್ಯಾಧಯಃ ॥ (೪/೧೭)

ಗುರು-ಹಿರಿಯರನ್ನು ಸೇವಿಸು ; ಸವತಿಯರನ್ನು ಗೆಳತಿಯಂತೆ ಕಾಣು ; ಗಂಡ ಬೇಸರಿಸಿಕೊಂಡಾಗ ಮುನಿಸಿಕೊಂಡು ವಿರೋಧಕ್ಕೆ ತೊಡಗದಿರು ; ಸೇವಕಜನರಲ್ಲಿ ಔದಾರ್ಯದಿಂದ ವರ್ತಿಸು ; ಸಂಪತ್ತು ಬಂದಾಗ ಗರ್ವಪಡದಿರು ; ಹೀಗಿದ್ದಲ್ಲಿ ಯುವತಿಯರು ಗೃಹಿಣೀ ಎಂಬ ಗೌರವಕ್ಕೆ ಪಾತ್ರರಾಗುವರು. ತಪ್ಪಿ ನಡೆಯುವವರು ಕುಲದ ನೋವಿಗೆ ಕಾರಣರಾಗುವರು.

೨. ಭರ್ತಾ ದೇವೋ ಗುರುರ್ಭರ್ತಾ ಧರ್ಮತೀರ್ಥವ್ರತಾನಿ ಚ ।
ತಸ್ಮಾತ್ ಸರ್ವಂ ಪರಿತ್ಯಜ್ಯ ಪತಿಮೇಕಂ ಸಮರ್ಚಯೇತ್ ॥ -ಸ್ಕಂದಪುರಾಣ, ಕಾಶೀಖಂಡ(೪/೪೮)

ನಾಭುಕ್ತವತಿ ನಾಸ್ನಾತೇ ನಾಸಂವಿಷ್ಟೇ ಚ ಭರ್ತರಿ ।
ನ ಸಂವಿಶಾಮಿ ನಾಶ್ನಾಮಿ ಸದಾ ಕರ್ಮಕರೇಷ್ವಪಿ ॥..........

ಕ್ಷೇತ್ರಾದ್ವನಾದ್ವಾ ಗ್ರಾಮಾದ್ವಾ ಭರ್ತಾರಂ ಗೃಹಮಾಗತಮ್ ।
ಅಭ್ಯುತ್ಥಾಯಾಭಿನಂದಾಮಿ ಆಸನೇನೋದಕೇನ ಚ ॥........

ಪ್ರಮೃಷ್ಟಭಾಂಡಾ ಮೃಷ್ಟಾನ್ನಾ ಕಾಲೇ ಭೋಜನದಾಯಿನೀ ।.........

ಅತಿರಸ್ಕೃತಸಂಭಾಷಾ ದುಃಸ್ತ್ರಿಯೋ ನಾನುಸೇವತೀ ।
[೧]ಅನುಕೂಲವತೀ ನಿತ್ಯಂ ಭವಾಮ್ಯನಲಸಾ ಸಃ ॥...........

ಅನರ್ಮ ಚಾಪಿ ಹಸಿತಂ ದ್ವಾರಿಸ್ಥಾನಭಿಕ್ಷ್ಣಷಃ ।
ಅವಸ್ಕಾರೇ ಚಿರಸ್ಥಾನಂ ನಿಷ್ಕುಟೇಶು ಚ ವರ್ಜಯೇ ॥........

ಯದಾ ಪ್ರವಸತೇ ಭರ್ತಾ ಕುಟುಂಬಾರ್ಥೇನ ಕೇನಚಿತ್ ।
ಸುಮನೋವರ್ಣಕಾಪೇತ ಭವಾಮಿ ವ್ರತಚಾರಿಣೀ[೨] ॥..........

ಯಚ್ಚ ಭರ್ತಾ ನ ಪಿಬತಿ ಯಚ್ಚ ಭರ್ತಾ ನ ಸೇವತೇ ।
ಯಚ್ಚ ನಾಶ್ನಾತಿ ಮೇ ಭರ್ತಾ ಸರ್ವಂ ತದ್ವರ್ಜಯಾಮ್ಯಹಮ್ ॥.......

ಪತ್ಯಾಶ್ರಯೋಹಿ ಮೇ ಧರ್ಮೋ ಮತಃ ಸ್ತ್ರೀಣಾಂ ಸನಾತನಃ ।
ಸ ದೇವಃ ಸಾ ಗತಿರ್ನಾನ್ಯ ತಸ್ಯ ಕಾ ವಿಪ್ರಿಯಂ ಚರೇತ್ ॥.........

[೩]ಯಥೋಪದೇಶಂ ನಿಯತಾ ವರ್ತಮಾನಾ ವರಾಂಗನೇ ।
ಸ್ವಲಂಕೃತಾ ಸುಪ್ರಯತಾ ಭರ್ತುಃ ಪ್ರಿಯಹಿತೇ ರತಾ ॥.......

ನಿತ್ಯಮಾರ್ಯಾಮಹಂ ಕುಂತೀಂ ವೀರಸೂಂ ಸತ್ಯವಾದಿನೀಮ್ ।
ಸ್ವಯಂ ಪರಿಚರಾಮ್ಯೇತಾಂ ಪಾನಾಚ್ಛಾದನಭೋಜನೈಃ ॥.....

---

೧. ಸದಾ ಪ್ರಹೃಷ್ಟಯಾ ಭಾವ್ಯಂ ಗೃಹಕಾರ್ಯೇಷು ದಕ್ಷಯಾ ।
ಸುಸಂಸ್ಕೃತೋಪಸ್ಕರಯಾ ವ್ಯಯೇ ಚಾಮುಕ್ತಹಸ್ತಯಾ ॥ -ಮನುಸ್ಮೃತಿ(೫/೧೫೦)

೨. ಸವ್ಯಂ ಪಾದಂ ಚ ಭರ್ತುಶ್ಚ ಪ್ರಯಾಗಂ ವಿದ್ಧಿ ಸತ್ತಮ ।
ವಾಮಂ ಚ ಪುಷ್ಕರಂ ತಸ್ಯ ಯಾ ನಾರೀ ಪರಿಕಲ್ಪಯೇತ್ ॥
ತಸ್ಯ ಪಾದೋದಕಸ್ನಾನಾತ್ ತತ್ಪುಣ್ಯಂ ಪರಿಜಾಯತೇ ।
ಪ್ರಯಾಗಪುಷ್ಕರಸಮಂ ಸ್ನಾನಂ ಸ್ತ್ರೀಣಾಂ ನ ಸಂಶಯಃ ॥
ಸರ್ವತೀರ್ಥಸಮೋ ಭರ್ತಾ ಸರ್ವಧರ್ಮಮಯಃ ಪತಿಃ ।
ಮಖಾನಾಂ ಯಜನಾತ್ ಪುಣ್ಯಂ ಯದ್ ವೈ ಭವತಿ ದೀಕ್ಷಿತೇ ॥
ತತ್ಪುಣ್ಯಂ ಸಮವಾಪ್ನೋತಿ ಭರ್ತುಶ್ಚೈವ ಹಿ ಸಾಂಪ್ರತಮ್ ॥
-ಪದ್ಮಪುರಾಣ, ಭೂಮಿಖಂಡ(೪೧/೧೩-೧೬)

೩. ಧರ್ಮಮರ್ಥಂ ತಥಾ ಕಾಮಂ ಲಭಂತೇ ಸ್ಥಾನಮೇವ ಚ ।
ನಿಸ್ಸಪತ್ನಂ ಚ ಭರ್ತಾರಂ ನಾರ್ಯಃ ಸದ್ವೃತ್ತಮಾಶ್ರಿತಾಃ ॥ -ಮನುಸ್ಮೃತಿ(೯/೪೫)

ಅವಧಾನೇನ ಸುಭಗೇ ನಿತ್ಯೋತ್ಥಿತತ್ರೈವ ಚ ।
ಭರ್ತಾರೋ ವಶಗಾ ಮಹ್ಯಂ ಗುರುಶುಶ್ರೂಷಯೈವ ಚ ॥..........

ಪ್ರಥಮಂ ಪ್ರತಿಬುದ್ಧ್ಯಾಮಿ ಚರಮಂ ಸಂವಿಶಾಮಿ ಚ ।
ನಿತ್ಯಕಾಲಮಹಂ ಸತ್ಯೇ ಏತತ್ ಸಂವನನಂ ಮಮ ॥...............

(ಪತಿಗೆ ಅಪ್ರಿಯವಾಗುವ ರೀತಿಯಲ್ಲಿ ಎಂದೂ ವರ್ತಿಸಕೂಡದು. ಅಹಂಕಾರ, ಕಾಮಕ್ರೋಧಗಳನ್ನು ಸದಾ ತೊರೆಯಬೇಕು. ಗಂಡನ ಮನೆಯವರನ್ನು ಆದರದಿಂದ ಕಾಣಬೇಕು. ಕೆಟ್ಟ ಮಾತುಗಳನ್ನು ಆಡಕೂಡದು, ಕೆಟ್ಟ ನೋಟವೂ ತರವಲ್ಲ, ನಿಷಿದ್ಧ ಆಹಾರವೂ ಕೂಡದು, ಪರಪುರುಷನು ಎಷ್ಟೇ ಸುಂದರ, ಶ್ರೀಮಂತನಾಗಿದ್ದರೂ ಸಹ ಅತ್ತ ಆಕರ್ಷಣೆಯನ್ನು ಹೊಂದಕೂಡದು; ಪತಿಗಿಂತ ಮುಂಚೆ ಉಣ್ಣುವುದು ತರವಲ್ಲ, ಕಾರ್ಯದ ನಿಮಿತ್ತ ತೆರಳಿದ ಪತಿಯು ಮನೆಗೆ ಬಂದಾಗ ಎದ್ದು ಸಂಭ್ರಮದಿಂದ ಆಸನಾದಿಗಳನ್ನಿತ್ತು ಆದರಿಸಬೇಕು. ಮನೆಯಲ್ಲಿನ ಅಡುಗೆ ಪಾತ್ರೆ ಮೊದಲಾದವುಗಳು ಶುದ್ಧವಾಗಿರಬೇಕು. ರುಚಿಕರವೂ, ನಿಷಿದ್ಧವಲ್ಲದವೂ ಆದ ಆಹಾರವನ್ನು ಸಿದ್ಧಪಡಿಸಬೇಕು. ಕಾಲಕಾಲಕ್ಕೆ ಅಡುಗೆಯನ್ನು ಸಿದ್ಧಪಡಿಸಿರಬೇಕು. ಕೆಟ್ಟಸ್ತ್ರೀಯರ ಸಹವಾಸವನ್ನು ಮಾಡಕೂಡದು. ಗಂಡನಿಗೆ ಸದಾ ಅನುಕೂಲಳಾಗಿ ವರ್ತಿಸಬೇಕು. ಪತಿಸೇವೆಯ ಬಗ್ಗೆ ಆಲಸ್ಯ ಸಲ್ಲದು. ಹಾಸ್ಯದ ಪ್ರಸಂಗದ ಹೊರತು ನಗುವುದು ಉಚಿತವಲ್ಲ, ಪತಿಯು ಊರಲ್ಲಿಲ್ಲದಾಗ, ಅಲಂಕಾರಾದಿಗಳು ವರ್ಜ್ಯ. ಗಂಡನಿಗೆ ಪ್ರಿಯವಲ್ಲದ ಪಾನೀಯ, ಭೋಜನ ಮೊದಲಾದವುಗಳನ್ನು ತೊರೆಯಬೇಕು. ಗಂಡನ ಆದೇಶದಂತೆ ಸದಾ ಅವನಿಗೆ ಹಿತೈಷಿಯಾಗಿ ವರ್ತಿಸಬೇಕು. ಅತ್ತೆ-ಮಾವಂದಿರ ಸೇವೆಯೂ ಸಹ ಮುಖ್ಯಕರ್ತವ್ಯ ಎಂಬುದು ಇವುಗಳ ಭಾವ.)

[೧]ಹರಿದಾಸಸಾಹಿತ್ಯದಲ್ಲೂ ವಧುವಿಗೆ ಹಿತೋಕ್ತಿಯು ಬಗೆಬಗೆಯಾಗಿ ಬಂದಿದೆ.

ಕಾರಣವಿಲ್ಲದೆ ಗಂಡನ ಹೆಸರನ್ನು ಹೇಳುವುದು ಸಹ ವಧುವಿಗೆ ತರವಲ್ಲ, ಅದರಿಂದ ಪತಿಯ ಆಯುಷ್ಯ ಕ್ಷೀಣಿಸುವುದು ಎಂಬ ಮಾತೂ ಇದೆ[೨] :

ಭರ್ತುರ್ನಾಮ ನ ಗೃಹ್ಣಾತಿ ಹ್ಯಾಯುಷೋಽಸ್ಯ ವಿವೃದ್ಧಯೇ ।
ಆಕೃಷ್ಟಾಽಪಿ ಚ ನಾಕ್ರೋಶೇತ್ ತಾಡಿತಾಽಪಿ ಪ್ರಸೀದತಿ ॥

ಪತಿಯೊಂದಿಗೆ ಬಗೆಬಗೆಯಲ್ಲಿ ಸಹಕರಿಸುವ ರೀತಿಯನ್ನು ಈ ಕೆಳಗಿನ ವಾಕ್ಯಗಳಲ್ಲಿ ಕಾಣಬಹುದು :

ಕಾರ್ಯೇ ದಾಸೀ ರತೌ ವೇಶ್ಯಾ ಭೋಜನೇ ಜನನೀಸಮಾ ।
ವಿಪತ್ಸು ಮಂತ್ರಿಣೀ ಭರ್ತುಃ ಸಾ ಚ ಭಾರ್ಯಾ ಪತಿವ್ರತಾ ॥ –ಪದ್ಮಪುರಾಣ[೩]

---

೧. ಅಂತಹ ಕೆಲವು ಕೃತಿಗಳ ಸಂಗ್ರಹವನ್ನು ಪರಿಶಿಷ್ಟದಲ್ಲಿ ಕೊಡಲಾಗಿದೆ.

೨. ಗುರೋರ್ನಾಮ ನ ಗೃಹ್ಣೀಯಾತ್ ಶಿಷ್ಯೋ ಭಾರ್ಯಾ ಪತೇರಪಿ । –ತತ್ತ್ವಪ್ರಕಾಶಿಕಾ

೩. ಸೃಷ್ಟಿಖಂಡ (ಅಧ್ಯಾಯ ೪೭, ಶ್ಲೋಕ ೫೭)

ಛಾಯೇವಾನುಗತಾ ಸ್ವಚ್ಛಾ ಸಖೀವ ಹಿತಕರ್ಮಸು ।
ದಾಸೀವಾದಿಷ್ಟಕಾರ್ಯೇಷು ಭಾರ್ಯಾ ಭರ್ತುಃ ಸದಾ ಭವೇತ್ ॥ -ವ್ಯಾಸಸ್ಮೃತಿ

ಕಾರ್ಯೇಷು ಮಂತ್ರೀ ಕರಣೇಷು ದಾಸೀ
ರೂಪೇಷು ಲಕ್ಷ್ಮೀ ಕ್ಷಮಯಾ ಧರಿತ್ರೀ ।
ಸ್ನೇಹೇಷು ಮಾತಾ ಶಯನೇಷು ವೇಶ್ಯಾ
ಷಟ್ಕರ್ಮನಾರೀ ಕುಲಧರ್ಮಪತ್ನೀ ॥ -ನೀತಿಶತಕ

ಕೇವಲ ಪತಿಸೇವೆಯಿಂದಲೇ ಅವನು ಮಾಡುವ ಸಕಲ ಪುಣ್ಯಕಾರ್ಯಗಳ ಫಲವನ್ನು ಅವನ ಧರ್ಮಪತ್ನಿಯು ಪಡೆಯುವಳು ಎಂಬ ಮಾತು ಮಾರ್ಕಂಡೇಯ [೧]ಪುರಾಣದಲ್ಲಿದೆ :

---

೧. ಭರ್ತ್ರಾ ಸ್ವರ್ಗಸುಖಂ ಭುಂಕ್ತೇ ರಮಮಾಣಾ ಪತಿವ್ರತಾ ।
ಧನ್ಯಾ ಸಾ ಜನನೀ ಲೋಕೇ ಧನ್ಯೋಽಸೌ ಜನಕಃ ಪುನಃ ॥
ಧನ್ಯಃ ಸ ಚ ಪತಿಃ ಶ್ರೀಮಾನ್ ಯೇಷಾಂ ಗೇಹೇ ಪತಿವ್ರತಾ ।
ಪಿತೃವಂಶ್ಯಾ ಮಾತೃವಂಶ್ಯಾಃ ಪತಿವಂಶ್ಯಾಸ್ತ್ರಯಸ್ತ್ರಯಃ ।
ಪತಿವ್ರತಾಯಾಃ ಪುಣ್ಯೇನ ಸ್ವರ್ಗಸೌಖ್ಯಾನಿ ಭುಂಜತೇ ।
-ಸ್ಕಾಂದಪುರಾಣ, ಕಾಶೀಖಂಡ, (೪/೫೧-೬೯)

ಯಥಾ ಗಂಗಾವಗಾಹೇನ ಶರೀರಂ ಪಾವನಂ ಭವೇತ್ ।
ತಥಾ ಪತಿವ್ರತಾದೃಷ್ಟ್ವಾ ಶುಭಯಾ ಪಾವನಂ ಭವೇತ್ ॥
-ಸ್ಕಂದಪುರಾಣ, ಕಾಶೀಖಂಡ, (೪/೭೦)

ಪುರುಷಾಣಾಂ ಸಹಸ್ರಂ ಚ ಸತೀ ಸ್ತ್ರೀ ಸಮುದ್ಧರೇತ್ ।
ಪತಿಃ ಪತಿವ್ರತಾನಾಂ ಚ ಮುಚ್ಯತೇ ಸರ್ವಪಾತಕಾತ್ ॥
ನಾಸ್ತಿ ತೇಷಾಂ ಕರ್ಮಭೋಗಃ ಸತೀನಾಂ ವ್ರತತೇಜಸಾ ।
ತಯಾ ಸಾರ್ಧಂ ಚ ನಿಷ್ಕರ್ಮೀ ಮೋದತೇ ಹರಿಮಂದಿರೇ ।
ಪೃಥಿವ್ಯಾಂ ಯಾನಿ ತೀರ್ಥಾನಿ ಸತೀಪಾದೇಷು ತಾನ್ಯಪಿ ।
ತೇಜಶ್ಚ ಸರ್ವದೇವಾನಾಂ ಮುನೀನಾಂ ಚ ಸತೀಷು ಚ ॥
ತಪಸ್ವಿನಾಂ ತಪಃ ಸರ್ವಂ ವ್ರತಿನಾಂ ಯತ್ ಫಲಂ ವ್ರಜ ।
ದಾನೇ ಫಲಂ ಯದ್ದಾತೃಣಾಂ ತತ್ಸರ್ವಂ ತಾಸು ಸಂತತಮ್ ॥
ಸ್ವಯಂ ನಾರಾಯಣಃ ಶಂಭುರ್ವಿಧಾತಾ ಜಗತಾಮಪಿ ।
ಸುರಾಃ ಸರ್ವೇ ಚ ಮುನಯೋ ಭೀತಾಸ್ತಾಭ್ಯಶ್ಚ ಸಂತತಮ್ ।
ಸತೀನಾಂ ಪಾದರಜಸಾ ಸದ್ಯಃ ಪೂತಾ ವಸುಂಧರಾ ।
ಪತಿವ್ರತಾಂ ನಮಸ್ಕೃತ್ಯ ಮುಚ್ಯತೇ ಪಾತಕಾನ್ನರಃ ॥
ತ್ರೈಲೋಕ್ಯಂ ಭಸ್ಮಸಾತ್ ಕರ್ತುಂ ಕ್ಷಣೇನೈವ ಪತಿವ್ರತಾ ।
ಸ್ವತೇಜಸಾ ಸಮರ್ಥಾ ಸಾ ಮಹಾಪುಣ್ಯವತೀ ಸದಾ ॥
ಸತೀನಾಂ ಚ ಪತಿಃ ಸಾಧುಃ ಪುತ್ರೋ ನಿಃಶಂಕ ಏವ ಚ ।

ಯದ್ದೇವೇಭ್ಯೋ ಯಚ್ಚ ಪಿತ್ರಾಗತೇಭ್ಯಃ
ಕುರ್ಯಾದ್ಭರ್ತಾಽಭ್ಯರ್ಚನಂ ಸತ್ಕ್ರಿಯಾತಃ।
ತಸ್ಯಾಪ್ಯರ್ಧಃ ಕೇವಲಾ ನಾನ್ಯಚಿಂತಾ
ನಾರೀ ಭುಂಕ್ತೇ ಭರ್ತುಶುಶ್ರೂಷಯೈವ॥ (೧೬/೬೪)

ಪತಿಸೇವೆ ಎಂದರೆ ಪತಿಯನ್ನೇ ದೇವರೆಂದು ತಿಳಿಯುವುದಾಗಲಿ, ದೇವರನ್ನೇ ಪತಿ ಎಂದು ತಿಳಿಯುವುದಾಗಲಿ ಎಂಬ ಭಾವದಿಂದ ಅಲ್ಲ. ಪತಿಯಲ್ಲಿ ಶ್ರೀಹರಿಯು ವಿಶೇಷವಾಗಿ ಸನ್ನಿಹಿತನಾಗಿರುವನು ಎಂಬ ಭಾವದಿಂದ ಪತಿಯ ಮೂಲಕ ಶ್ರೀಹರಿಗೆ ಬಗೆಬಗೆಯ ಸೇವೆಗಳನ್ನು ಸಮರ್ಪಿಸುವುದು ಎಂದರ್ಥ:

---

ನ ಹಿ ತಸ್ಯ ಭಯಂ ಕಿಂಚಿದ್ ದೇವೇಭ್ಯಶ್ಚ ಯಮಾದಪಿ॥
ಶತಜನ್ಮಪುಣ್ಯವತಾಂ ಗೇಹೇ ಜಾತಾ ಪತಿವ್ರತಾ।
ಪತಿವ್ರತಾಪ್ರಸೂಃ ಪೂತಾ ಜೀವನ್ಮುಕ್ತಾಃ ಪಿತಾ ತಥಾ॥ -ಬ್ರಹ್ಮವೈವರ್ತಪುರಾಣ(೧೨೦-೧೨೮)
ಭರ್ತುಃ ಶುಶ್ರೂಷಣಂ ಸ್ತ್ರೀಣಾಂ ಪರೋ ಧರ್ಮೋ ಹ್ಯಮಾಯಯಾ।
-ಭಾಗವತಪುರಾಣ(೧೦/೨೯/೨೪)

ಪತಿಸೇವಾ ವ್ರತಂ ಸ್ತ್ರೀಣಾಂ ಪತಿಸೇವಾ ಪರಂ ತಪಃ।
ಪತಿಸೇವಾ ಪರೋ ಧರ್ಮಃ ಪತಿಸೇವಾ ಸುರಾರ್ಚನಮ್॥
-ಬ್ರಹ್ಮವೈವರ್ತಪುರಾಣ,ಕೃಷ್ಣಖಂಡ(೩೦/೫೭,೫೮)

ವ್ರತಂ ತಪಸ್ಯಾಂ ದೈವಾರ್ಚಾಂ ಪರಿತ್ಯಜ್ಯ ಪ್ರಯತ್ನತಃ।
ಕುರ್ಯಾಚ್ಚರಣಸೇವಾಂ ಚ ಸ್ತವನಂ ಪರಿತೋಷಣಮ್॥
-ಬ್ರಹ್ಮವೈವರ್ತಪುರಾಣ,ಕೃಷ್ಣಖಂಡ(೮೩/೧೧೨)
ಸ್ತ್ರೀಭಿರ್ಭರ್ತುರ್ವಚಃ ಕಾರ್ಯಮೇಷ ಧರ್ಮಃ ಪರಃ ಸ್ತ್ರಿಯಾಃ।
-ಯಾಜ್ಞವಲ್ಕ್ಯಸ್ಮೃತಿ(೧/೭೭)
ಏತದ್ಧಿ ಪರಮಂ ನಾರ್ಯಾಃ ಕಾರ್ಯಂ ಲೋಕೇ ಸನಾತನಮ್।
ಪ್ರಾಣಾನಪಿ ಪರಿತ್ಯಜ್ಯ ಯದ್ಭರ್ತುಹಿತಮಾಚರೇತ್। -ಮಹಾಭಾರತ(೧/೧೨)
ವ್ಯಾಲಗ್ರಾಹೀ ಯಥಾ ವ್ಯಾಲಂ ಬಲಾದುದ್ಧರತೇ ವಿಲಾತ್।
ಏವಮುತ್ಕ್ರಮ್ಯ ದೂತೇಭ್ಯಃ ಪತಿಂ ಸ್ವರ್ಗಂ ವ್ರಜೇತ್ ಸತೀ।
ಯಮದೂತಾಃ ಪಲಾಯಂತೇ ತಾಮಾಲೋಕ್ಯ ಪತಿವ್ರತಾಮ್॥
-ಸ್ಕಂದಪುರಾಣ,ಬ್ರಹ್ಮಖಂಡ(೭/೫೪,೫೬)
ಪೃಥಿವ್ಯಾಂ ಯಾನಿ ತೀರ್ಥಾನಿ ಸತೀಪಾದೇಷು ತಾನ್ಯಪಿ।
ತೇಜಶ್ಚ ಸರ್ವದೇವಾನಾಂ ಮುನೀನಾಂ ಚ ಸತೀಷು ವೈ॥
-ಬ್ರಹ್ಮವೈವರ್ತಪುರಾಣ(೩೪/೧/೧೯,೧೨೭)
ಆರ್ತಾರ್ತೇ ಮುದಿತೇ ಹೃಷ್ಟಾ ಪ್ರೋಷಿತೇ ಮಲಿನಾ ಕೃಶಾ।
ಮೃತೇ ಮ್ರಿಯೇತ ಯಾ ಪತ್ಯೌ ಸಾ ಸ್ತ್ರೀ ಜ್ಞೇಯಾ ಪತಿವ್ರತಾ॥ -ಬೃಹಸ್ಪತಿಸ್ಮೃತಿ,ಅಪರಾರ್ಕ
ಪತಿರ್ಹಿ ದೈವತಂ ಸ್ತ್ರೀಣಾಂ ಪತಿರೇವ ಪರಾಯಣಮ್। -ಮತ್ಸ್ಯಪುರಾಣ(೨೧೦/೧೭)

ಯಾ ಪತಿಂ ಹರಿಭಾವೇನ ಭಜೇತ್ ಶ್ರೀರಿವ ತತ್ಪರಾ ।
ಹರ್ಯಾತ್ಮನಾ ಹರೇರ್ಲೋಕೇ ಪತ್ಯಾ ಶ್ರೀರಿವ ಮೋದತೇ ॥
-ಶ್ರೀಮದ್ಭಾಗವತ(೭/೧೨/೩೦)
ಹರಿರಸ್ಮಿನ್ ಸ್ಥಿತ ಇತಿ ಸ್ತ್ರೀಣಾಂ ಭರ್ತರಿ ಭಾವನಾ ।
ಶಿಷ್ಯಾಣಾಂ ಚ ಗುರೌ ನಿತ್ಯಂ ಶೂದ್ರಾಣಾಂ ಬ್ರಾಹ್ಮಣಾದಿಷು ॥
ಭೃತ್ಯಾನಾಂ ಸ್ವಾಮಿನಿ ತಥಾ ಹರಿಭಾವ ಉದೀರಿತಃ ॥ -ಭಾಗತವತತಾತ್ಪರ್ಯ

# ಸುಮಂಗಲಿಯರಿಗೆ ವಿಹಿತವಾದ ಮಂಗಲದ್ರವ್ಯಗಳು

ಜಾಯಾ, ಭಾರ್ಯಾ, ಕುಟುಂಬಿನೀ, ಪುರಂಧ್ರೀ, ಮಾಲಿನೀ[1], ಶಾಲಿನೀ, ಕಾಲ್ಯಾ, ಆಚಾರ್ಯಾ, ಸುವಾಸಿನೀ ಮೊದಲಾದ ಹೆಸರುಗಳಿಂದ ಗೃಹಿಣಿಯು ಕರೆಯಲ್ಪಡುವಳು. ಪತಿಗೆ ಪ್ರತಿನಿಧಿಯಂತಹ ಸಂತತಿಯನ್ನು ಗರ್ಭದಲ್ಲಿ ಹೊತ್ತು ಹೆರುವುದರಿಂದ ಜಾಯಾ ಎನ್ನಿಸುವಳು[2]. ಸಂತತಿಯನ್ನು ಪಡೆದಾದ ಮೇಲೆ ಕುಟುಂಬದ ಭಾರವನ್ನು ಹೊತ್ತಮೇಲೆ 'ಕುಟುಂಬಿನೀ' ಎನ್ನಿಸುವಳು. ಇಡೀ ಮನೆಯ ಜವಾಬ್ದಾರಿ ಹೊತ್ತಾಗ ಪುರಂಧ್ರೀ ಎಂದು ಮಾನ್ಯಳಾಗುವಳು. ತನ್ನ ಸನ್ನಡತೆಯಿಂದ ಗಳಿಸುವ ಹೆಸರು ಪತಿವ್ರತೆ[3] ಇತ್ಯಾದಿಗಳು. ಮಂಗಲದ್ರವ್ಯಗಳನ್ನು ಧರಿಸುವುದರಿಂದ ಸುಮಂಗಲೀ ಎನ್ನಿಸುವಳು.

ಇಂತಹ ಸುಮಂಗಲಿಯರು ಧರಿಸಲು ವಿಹಿತವಾದ ವಸ್ತುಗಳು ಹೀಗಿವೆ :

ಹರಿದ್ರಾಂ ಕುಂಕುಮಂ ಚೈವ ಸಿಂಧೂರಂ ಕಜ್ಜಲಂ ತಥಾ ।
ಕೂರ್ಪಾಸಕಂ ಚ ತಾಂಬೂಲಂ ಮಾಂಗಲ್ಯಾಭರಣಂ ಶುಭಮ್ ॥
ಕೇಶಸಂಸ್ಕಾರಕಂ ಚೈವ ಕರಕರ್ಣಾದಿಭೂಷಣಮ್ ।
ಭರ್ತುರಾಯುಷ್ಯಮಿಚ್ಛಂತೀ ದೂರಯೇನ್ನ ಪತಿವ್ರತಾ ॥ -ಸ್ಕಂದಪುರಾಣ

೧. ಹರಿದ್ರಾ : ಅರಿಶಿನ, ಇದು ಪ್ರಧಾನ ಮಂಗಲದ್ರವ್ಯಗಳಲ್ಲೊಂದು. ಶುದ್ಧವಾದ ಅರಿಶಿನ ಬೇರಿನಿಂದ ತಯಾರಿಸಿದ ಚೂರ್ಣವೇ ವಿಹಿತ. ಇದನ್ನು ಧರಿಸುವ ಮುನ್ನ ಪತಿಯು ಮೂಲಮಂತ್ರ, ಗಾಯತ್ರೀಮಂತ್ರಗಳಿಂದ ಅಭಿಮಂತ್ರಿಸಿ, ಒಂದು ಭಾಗವನ್ನು ಮೀಸಲಿರಿಸಿಕೊಂಡು ಪ್ರತಿನಿತ್ಯ ಲಕ್ಷ್ಮೀನಾರಾಯಣರಿಗೂ, ಬ್ರಹ್ಮಸರಸ್ವತೀ, ವಾಯು-ಭಾರತೀಯರಿಗೂ ತುಳಸೀಗೌರಿಯರಿಗೂ ಸಮರ್ಪಿಸಬೇಕು. ಹೀಗೆ ಸಮರ್ಪಿಸಿದ ಅರಿಶಿನವನ್ನು ಎರಡು ಭಾಗ ಮಾಡಿ, ಅದರಲ್ಲಿ ಒಂದು ಭಾಗವನ್ನು ಪ್ರತಿನಿತ್ಯ ತಾನು

---

೧. ಮಾಲಿನೀ ಶಾಲಿನೀ ಕಾಲ್ಯಾ ಚಾರ್ಯಾ ಭಾರ್ಯೇತಿ ಚೋಚ್ಯತೇ । -ಭಾ.ತಾ.(೩/೨೫/೧)

೨. ಜಾಯಾಯಾಸ್ತದ್ಧಿ ಜಾಯಾತ್ವಂ ಯದಸ್ಯಾಂ ಜಾಯತೇ ಪುನಃ । -ಬೃಹತ್ಪರಾಶರಸ್ಮೃತಿ(೬/೧೯೦)

೩. ತಥಾ ಪತಿವ್ರತಾಯಾಶ್ಚ ಪತಿಶುಶ್ರೂಷಯಾ ಸದಾ ।
ಪತಿವ್ರತಾಯಾ ದೇಹೇ ತು ಸರ್ವೇ ದೇವಾ ವಸಂತಿ ಹಿ ॥ -ಸ್ಕಂದಪುರಾಣ(೬/೨೪೧/೧೭)

ಧರಿಸಿಕೊಳ್ಳಲು, ಮತ್ತೊಂದನ್ನು ಮುತ್ತೈದೆಯರಿಗೆ ನೀಡಲು ಪ್ರತ್ಯೇಕವಾಗಿ ಇರಿಸಿಕೊಳ್ಳಬೇಕು.

೨. **ಕುಂಕುಮ** : ಅರಿಶಿನದಷ್ಟೇ ಪ್ರಧಾನವೆನ್ನಿಸಿರುವ ಮತ್ತೊಂದು ಮಂಗಲದ್ರವ್ಯ. ಶುದ್ಧ ಅರಿಶಿನಪುಡಿಗೆ ಸುಣ್ಣಸೇರಿಸಿ, ತಯಾರಿಸುವುದು ಶಾಸ್ತ್ರೋಕ್ತರೀತಿಯ ಕುಂಕುಮ. ಇದನ್ನು ಸಹ ಅರಿಶಿನದಂತೆ ಮೂಲಮಂತ್ರ ಹಾಗೂ ಗಾಯತ್ರೀಗಳಿಂದ ಪತಿಯು ಅಭಿಮಂತ್ರಿಸಿ ಕೊಟ್ಟದ್ದನ್ನು ಮೂರು ಭಾಗಮಾಡಿ, ಒಂದನ್ನು ಪ್ರತಿನಿತ್ಯ ತುಳಸೀಪೂಜೆ, ಗೌರೀಪೂಜೆಗೆಂದು ಮೀಸಲಿರಿಸಬೇಕು. ಉಳಿದ ಭಾಗದಲ್ಲಿ ಒಂದನ್ನು ತಾನು ನಿತ್ಯ ಧರಿಸಿಕೊಳ್ಳಲು, ಮತ್ತೊಂದನ್ನು ಮುತ್ತೈದೆಯರಿಗೆ ನೀಡಲು ಪ್ರತ್ಯೇಕವಾಗಿ ಇರಿಸಿಕೊಳ್ಳಬೇಕು.

೩. **ಕಾಡಿಗೆ** : ಐದೆಯರಿಗೆ ವಿಹಿತವಾದ ಮಂಗಲದ್ರವ್ಯಗಳಲ್ಲಿ ಇದಕ್ಕೆ ಅನಂತರದ ಸ್ಥಾನ. ಇದನ್ನು ತಯಾರಿಸುವಾಗಲೇ ಲಕ್ಷ್ಮೀನಾರಾಯಣರು ಮೊದಲಾದ ದೇವತೆಗಳನ್ನು ಚಿಂತಿಸಬೇಕು. ಬಳಿಕ ಅದನ್ನು ದೇವರ ಮುಂದಿರಿಸಿ, ಸಮರ್ಪಿಸಬೇಕು. ಪ್ರತಿನಿತ್ಯ ಅದನ್ನು ಧರಿಸಿಕೊಳ್ಳುವುದರಿಂಧ ಪರಪುರುಷರ ದೃಷ್ಟಿದೋಷ ಪರಿಹಾರ.

೪. **ಮಂಗಳಸೂತ್ರ** : ವಿವಾಹದ ದಿನದಿಂದ ಧರಿಸಲೇ ಬೇಕಾದ ಮಹಾಮಂಗಲಕಾರಕವಾದ ಸೂತ್ರ. ಮಂಗಲದೇವತೆಯಾದ ಮಹಾಲಕ್ಷ್ಮಿಯೇ ಇದಕ್ಕೆ ಅಧಿದೇವತೆ. ಅದಕ್ಕೆಂದೇ ಇದಕ್ಕೆ ಮಂಗಲಸೂತ್ರ ಎಂದು ಹೆಸರು. ಇತರರು ಅರಿಶಿನ-ಕುಂಕುಮ ನೀಡಿದಾಗ ಮೊದಲು ಮಂಗಲಸೂತ್ರಕ್ಕೆ ಹಚ್ಚುವುದು ಇದೇ ಕಾರಣದಿಂದ. ವಟುವಿಗೆ ಉಪನಯನದ ಬಳಿಕ ಯಜ್ಞೋಪವೀತ ಹೇಗೋ ಹಾಗೆ ವಿವಾಹದ ಬಳಿಕ ಸ್ತ್ರೀಗೆ ಇದು ಸದಾ ಧಾರ್ಯ. ಯಾವುದೇ ಕಾರಣದಿಂದಲೂ ಇದನ್ನು ಕೊರಳಿನಿಂದ ತೆಗೆಯುವಂತಿಲ್ಲ. ಜೀರ್ಣವಾದ ಕಾರಣದಿಂದ ಪುನಃ ಕಟ್ಟಿಕೊಳ್ಳಬೇಕಾದ ಪ್ರಸಂಗದಲ್ಲಿ ಅದನ್ನು ದೇವರ ಮುಂದಿರಿಸಿ, ಪತಿಯಿಂದ ಅಥವಾ ಹಿರಿಯ ಮುತ್ತೈದೆಯರಿಂದ ಕಟ್ಟಿಸಿಕೊಳ್ಳಬೇಕು. ಆ ಮಧ್ಯದ ಅವಧಿಯಲ್ಲಿ ಅರಿಶಿನದ ಬೇರನ್ನು ಕಟ್ಟಿಕೊಳ್ಳುವುದು ವಿಹಿತ. ಇಂದಿನ ದಿನಗಳಲ್ಲಿ ಅನೇಕ ಸ್ತ್ರೀಯರು ಉದ್ಯೋಗ ಮೊದಲಾದ ಕಾರಣಗಳಿಂದ ವಿವಾಹದ ಬಳಿಕವೂ ಮಂಗಲಸೂತ್ರವನ್ನೇ ಧರಿಸದೇ ಇರುವುದು ಬಹಳವಾಗಿ ಕಂಡುಬರುತ್ತಿದೆ. ಇದು ಸರ್ವಥಾ ಅಮಂಗಲವಾದ ನಡತೆ. ಹಿರಿಯರು ಸೂಕ್ತ ಮಾರ್ಗದರ್ಶನ ನೀಡದಿದ್ದಲ್ಲಿ ವೈವಾಹಿಕ ಜೀವನವೇ ಅಮಂಗಳದಲ್ಲಿ ಪರ್ಯವಸಾನವಾಗುವ ಅಪಾಯ ತಪ್ಪಿದ್ದಲ್ಲ. ಪಾಂಡವರು ಕುರುಕ್ಷೇತ್ರಯುದ್ಧದ ಅನಂತರ ಮಾಡಿದ ಅಶ್ವಮೇಧಯಾಗದ ಕೊನೆಯಲ್ಲಿ ತಮ್ಮ ಸರ್ವಸ್ವವನ್ನೂ ಸಹ ಶ್ರೀವೇದವ್ಯಾಸರಿಗೆ ಸಮರ್ಪಿಸಿದರು ಎಂಬ ಉಲ್ಲೇಖ ಬಂದಿದೆ[೧]. ಆಗಲೂ ಅವರು ಪತ್ನಿಯರ ಕೊರಳಲ್ಲಿ ಉಳಿಸಿಕೊಂಡಿದ್ದು

---

೧. ಯಜ್ಞಾವಸಾನೇ ನಿಖಿಲಾಶ್ಚ ಪಾಂಡವಾಃ ಕೃಷ್ಣಾಂ ಚ ಪೃಥ್ವೀಮಖಿಲಾಂ ಸವಿತ್ತಾಮ್ ।

ಮಂಗಲಸೂತ್ರವನ್ನು ಮಾತ್ರ ಎಂಬ ಅಪೂರ್ವ ವಿವರವು ಕಂಡುಬರುವುದು. ಎಂದರೆ ಸರ್ವಸ್ವ ದಾನದಂತಹ ಮಹಾದಾನದಲ್ಲೂ ಸಹ ಮಂಗಲಸೂತ್ರವನ್ನು ದಾನ-ಮಾಡುವಂತಿಲ್ಲ ಎಂದು ಅದರ ಭಾವ. ಇದರಿಂದ ಸುವಾಸಿನಿಯರಿಗೆ ಮಂಗಲಸೂತ್ರ-ಧಾರಣೆ ಅತ್ಯಂತ ಪ್ರಮುಖವಾದ ಕರ್ತವ್ಯ ಎಂಬ ವಿಶೇಷಾಂಶ ತಿಳಿಯುವುದು.

೫. **ಬಳೆಗಳು :** ಸುಮಂಗಲಿಯ ಮತ್ತೊಂದು ಪ್ರಧಾನ ಲಕ್ಷಣ ಬಳೆಗಳನ್ನು ಧರಿಸು-ವುದು. ಗಾಜಿನ ಬಳೆಗಳ ಧಾರಣೆ ಕಡ್ಡಾಯ. ಅವುಗಳೊಂದಿಗೆ ಚಿನ್ನದ ಬಳೆಗಳ ಧಾರಣೆಯೂ ವಿಹಿತ. ಗಾಜಿನ ಬಳೆಗಳನ್ನೂ ಸಹ ಧರಿಸುವ ಮುನ್ನ ಮೂಲಮಂತ್ರ, ಗಾಯತ್ರೀಮಂತ್ರದಿಂದ ಅಭಿಮಂತ್ರಿಸಿ, ಮಹಾಲಕ್ಷ್ಮಿ ಸರಸ್ವತಿಭಾರತಿಯರು, ತುಳಸಿಗೌರಿಯರಿಗೆ ಸಮರ್ಪಿಸಿ ಬಳಿಕ ತಾವು ಧರಿಸಿಕೊಳ್ಳಬೇಕು. ಬಳೆಗಳನ್ನು ಸಹ ತೆಗೆದಿರಿಸುವುದು ಇತ್ತೀಚಿನ ಮತ್ತೊಂದು ಬಗೆಯ ಫ್ಯಾಶನ್. ಇದು ಅಮಂಗಳದ ಸಂಕೇತ ಎಂಬುದನ್ನು ಗಮನಿಸಬೇಕು. ಕೇವಲ ಚಿನ್ನದ ಬಳೆಗಳನ್ನು ಧರಿಸುವುದು ಸಹ ಐದೆಯರಿಗೆ ವಿಹಿತವಾಗಿಲ್ಲ. ಬರೀ ಗಾಜಿನ ಬಳೆಗಳನ್ನು ಧರಿಸುವುದು ತಪ್ಪಲ್ಲ.

೬. **ಓಲೆಗಳು :** ಓಲೆ ಎದ್ದು ಕಾಣುವ ಮಂಗಲ್ಯದ್ರವ್ಯ. ಚಿನ್ನ ಮುತ್ತು ಮೊದಲಾ-ದವುಗಳಿಂದ ಮಾಡಿಸುವುದು ಪ್ರಶಸ್ತ. ಅಷ್ಟದಳಾಕೃತಿಯೇ ಸಾಮಾನ್ಯವಾಗಿ ವಿಹಿತ. ಇದರಲ್ಲಿ ವಿಶೇಷವಾಗಿ ಲಕ್ಷ್ಮೀಸನ್ನಿಧಾನ. ಇವುಗಳನ್ನು ಸಹ ಧರಿಸುವ ಮುನ್ನ ದೇವರಿಗೆ ಸಮರ್ಪಿಸುವುದು ಕಡ್ಡಾಯ. ವಾಲಿ, ಬೆಂಡೋಲೆ, ಕುಂಡಲ ಎಂಬುದಾಗಿಯೂ ಇವು ಪ್ರಸಿದ್ಧ. ಇವುಗಳ ಧಾರಣೆ, ಸ್ತ್ರೀಯರು ಸಹ ವಿಹಿತ ರೀತಿಯಲ್ಲಿ ಸಚ್ಛಾಸ್ತ್ರಗಳ ಶ್ರವಣಕಾರ್ಯವನ್ನು ತಪ್ಪದೆ ಮಾಡಬೇಕು ಎಂಬುದಕ್ಕೆ ಸೂಚಕ. ಶ್ರೀಜಗನ್ನಾಥದಾಸರ ತತ್ವಸುವ್ವಾಲಿಗಳು ಈ ಹಿನ್ನೆಲೆಯಲ್ಲಿ ರೂಪಿತವಾದ ಪದಗಳು.

೭. **ಮೂಗುತಿ, ಕಾಲುಂಗುರ ಇತ್ಯಾದಿಗಳು :** ಇವು ಮತ್ತಿತರ ಮಂಗಲದ್ರವ್ಯಗಳು. ಶ್ರೀಪುರಂದರದಾಸರ ಪತ್ನಿ ಸರಸ್ವತೀಬಾಯಿಯವರ ಮೂಗುತಿ ದಾನದ ಕಥೆ ಪ್ರಖ್ಯಾತವಾದುದು. ಒಂದು ರೀತಿಯಲ್ಲಿ ನವಕೋಟಿನಾರಾಯಣರೆಂದು ಪ್ರಸಿದ್ಧರಾಗಿದ್ದ ಸೀನಪ್ಪನಾಯಕರು ಶ್ರೀಪುರಂದರದಾಸರಾಗಲು ಕಾರಣವಾದದ್ದು ಈ ಪ್ರಸಂಗವೇ.

ಕಿವಿಮೂಗುಗಳು ವಿಶೇಷವಾಗಿ ಮುಖಕ್ಕೆ ಅಂದವನ್ನು ಹೆಚ್ಚಿಸುವ ಅವಯವಗಳು. ಅವಕ್ಕೆಂದೇ ವಿಶೇಷ ಅಲಂಕಾರ. ಮತ್ತೊಂದು ರೀತಿಯಲ್ಲಿ ಅವುಗಳಲ್ಲಿ ವಿಶೇಷವಾಗಿ ದೇಹದ ಚೈತನ್ಯಶಕ್ತಿ ಕೇಂದ್ರೀಕೃತವಾಗಿರುತ್ತದೆ. ಅದರಂತೆ ಬಳೆ ಧರಿಸುವಂತಹ ಸ್ಥಳಗಳಲ್ಲೂ ಸಹ. ಹೀಗಾಗಿ ಓಲೆ, ಮೂಗುತಿ ಹಾಗೂ ಬಳೆಗಳು ಚೈತನ್ಯವನ್ನು

---

ಮಾಂಗಲ್ಯಮಾತ್ರಂ ದಯಿತಾಶರೀರೇ ನಿಧಾಯ ಸರ್ವಾಭರಣಾನಿ ಚೈವ ॥
-ಮ.ಭಾ.ತಾ.ನಿ.(೩೦/೧೪೪)

ಜಾಗೃತಗೊಳಿಸುವ ಆ ಮೂಲಕ ಆರೋಗ್ಯವನ್ನೂ ಸಹ ಸಂರಕ್ಷಿಸುವ ಮುಖ್ಯ ಸಾಧನಗಳೆನ್ನಿಸಿವೆ. ಶ್ರೀರಾಮದೇವರು ಲಕ್ಷ್ಮಣನ ಮೂಲಕ ಶೂರ್ಪನಖಿಯ ಕಿವಿಮೂಗುಗಳನ್ನು ಕತ್ತರಿಸುವ ಮೂಲಕ ಅವುಗಳ ಧಾರಣೆ ಇಲ್ಲದವರ ಜೀವನ ಅಪ್ರಶಸ್ತ ಎಂಬ ಸೂಚನೆಯನ್ನು ಸಹ ನೀಡಿರುವರು ಎಂದು ತಿಳಿಯಬಹುದು.

೮. ಜಡೆ-ತುರುಬುಗಳು : ಐದೆಯರಿಗೆ ವಿಶೇಷ ಅಲಂಕಾರಗಳೆನ್ನಿಸಿರುವುದು ಜಡೆತುರುಬುಗಳ ವಿಶೇಷ. ತಲೆಗೂದಲುಗಳನ್ನು ಕಟ್ಟಿಕೊಳ್ಳದೆ ಹರಡಿಕೊಳ್ಳುವುದು ತರವಲ್ಲ. ಅದನ್ನು ವೈಧವ್ಯದ ಸಂಕೇತ ಎಂದು ಮಹಾಭಾರತ ಕರೆದಿದೆ. ದ್ರೌಪದೀದೇವಿಯು ತಮ್ಮ ಮುಡಿಗೆ ಕೈಹಾಕಿದ ಕೌರವರ ಪತ್ನಿಯರನ್ನೆಲ್ಲ ವಿಧವೆಯನ್ನಾಗಿಸುವ ಸಂಕಲ್ಪವನ್ನು ತೋರಿಸಲೆಂದು [೧] ವನವಾಸಕ್ಕೆ ತೆರಳುವ ಸಮಯದಲ್ಲಿ ಅವುಗಳನ್ನು ಕಟ್ಟಿಕೊಳ್ಳದೆ ಸಾಗಿದರು ಎಂಬ ವಿಶೇಷಾಂಶ ಮಹಾಭಾರತ ಹಾಗೂ ತಾತ್ಪರ್ಯನಿರ್ಣಯಗಳಲ್ಲಿ ಬಂದಿದೆ. ಇತ್ತೀಚಿನ ದಿನಗಳಲ್ಲಿ ಕೂದಲು ಕತ್ತರಿಸಿ-ಕೊಳ್ಳುವುದು, ಜಡೆಯನ್ನೇ ಹಾಕಿಕೊಳ್ಳದೆ ಇರುವುದು ಫ್ಯಾಶನ್ ಎನ್ನಿಸತೊಡಗಿದೆ. ಆದರೆ ಇದು ಶಾಸ್ತ್ರಕ್ಕೆ ಸಮ್ಮತವಾದುದಲ್ಲ. ಕೆಲವರು ಜಡೆ ಹಾಕಿಕೊಳ್ಳುವುದನ್ನು ನಿಷಿದ್ಧ ಎನ್ನುವುದುಂಟು. ಅದು ಸರಿಯಲ್ಲ. ಸಾಕ್ಷಾತ್ ಮಹಾಲಕ್ಷ್ಮಿಗೆ ನಾಲ್ಕು ಜಡೆಗಳು ಎಂಬುದು ಶ್ರುತಿ ಪ್ರಸಿದ್ಧವಾದ ವಿವರ : ಚತುಷ್ಕಪರ್ದಾ; ಚತುಷ್ಕಪರ್ದಾ ಯಾ ದೇವೀ ಎಂಬುದಾಗಿ ಶ್ರೀವಾದಿರಾಜರ ಶ್ರೀಶಗುಣದರ್ಪಣದಲ್ಲಿ ಉಲ್ಲೇಖವಿರುವುದು ಸಹ ಗಮನಾರ್ಹ. ಐದೆಯರ ಬೈತಲೆಯಲ್ಲಿ ಗಂಗಾಸನ್ನಿಧಾನ ಎಂಬುದು ಶಾಸ್ತ್ರದ ಮಾತು. ಆದರಿಂದಾಗಿ ಅವರಿಗೆ ನಿತ್ಯ ಶಿರಃಸ್ನಾನ ನಿಷಿದ್ಧ. ವಿಶೇಷ ಸಂದರ್ಭಗಳಲ್ಲಿ ಅಭ್ಯಂಜನ ಕಾಲದಲ್ಲಿ ಮಾತ್ರ ವಿಹಿತ. ಏಕಾದಶಿಯಂದು ಕಾಡಿಗೆ, ಕೇಶಶೃಂಗಾರ, ತಾಂಬೂಲ ಮೊದಲಾದವುಗಳು ವರ್ಜ್ಯ ಎಂಬುದು ವಿಶೇಷ.

೯. ಹೂವು ಇತ್ಯಾದಿ : ಮುಡಿಯುವ ಹೂವುಗಳು ಸಹ ಮಂಗಲದ್ರವ್ಯಗಳಲ್ಲಿ ಸೇರಿವೆ. ಇಂತಹ ಹೂವುಗಳು ನಿಷಿದ್ಧವರ್ಗದವಾಗಿರಕೂಡದು. ದೇವರಿಗೆ ಸಮರ್ಪಿಸದೆ ಹೂವನ್ನು ಮುಡಿಯುವಂತಿಲ್ಲ. ಲಕ್ಷ್ಮೀನಾರಾಯಣರಿಗೆ, ಬ್ರಹ್ಮಸರಸ್ವತಿಯರಿಗೆ, ವಾಯುಭಾರತಿಯರಿಗೆ ಹಾಗೂ ಗೌರೀಹರ ಮೊದಲಾದ ದೇವತೆಗಳಿಗೆ ಸಮರ್ಪಿಸಿದ

---

೧. ಶ್ರುತ್ವಾ ಸಮಸ್ತಂ ಭಗವಾನ್ ಪ್ರತಿಜ್ಞಾಂ ಚಕಾರ ತೇಷಾಮಖಿಲಾಶ್ಚ ಯೋಷಾಃ ।
ಪತೀನ್ ಸಮಾಲಿಂಗ್ಯ ವಿಮುಕ್ತಕೇಶಾಃ ಭೀಮಾಹತಾನ್ ದರ್ಶಯೇ ನಾನ್ಯಥೇತಿ ।
ತಾಂ ಸಾಂತ್ವಯಿತ್ವಾ ಮಧುರೈಃ ಸುವಾಕ್ಯೈರ್ನಾರಾಯಣೋ ವಾಚಮಿಮಾಂ ಜಗಾದ ॥
-ಮ.ಭಾ.ತಾ.ನಿ.(೨೨/೨೮)

ಅಬದ್ಧಕೇಶಾ ಪ್ರಯಯೌ ದ್ರೌಪದೀ ಸಾ ಸಭಾತಲಾತ್ ।
ಮುಕ್ತಕೇಶಾ ಭವಿಷ್ಯಂತಿ ಧಾರ್ತರಾಷ್ಟ್ರಸ್ತ್ರಿಯಸ್ತ್ವಿತಿ ॥ -ಮ.ಭಾ.ತಾ.ನಿ.(೨೧/೪೦೨)

ಬಳಿಕವೇ ಇವುಗಳನ್ನು ತಾವು ಧರಿಸಬೇಕು. ದೇವರ ನಿರ್ಮಾಲ್ಯವಲ್ಲದ ಪುಷ್ಪಗಳು ಅಗ್ರಾಹ್ಯ. ಇತರರು ಧರಿಸಿದ ಹೂವುಗಳು ನಿಷಿದ್ಧ. ದ್ರೌಪದೀದೇವಿ ಸೌಗಂಧಿಕ ಹಾಗೂ ಪಂಚವರ್ಣದ ಪುಷ್ಪಗಳನ್ನು ತಂದುಕೊಡಲು ಶ್ರೀಭೀಮಸೇನನ್ನು ಪ್ರಾರ್ಥಿಸಿದ ಮಹಾಭಾರತದ ಪ್ರಸಂಗ ಇದರ ಮಹತ್ವಕ್ಕೆ ಸೂಚಕ. ಆದರೆ ಏಕಾದಶೀ ಕೃಷ್ಣಾಷ್ಟಮೀ ದಿನಗಳಂತಹ ಉಪವಾಸ ದಿನಗಳಲ್ಲಿ ಇವುಗಳ ಧಾರಣೆ ನಿಷಿದ್ಧ.

ಶ್ರೀವಾದಿರಾಜಸ್ವಾಮಿಗಳ ರುಕ್ಮಿಣೀಶವಿಜಯ ಕೃತಿಯ ಶ್ರೀರುಕ್ಮಿಣೀ ಹಾಗೂ ಶ್ರೀಸರಸ್ವತೀದೇವಿಯರ ವರ್ಣನೆಗಳ ಶ್ಲೋಕಗಳಲ್ಲಿ ಬಳೆ, ಓಲೆಗಳ ಧಾರಣೆಗಳ ಉಲ್ಲೇಖ ಬಂದಿರುವುದು ಅವುಗಳ ಧಾರಣೆಗೆ ಇರುವ [೧]ಮಹತ್ವವನ್ನು ತಿಳಿಸುತ್ತದೆ. ಶ್ರೀಪುರಂದರ-ದಾಸರ ಕೇಶವನಾಮವೊಂದರಲ್ಲಿ ಈ ಮಂಗಳದ್ರವ್ಯಗಳು ಹಾಗೂ ಆಭರಣಗಳ ಜೊತೆಗೆ ಭಗವದ್ರೂಪಗಳ ಚಿಂತನೆಯು ಸಹ ನಿರೂಪಿತವಾಗಿದೆ[೨].

---

೧. ಸಿಂಜನ್ನೂಪುರಶೋಭಿಪಾದಕಮಲಾಂ ಮಂದಸ್ಮಿತೋದ್ಯನ್ಮುಖೀಂ
ಕಂಜಾಕ್ಷೀಂ ಕುಚಭಾರಭೀರುವಿಲಸನ್ಮಧ್ಯಾಂ ಕ್ವಣತ್ಕಂಕಣಾಮ್ ।
ಶಂಭ್ವಾದ್ಯೈಃ ಪರಿಸೇವಿತಾಂ ಸುವಸನಾಂ ಜಾಂಬೂನದಾಲಂಕೃತಾ-
ಮಂಬಾಂ ತಾಂ ಪ್ರಣತೋಽಸ್ಮಿ ಕೃಷ್ಣರಮಣೀಂ ಲಂಬಾಲಕಾಂ ರುಗ್ಮಿಣೀಮ್ ॥
ತಾಟಂಕದ್ವಯಶೋಭಿಕರ್ಣಯುಗಲಂ ಭ್ರಾಜದ್ದಯಾವೀಕ್ಷಣಂ
ಪೂರ್ಣೇಂದುದ್ಯುತಿ ವಿದ್ರುಮಾಧರರುಚಾ ವ್ಯಾಮಿಶ್ರಮಂದಸ್ಮಿತಮ್ ।
ಈಷತ್ಕುಂಚಿತಕುಂತಲಂ ಸತಿಲಕಂ ನಾಸೋಲ್ಲಸನ್ಮೌಕ್ತಿಕಂ
ಭೂಯಾತ್ಕೂರ್ಮಸದೃಕ್ಷಗಂಡಯುಗಲಂ ವಾಣೀಮುಖಂ ಶ್ರೇಯಸೇ ॥
-ರುಗ್ಮಿಣೀಶವಿಜಯ(೧/೪,೬)

೨. ನಿಮ್ಮ ನಾಮವೆಂಬಂಥ ಹೊಸ ಚಿನ್ನದೊಡವೆ ॥ ಪ ॥
ಕೇಶವ ನಿಮ್ಮ ನಾಮ ಕಂಠಮಂಗಳಸೂತ್ರ
ನಾರಾಯಣ ನಿಮ್ಮ ನಾಮ ತಾಳಿ ಪದಕ ॥೧॥
ಮಾಧವ ನಿಮ್ಮ ನಾಮ ಸರಿಗೆ ಸಂಪಿಗೆ ಮೊಗ್ಗು
ಗೋವಿಂದ ನಿಮ್ಮ ನಾಮ ಗೋಧಿ ಸರವು ॥೨॥
ವಿಷ್ಣುವೇ ನಿಮ್ಮ ನಾಮ ಕಠಾಣಿ ಸರಗುಂಡು
ಮಧುಸೂದನ ನಿಮ್ಮ ನಾಮ ಮೋಹನಮಾಲೆ ॥೩॥
ತ್ರಿವಿಕ್ರಮ ನಿಮ್ಮ ನಾಮ ಹೊಳೆವ ತಾಯಿತಾ ಮುತ್ತು
ವಾಮನಾ ನಿಮ್ಮ ನಾಮ ಒಲಿವ ಏಕಾವಳಿ ॥೪॥
ಶ್ರೀಧರ ನಿಮ್ಮ ನಾಮ ಎಸೆವ ಪಂಜರದೋಲೆ
ಹೃಷಿಕೇಶ ನಿಮ್ಮ ನಾಮ ಉಡಿಗೆಜ್ಜೆಯು ॥೫॥
ಪದ್ಮನಾಭ ನಿಮ್ಮ ನಾಮ ದೊಡ್ಡ ಮುತ್ತಿನ ಬುಗುಡಿ
ದಾಮೋದರ ನಿಮ್ಮ ನಾಮ ರತ್ನಪದಕವು ॥೬॥

ಇನ್ನು ಸ್ತ್ರೀಯರು ಧರಿಸಬೇಕಾದ ವಸ್ತ್ರಸಂಹಿತೆಯ ಬಗ್ಗೆ ತಿಳಿಯಬಹುದು. ಇಂದಿನ ಕಾಲ ವಿಚಿತ್ರ ಬಗೆಯದು. ಹೊರಜಗತ್ತಿನಲ್ಲಿ ವಿದ್ಯಾರ್ಥಿಗಳು, ಉದ್ಯೋಗಸ್ಥ ಮಹಿಳೆಯರು ದಿನದಿನಕ್ಕೆ ಬದಲಾಗುವ ಫ್ಯಾಶನ್‌ಗೆ ಅನುಗುಣವಾಗಿ ವಸ್ತ್ರ ತೊಡು-ವುದು ಅನಿವಾರ್ಯವೆನ್ನಿಸಿದೆ. ಕೆಲವು ಸಂಸ್ಥೆಗಳಲ್ಲಂತೂ ಸಮವಸ್ತ್ರ ಕಡ್ಡಾಯವಾಗಿದೆ. ಆದ್ದರಿಂದ ಆ ಮಟ್ಟಿಗೆ ಅಲ್ಲಿ ವಿಹಿತವೆನ್ನಿಸುವ ಉಡುಪುಗಳನ್ನು ಧರಿಸುವುದು ಅನಿವಾರ್ಯ. ಆದರೆ ಮನೆಯ ಮಟ್ಟಿಗೆ ಶಾಸ್ತ್ರೋಕ್ತವಾದ ಉಡುಪುಗಳನ್ನು ಧರಿಸುವುದೇ ವಿಹಿತ. ಮನೆಯ ಗೌರವಕ್ಕೆ ಸಂಸ್ಕೃತಿಯ ಪಾಲನೆಗೆ ಧಾರ್ಮಿಕ ಶಿಸ್ತಿಗೆ ಒಳಪಡುವ ಉಡುಪುಗಳನ್ನು ಧರಿಸುವುದು ಅತ್ಯಗತ್ಯ. ತುಳಸೀಪೂಜೆ, ಗೌರೀಪೂಜೆ, ಅಡುಗೆ ಮೊದಲಾದವುಗಳಿಗೆ ಶಾಸ್ತ್ರವಿಧಿಸಿರುವಂತೆ ಸೀರೆ ಉಡುವುದು ಕರ್ತವ್ಯ. ಅದಕ್ಕೆ ಯಾವುದೇ ವಿಧವಾದ ಕಾನೂನು ಮೊದಲಾದವುಗಳ ತೊಡಕಿಗೆ ಅವಕಾಶವೇ ಇಲ್ಲ. ಆದರೂ ಹೆಚ್ಚಿನ ಸಂಪ್ರದಾಯಸ್ಥರ ಮನೆಯಲ್ಲೂ ಸಹ ಇಂದು ಹೊರಜಗತ್ತಿಗೆ ಅನುಗುಣವಾದ ಉಡುಪನ್ನೇ ಮನೆಯಲ್ಲೂ ಧರಿಸುವ ಪದ್ಧತಿ ಕಂಡುಬರುತ್ತದೆ. ಇದು ಶೋಭಿಸುವ ವಿಚಾರವಲ್ಲ. ಅದರಂತೆ ಕೆಲವರು ತಮ್ಮ ಮಕ್ಕಳು ಮನೆಯೊಳಗೆ ಧರಿಸುವಂತಹ ಉಡುಪುಗಳನ್ನೇ ಹೊರಹೊರಡುವಾಗಲೂ ಧರಿಸುವ ಕಟ್ಟುಪಾಡನ್ನು ಹೇರಲು ಬಯಸುವರು. ಅದು ಸಹ ಸರಿಯೆನ್ನಿಸದು. ಇತರ ಜನರೆಲ್ಲಾ ಒಂದು ಬಗೆಯಿದ್ದು ಇವರು ಮಾತ್ರವೇ ಮತ್ತೊಂದು ಬಗೆಯಲ್ಲಿರುವುದು ಒಂದು ಬಗೆಯ

---

ಸಂಕರ್ಷಣ ನಿಮ್ಮನಾಮ ವಂಕಿತಾಯಿತ
ವಾಸುದೇವ ನಿಮ್ಮನಾಮ ಒಲಿವತೋಡಾ ॥೭॥
ಪ್ರದ್ಯುಮ್ನ ನಿಮ್ಮನಾಮ ಹಸ್ತಕಂಕಣಬಳೆ
ಅನಿರುದ್ಧ ನಿಮ್ಮನಾಮ ಕಮಲದೋಲೆ ॥೮॥
ಪುರುಷೋತ್ತಮ ನಿಮ್ಮನಾಮ ಹೊಸ ಮುತ್ತಿನ ಮೂಗುತಿ
ಅಧೋಕ್ಷಜ ನಿಮ್ಮನಾಮ ಚಂದ್ರಸೂರ್ಯಾ ॥೯॥
ನರಸಿಂಹ ನಿಮ್ಮನಾಮ ಚಂದ್ರರಾಗಟಿಗೊಂಡ್ಯ
ಅಚ್ಯುತ ನಿಮ್ಮನಾಮ ಮುತ್ತಿನಾ ಬಟ್ಟು ॥೧೦॥
ಜನಾರ್ದನ ನಿಮ್ಮನಾಮ ಕಾಲುಂಗ್ರಕಿಂಪಿಲ್ಲೆ
ಉಪೇಂದ್ರ ನಿಮ್ಮನಾಮ ಗೆಜ್ಜೆರುಳಿಯು ॥೧೧॥
ಶ್ರೀಹರಿ ನಿಮ್ಮನಾಮ ನಡುವಿಗೆ ಒಡ್ಯಾಣ
ಶ್ರೀಕೃಷ್ಣ ನಿಮ್ಮನಾಮ ವಜ್ರಪದಕ ॥೧೨॥
ಸರಸಿಜಾಕ್ಷ ನಿಮ್ಮನಾಮ ಅರಶಿನ ಹಚ್ಚುವೆ
ಪಂಕಜಾಕ್ಷ ನಿಮ್ಮನಾಮ ಕುಂಕುಮ ಕಾಡಿಗೆ ॥೧೩॥
ಶ್ರೀಪತೇ ನಿಮ್ಮನಾಮ ಮುಖ ನೋಡೋ ಕನ್ನಡಿ
ಪುರಂದರವಿಠಲ ನಿಮ್ಮನಾಮ ಮುಡಿಗೆ ಮುತ್ತಿನ ದಂಡಿ ॥೧೪॥

ವಿಷಮತೆ ಎನ್ನಿಸಿ, ನಗೆಪಾಟಲಿಗೆ ಗುರಿಯಾಗುವ ಅಪಾಯ ಇರುವುದು ಸಹಜ. ಅದಕ್ಕಾಗಿ ಆ ಮಟ್ಟಿಗೆ ನಿರ್ಬಂಧವನ್ನು ಹೇರದೆ ಮನೆಯೊಳಗಿನ ಸಂಸ್ಕೃತಿಯ ಪಾಲನೆ ಮಟ್ಟಿಗೆ ಎಚ್ಚರವಹಿಸುವುದು ಸೂಕ್ತ.

## ಸಮರಸದ ದಾಂಪತ್ಯ

ಕೊನೆಯದು ಅಥವಾ ಅಷ್ಟೇ ಪ್ರಧಾನವಾದುದು ಎಂದರೆ ದಾಂಪತ್ಯದಲ್ಲಿ ಸಾಮರಸ್ಯ. ಇಂದಿನ ದಿನಗಳಲ್ಲಿ ತುಂಬಾ ಅಪರೂಪವೆನ್ನಿಸುವ ಸಂಗತಿ ಇದಾಗಿದೆ. ಸಮಾನ ಉದ್ಯೋಗ, ಓದು ಮೊದಲಾದ ಕಾರಣಗಳಿಂದ ಗಂಡ-ಹೆಂಡಿರಿಬ್ಬರೂ ಉತ್ತರಧ್ರುವ-ದಕ್ಷಿಣಧ್ರುವಗಳಂತೆ ಬದುಕುವ ಮನೆಗಳೇ ಹೆಚ್ಚು. ಉದ್ಯೋಗಸ್ಥ ಮಹಿಳೆಯರಂತೂ ಆರ್ಥಿಕ ಭದ್ರತೆಯ ಹಿನ್ನೆಲೆಯಲ್ಲಿ ಮನೆಯಲ್ಲಿ ಒಂದು ಬಗೆಯ ಧೋರಣೆಯಿಂದಲೇ ಬದುಕುವುದು ಕಂಡಿದೆ. ಆದರಿಂದಾಗಿ ಗಂಡ, ಮಕ್ಕಳಿಗೆ ಸಹಜವಾಗಿಯೇ ಕಿರಿಕಿರಿ ಎನ್ನಿಸುವುದು. ದಿನಬೆಳಗಾದರೆ ಗಂಡಹೆಂಡಿರಲ್ಲಿ ಮಾತಿನ ಜಟಾಪಟಿ, ಹೊಂದಾಣಿಕೆ ತಪ್ಪಿದ ನಡವಳಿಕೆ ಮೊದಲಾದ ಕಾರಣಗಳಿಂದ ಸುಖವೆಂಬುದು ಮರೀಚಿಕೆಯಂತಾಗಿರುವ ಕುಟುಂಬಗಳೇ ಹೆಚ್ಚು. ಹೆಚ್ಚಿನ ಸಂದರ್ಭಗಳಲ್ಲಿ ಮಕ್ಕಳು ಮರಿಗಳ ಮೇಲೆ ಇದರಿಂದ ಅನಪೇಕ್ಷಿತ ಪರಿಣಾಮವಾಗಿ ಅವರು ಮುಂದಿನ ಜೀವನದಲ್ಲಿ ದಾಂಪತ್ಯವೆಂದರೆ ಅಂಜುವಂತಹ ಪರಿಸರ ನಿರ್ಮಾಣವಾಗುವುದು ಸಹಜ. ಅಂತಹ ಎಷ್ಟೋ ಕುಟುಂಬಗಳನ್ನು ನಾವಿಂದು ಕಾಣಬಹುದು. ಮನೆ ಎಂದ ಮೇಲೆ ಭಿನ್ನಾಭಿಪ್ರಾಯಗಳು ಸಹಜ. ಅವುಗಳಿಗೆ ಕಾರಣವೇನೇ ಇದ್ದರೂ ಹೆಚ್ಚಿನ ಸಂದರ್ಭಗಳಲ್ಲಿ ಗಂಡಹೆಂಡಿರಿಬ್ಬರೂ ಅದಕ್ಕೆ ಕಾರಣರಾಗಿರುವರು. ಅದನ್ನು ಅರ್ಥಮಾಡಿಕೊಂಡು ಒಣಪ್ರತಿಷ್ಠೆಗೆ ಒಳಗಾಗದೆ, ಸಣ್ಣಪುಟ್ಟ ವಿಷಯಗಳ ಬಗ್ಗೆ ವ್ಯರ್ಥ ಕಲಹವನ್ನು ಬೆಳಸದೆ, ಪರಸ್ಪರ ಹೊಂದಿಕೊಂಡು ಹೋದಲ್ಲಿ ಕುಟುಂಬಗಳು ಸಂತಸದ ನೆಲೆ ಎನ್ನಿಸಲು ಸಾಧ್ಯ. ತಪ್ಪಿ ನಡೆದಲ್ಲಿ ಸಂಸಾರ ಎಂಬುದು ನರಕ ಎನ್ನಿಸುವಂತಾದರೆ, ಆಶ್ಚರ್ಯವೇನಲ್ಲ.

ಸಂಸಾರದಲ್ಲಿ ಅತ್ಯಂತ ಮುಖ್ಯವಾದ ಧರ್ಮ - ಸತಿಪತಿಯರು ಪರಸ್ಪರ ನಿಷ್ಠೆಯಿಂದಿರುವುದು; ಶಾಸ್ತ್ರಗಳು ತಿಳಿಸುವಂತೆ ಸತಿಯಾಗಲಿ, ಪತಿಯಾಗಲಿ, ಮಾತು, ಮನಸ್ಸು ಹಾಗೂ ದೇಹದಲ್ಲಿ ಪರಿಶುದ್ಧ ಜೀವನವನ್ನು ನಡೆಸುವುದು ಅಗತ್ಯ. ಸಿನಿಮಾ, ದೂರದರ್ಶನ ಕೀಳುದರ್ಜೆಯ ಕಥೆ-ಕಾದಂಬರಿಗಳು ಮೊದಲಾದವುಗಳ ಪ್ರಭಾವದಿಂದ ಕೇವಲ ಬಾಹ್ಯಸುಖದ ಆಕರ್ಷಣೆಗೆ ಒಳಗಾಗಿ, ಮನಸ್ಸನ್ನು ಕೆಟ್ಟ ಯೋಚನೆಯತ್ತ ಹರಿಬಿಡುವುದು ತರವಲ್ಲ. ಪಾವಿತ್ರ್ಯದ ಪ್ರಶ್ನೆ ಹೆಂಗಸರಿಗೆ ಮಾತ್ರ ಎಂಬ ಕಲ್ಪನೆಯು ಸರಿಯಾದುದಲ್ಲ. ಪತಿಗೆ ನಿಷ್ಠೆಯಿಂದ ಬದುಕುವ ಹೊಣೆಗಾರಿಕೆ ಸತಿಯದಾದರೆ, ಸತಿಗೆ ನಿಷ್ಠೆಯಿಂದ ಬದುಕುವ ಹೊಣೆಗಾರಿಕೆ ಪತಿಗೂ ಇರುವುದು ಎಂಬ ತಾತ್ಪರ್ಯನಿರ್ಣಯ (೨೯/೩೪)ದ ಮಾತು ಅತ್ಯಂತ ಗಮನಾರ್ಹವಾದುದು: ಸ್ವೀಯಪುಂನಿಯತಿಃ ಸ್ತ್ರೀಣಾಂ

ಸ್ವದಾರನಿಯತಿರ್ನೃಣಾಮ್. ತಪ್ಪಿ ನಡೆದಲ್ಲಿ ಗಂಡಿಗೆ ವಿನಾಯಿತಿ ಎಂಬ ಕೆಲವರ ಕಲ್ಪನೆ ಸರಿಯಾದುದಲ್ಲ. ಈ ಹಂತದ ಪ್ರಾಮಾಣಿಕತೆ ಇಬ್ಬರಲ್ಲೂ ಸಾಧ್ಯವಾಗುವುದಾದಲ್ಲಿ ಸಂಸಾರದ ಯಶಸ್ಸು ಖಚಿತವೆಂದೇ ಹೇಳಬಹುದು.

ಆಧುನಿಕ ಜೀವನದ ಮತ್ತೊಂದು ದುರಂತವೆಂದರೆ ದಿನದಿನ ಹೆಚ್ಚುತ್ತಿರುವ ಭೌತಿಕ ಸುಖದ ಆಕರ್ಷಣೆ. ವಿಲಾಸೀಜೀವನದ ಗೀಳು ಎಂಬುದು ಆರ್ಥಿಕವಾಗಿ ದುರ್ಬಲ ಎನ್ನಿಸಿರುವ ವರ್ಗದಲ್ಲೂ ಕಂಡುಬರುತ್ತಿರುವುದು ಶೋಚನೀಯ. ಮಧ್ಯಮವರ್ಗ-ದವರೂ ಸಹ ಹಿಂದಿನ ಕಾಲದಲ್ಲಿ ತಮ್ಮ ಇತಿಮಿತಿಗಳಿಗೆ ಅನುಗುಣವಾಗಿ ತಮ್ಮ ಅಗತ್ಯಗಳನ್ನು ಮಿತಗೊಳಿಸುವ ಪರಿಪಾಠವಿತ್ತು. ಆದರೆ ಇಂದು ಪರಸ್ಪರ ಮೇಲಾಟ ನಡೆದು, ಆರ್ಥಿಕವಾಗಿ ದುರ್ಬಲರೂ ಸಹ ಪ್ರಬಲವರ್ಗದವರಂತೆ ವಿಲಾಸ, ಮೋಜುಗಳಿಗೆ ಮನಸ್ಸನ್ನು ಹಾಕುತ್ತಿರುವುದು ಅವಲಕ್ಷಣವೇ ಸರಿ. ಹೆಚ್ಚಿನ ಮನೆಗಳಲ್ಲಿ ಸಂಸ್ಕೃತಿಗಿಂತ ಹೆಚ್ಚಾಗಿ ಕಂಡುಬರುತ್ತಿರುವುದು ವಿಲಾಸಗಳೇ ಎಂಬುದು ಸಂತಸದ ಸಂಗತಿಯೇನಲ್ಲ. ಇದರಿಂದ ಅವರ ಮಕ್ಕಳು ತೀರ ಕಿರಿಯ ವಯಸ್ಸಿನಲ್ಲಿಯೇ ಇಂತಹ ವಿಲಾಸೀಜೀವನದತ್ತ ವಾಲುವಂತಾಗುವುದು ಸಹಜ. ಆದರೆ ಇದರಿಂದಾಗಿ ಅನಗತ್ಯವಾದ ಖರ್ಚುವೆಚ್ಚಗಳಿಂದ ಮುಖ್ಯವಾಗಿ ಮನೆಯ ಯಜಮಾನ ಬಸವಳಿಯುತ್ತಾನೆ. ಜೀವನದಲ್ಲಿ ನೆಮ್ಮದಿ ಕಳೆದುಕೊಂಡು ದುಶ್ಚಟಗಳಿಗೆ ದಾಸನಾಗುವುದು ಅಥವಾ ದುರಂತವನ್ನು ಕಾಣುವುದು ತಪ್ಪಿದ್ದಲ್ಲ. ಅಂತಹ ಎಷ್ಟೋ ಪ್ರಸಂಗಗಳು ಕಣ್ಣಿಗೆ ಬೀಳುತ್ತಲೇ ಇರುತ್ತವೆ.

ಸುಭದ್ರ ಜೀವನಕ್ಕೆ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಹಾಗೂ ಧಾರ್ಮಿಕ ಎಂಬ ೪ ಮುಖಗಳೂ ಅಗತ್ಯ. ಸಂಸ್ಕೃತಿ ಒಟ್ಟು ಸಮಾಜಕ್ಕೆ ಸಂಬಂಧಪಟ್ಟದ್ದಾದರೆ, ಧಾರ್ಮಿಕ ಚಿಂತನೆ ಆತ್ಮೋದ್ಧಾರದೊಂದಿಗೆ ಲೋಕೋದ್ಧಾರಕ್ಕೂ ಕಾರಣವಾಗುವ ಅತ್ಯಂತ ಹಿರಿಯ ಮೌಲ್ಯ. ಭೌತಿಕ ಸುಖದ ಇತಿಮಿತಿಗಳನ್ನು ಮನಗಂಡು, ಅದರ ಬಗೆಗಿನ ಆಕರ್ಷಣೆಯನ್ನು ಹಿಡಿತದಲ್ಲಿರಿಸಿಕೊಂಡು ಶಾಶ್ವತಮೌಲ್ಯವಾದ ಆಧ್ಯಾತ್ಮಿಕ ಸುಖದ ಕಡೆಗೆ ಗಮನಹರಿಸುವ ಅಗತ್ಯವನ್ನು ಮನೆಯವರೆಲ್ಲಾ ಗಮನಿಸಬೇಕು. ವಿಲಾಸೀಜೀವನ ಉದ್ವೇಗಕ್ಕೆ ಕಾರಣವಾದರೆ, ಆಧ್ಯಾತ್ಮಿಕ ಜೀವನ ಉಲ್ಲಾಸಕ್ಕೆ ಕಾರಣವಾಗುವುದು. ಉದ್ವೇಗವು ಜೀವನದ ಅಳಿವಿಗೆ ಕಾರಣವಾದರೆ, ಉಲ್ಲಾಸ ವಿಕಾಸಕ್ಕೆ ಕಾರಣವಾಗುವುದು. ಇದರ ಅರಿವು ಇದ್ದಲ್ಲಿ ದಾಂಪತ್ಯ ಕೇವಲ ಐಂದ್ರಿಯ ಸುಖಕ್ಕೆ ಸೀಮಿತವಾಗದೆ, ವ್ಯಕ್ತಿತ್ವದ ವಿಕಸನಕ್ಕೆ ದಾರಿದೀಪ ಎನ್ನಿಸುವುದು.

ಇದರ ಬಗ್ಗೆ ಅರಿವು ಮೂಡಿಸುವಂತಹ ಪ್ರಯತ್ನ ನಮ್ಮ ಸಮಾಜದಲ್ಲಿ ಅಷ್ಟಾಗಿ ಕಂಡುಬರುತ್ತಿಲ್ಲ. ದಾರಿತೋರಬೇಕಾದ ಮಠಮಾನ್ಯಗಳಂತಹ ಮಹತ್ವದ ಸಂಸ್ಥೆಗಳು ಸಹ ವ್ಯಾಪಾರೀಕರಣದತ್ತ ಸಾಗಿರುವುದರಿಂದ ಸೂಕ್ತ ಮಾರ್ಗದರ್ಶನದ ಕೊರತೆ ಆಸಕ್ತರಿಗೆ ಎದ್ದು ಕಾಣುವಂತಾಗಿದೆ. ದಾಂಪತ್ಯದ ಮಟ್ಟಿಗೆ ಹೇಳುವುದಾದರೆ,

ಪ್ರತಿಮನೆಯಲ್ಲೂ ಸಹ ನಮ್ಮ ಧರ್ಮ, ಸಂಸ್ಕೃತಿ ಹಾಗೂ ತತ್ವಗಳ ಆಕರಗ್ರಂಥ-ಗಳೆನ್ನಿಸಿರುವ ರಾಮಾಯಣ, ಮಹಾಭಾರತಗಳ ಚಿಂತನೆ ಅತ್ಯಗತ್ಯ. ಅವುಗಳಿಗೆ ಸಂಬಂಧಿಸಿದ ಪಾಠ, ಪ್ರವಚನ, ಗ್ರಂಥಗಳ ಬಗ್ಗೆ ಆಸಕ್ತಿ ಮೂಡಿದಲ್ಲಿ ಜೀವನವು ದಾರಿತಪ್ಪುವ ಪ್ರಸಂಗ ತಪ್ಪುವುದು. ಇಂದಿನ ದಿನಗಳಲ್ಲಿ ಅಂತಹ ಪಾಠಪ್ರವಚನಗಳ ಕೊರತೆ ಎದ್ದುಕಾಣುತ್ತಿರುವುದು ಮತ್ತೊಂದು ಬಗೆಯ ದುರಂತ. ಆದರೂ ಗ್ರಂಥಗಳ ರೂಪದಲ್ಲಾದರೂ ಅವುಗಳು ದೊರೆಯುತ್ತಿರುವುದರಿಂದ ಅವುಗಳ ಓದಿನತ್ತ ಗಮನ ಹರಿಸಿದಲ್ಲಿ ಸೂಕ್ತ ಮಾರ್ಗದರ್ಶನ ಪಡೆಯಲು ಸಾಧ್ಯ. ಇನ್ನೂ ಹೆಚ್ಚಾಗಿ, ಪರಿಣತರಾದ ವಿದ್ವಾಂಸರ ಪ್ರವಚನಗಳ ಸಿ.ಡಿ.ಗಳು ಇಂದಿನ ಆಸ್ತಿಕ ಜನತೆಗೆ ಆಶಾಕಿರಣದಂತೆ ಕಂಡುಬರುತ್ತಿವೆ. ಅವುಗಳಿಂದಾಗಿ ಪಾಠಪ್ರವಚನಗಳನ್ನು ಆಲಿಸಲು, ಸಮಯಸಾಲದ ಯುವವರ್ಗವಾಗಲಿ, ಶಕ್ತಿಸಾಲದ ವೃದ್ಧವರ್ಗವಾಗಲಿ, ತಾವು ಇದ್ದಲ್ಲಿಯೇ ಮೌಲಿಕ ಕೃತಿಗಳ ಪರಿಚಯ ಮಾಡಿಕೊಳ್ಳಲು ಸಾಧ್ಯವಾಗುತ್ತಿದೆ. ದಂಪತಿಗಳ ಮಟ್ಟಿಗೆ ಅವುಗಳ ಆಲಿಕೆ, ನಿಜ ಅರ್ಥದಲ್ಲಿ ಅನೇಕ ದೈನಂದಿನ ಸಮಸ್ಯೆಗಳ ಪರಿಹಾರಕ್ಕೂ ದಾರಿದೀಪವೆನ್ನಿಸಿ, ಬಾಳಿನ ಗುರಿಯ ಪರಿಕಲ್ಪನೆಗೂ ನೆರವಾಗುವುವು. ವಿಚ್ಛೇದನದ ಹಂತ ತಲುಪಿದ ಎಷ್ಟೋ ಪ್ರಸಂಗಗಳು ಶ್ರೀಮದ್ಭಾಗವತದ ಪ್ರವಚನ ಮಾಲಿಕೆಯ ಸಿಡಿಗಳ ಶ್ರವಣದಿಂದಲೇ ಪರಿಹಾರವಾದ ನಿದರ್ಶನಗಳನ್ನು ನಾನು ಕಂಡಿರುವೆ. ಇದನ್ನು ಅರ್ಥಮಾಡಿಕೊಂಡು ನಿತ್ಯಜೀವನದ ಒಂದು ಭಾಗ ಎಂಬಂತೆ ಆಧ್ಯಾತ್ಮಕೃತಿಗಳ ಓದು ಹಾಗೂ ಆಲಿಕೆಗಳಿಗೆ ಗಮನಹರಿಸಿದಲ್ಲಿ ದಾಂಪತ್ಯ ಹೆಚ್ಚು ಅರ್ಥಪೂರ್ಣವೆನ್ನಿಸುವುದು ನಿಶ್ಚಿತ.

ಉದ್ಯೋಗಸ್ಥ ಮಹಿಳೆಯರ ಮತ್ತೊಂದು ನ್ಯೂನತೆ ಎಂದರೆ ಯೋಗ್ಯರೀತಿಯಲ್ಲಿ ಮಕ್ಕಳ ಪರಿಪಾಲನೆಯ ಕಾರ್ಯದಲ್ಲಿ ಲೋಪ. ಹೆಚ್ಚು ಸಂಬಳ ತರುವಂತಹ ಕೆಲಸವನ್ನು ಬಿಟ್ಟು- ಕೊಡಲಾಗದ ಅವರು ತಮ್ಮ ಮಕ್ಕಳನ್ನು ದಾದಿಯರ ರಕ್ಷಣೆಯಲ್ಲಿ ಬೆಳೆಸುವತ್ತ ಗಮನ ಹರಿಸುವರು. ಮೇಲ್ನೋಟಕ್ಕೆ ಅದು ಪರಿಹಾರದಂತೆ ಕಂಡರೂ, ಮುಂದೆ ಅದೇ ಸಮಸ್ಯೆಯ ಸ್ವರೂಪವನ್ನು ಪಡೆಯುವುದು ನಿಶ್ಚಿತ. ಅವರು ತಾಯಿಯ ಸಂಸ್ಕೃತಿಯನ್ನು ಪಡೆಯುವ ಬದಲು ದಾದಿಯ ಸಂಸ್ಕೃತಿಯನ್ನು ಪಡೆದು ಸುಸಂಸ್ಕೃತ ಮನೆತನಗಳು ಎರವಲು ಸಂಸ್ಕೃತಿಯಿಂದಾಗಿ ವಿಕೃತಗೊಳ್ಳುತ್ತವೆ. ಪಾಲನೆಯತ್ತ ಮಾತ್ರ ಗಮನ ಹರಿಸದ ಅಂತಹ ದಾದಿಯರು ತಮ್ಮ ಸಂಸ್ಕೃತಿಯತ್ತ ಅವರನ್ನು ಸೆಳೆಯುವ ದುಷ್ಕಾರ್ಯಕ್ಕೆ ಕೈಹಾಕುವುದು ಸಹಜ. ಪರಿಣಾಮ ಮಕ್ಕಳು ಅಪೂರ್ವ ಸಂಸ್ಕೃತಿಯಿಂದ ವಂಚಿತರಾಗುವುದರೊಂದಿಗೆ ಅನಪೇಕ್ಷಿತ ಸಂಸ್ಕೃತಿಯೊಂದಿಗೆ ನೆಂಟನ್ನೂ ಸಹ ಬೆಳೆಸಿಕೊಳ್ಳುವಂತೆ ಆಗುವುದು. ದಾದಿಯ ರಕ್ಷಣೆಯಲ್ಲಿ ಬೆಳೆಯುವ ಗಂಡು, ಕಂಸನಂತಾಗುವುದಕ್ಕೆ ಶ್ರೀಮದ್ಭಾಗವತ ನಿದರ್ಶನವಾದರೆ, ಹಾಗೆ ಬೆಳೆಯುವ ಹೆಣ್ಣು ಕೈಕೇಯಿಯಂತಾಗುವುದು ರಾಮಾಯಣದ ನಿದರ್ಶನ.

ಆದ್ದರಿಂದ ದಾಂಪತ್ಯದ ಫಲಶ್ರುತಿ ಎನ್ನಿಸುವ ಸಂತತಿಯನ್ನು ಸನ್ಮಾರ್ಗದಲ್ಲಿ ನಡೆಸುವ ಎಚ್ಚರವನ್ನು ಸಹ ದಂಪತಿಗಳು ವಹಿಸುವುದು ಅತ್ಯಗತ್ಯ. ಗಂಡನ ಸಂಪಾದನೆಯನ್ನು ವ್ಯವಸ್ಥಿತವಾಗಿ ಮನೆಯ ಉನ್ನತಿಗೆ ಅನುಗುಣವಾಗುವ ರೀತಿಯಲ್ಲಿ ವೆಚ್ಚ ಮಾಡುವ ಹೊಣೆ ಪತ್ನಿಯದಾಗಿದೆ. ದ್ರೌಪದೀದೇವಿಯು ಮಹಾರಾಣಿಯಾಗಿ ಕಾರ್ಯನಿರ್ವಹಿಸುತ್ತಿದ್ದ ಬಗೆಯನ್ನು ನಿರೂಪಿಸುವ ಮಹಾಭಾರತತಾತ್ಪರ್ಯನಿರ್ಣಯ (೨೦/೨)ದ ಈ ಕೆಳಗಿನ ಶ್ಲೋಕದಲ್ಲಿ ಈ ವಿವರ ಬಂದಿದೆ :

ಸ್ತ್ರೀಧರ್ಮಶಂಸಾನಭೃತ್ಯಕೋಶರಕ್ಷಾವ್ಯಯಾದೌ ಗುಣದೋಷಚಿಂತನೇ ।
ಅಂತಃಪುರಸ್ಥಸ್ಯ ಜನಸ್ಯ ಕೃಷ್ಣಾ ತ್ವಾಸೀದ್ಧರ್ಮನಿದರ್ಶನೀ ಚ ॥

ಉಳಿದಂತೆ ದಂಪತಿಗಳು [೧]ಅತಿಥಿ-ಅಭ್ಯಾಗತರನ್ನು ಆದರದಿಂದ ಕಾಣುವ ಜವಾಬ್ದಾರಿಯನ್ನು ಬೆಳೆಸಿಕೊಳ್ಳಬೇಕು. ಅದು ಐಚ್ಛಿಕವಾಗಿರದೆ ನಮ್ಮ [೨]ಸಂಸ್ಕೃತಿಯ ಒಂದು ಭಾಗವೇ ಆಗಿದೆ ಎಂಬುದನ್ನು ಗಮನಿಸಬೇಕು. ಅದರಂತೆ ತಂದೆತಾಯಿಗಳ ಪಾಲನೆಯು ಸಹ. ಹೆಚ್ಚಿನ ಕುಟುಂಬಗಳಲ್ಲಿ ವೃದ್ಧ ತಂದೆತಾಯಿಗಳು ಅನಾಥರಂತೆ ಬದುಕುವುದು ಹೆಚ್ಚುತ್ತಿದೆ. ಹೆಚ್ಚಿನ ಸಂದರ್ಭಗಳಲ್ಲಿ ಅವರ ವಾಸ ವೃದ್ಧಾಶ್ರಮಗಳಲ್ಲಿ ಎಂಬುದು ಶೋಚನೀಯವಾದ ಸಂಗತಿ. ಆರ್ಥಿಕ ಶ್ರೀಮಂತಿಕೆ ಇದ್ದು ತಂದೆತಾಯಿಗಳ ರಕ್ಷಣೆಯನ್ನು ಕರ್ತವ್ಯವೆಂದು ಭಾವಿಸದ ಅಸಂಸ್ಕೃತ ಕುಟುಂಬಗಳ ಸಂಖ್ಯೆ ಹೆಚ್ಚುತ್ತಿದೆ. ಇದರಿಂದಾಗಿ ಹಿರಿಯ ನಾಗರಿಕರ ಬಾಳು ದುರ್ಭರ ಎನ್ನಿಸುವ ಹಂತ ತಲುಪುತ್ತಿದೆ. ತಾವು ಸಹ ನಾಳೆ ಅಂತಹ ವೃದ್ಧಾಪ್ಯವನ್ನು ಹೊಂದುವುದು ತಪ್ಪಿದ್ದಲ್ಲ ಎಂಬ ಎಚ್ಚರವನ್ನು ಹೊಂದಿದಲ್ಲಿ ದಂಪತಿಗಳು ತಂದೆತಾಯಿಗಳನ್ನು ಗೌರವದಿಂದ ಕಾಣಲು ಸಾಧ್ಯವಾಗುವುದು. ತಂದೆತಾಯಿಗಳನ್ನು ಗುರುಹಿರಿಯರನ್ನು

---

೧. ಅತಿಥಿ ಅಭ್ಯಾಗತರನ್ನು ಬೇಸರದ ಮನೋಭಾವದಿಂದ ಅಸಹನೆಯಿಂದ ನೋಡುವಂತಹ ಪಾಪಿಗಳಿಗೆ ಅವರ ಕಣ್ಣುಗಳನ್ನು ಯಮಲೋಕದಲ್ಲಿ ಭಯಾನಕವಾದ ಹದ್ದು ಮೊದಲಾದ ಪಕ್ಷಿಗಳು ತಮ್ಮ ಕೊಕ್ಕಿನಿಂದ ಕಿತ್ತು ತಿನ್ನುವ ಪರ್ಯಾವರ್ತನ ಎಂಬ ನರಕವು ಉಂಟಾಗುವುದು ಎಂಬ ಉಲ್ಲೇಖ ಶ್ರೀಮದ್ಭಾಗವತಪುರಾಣದಲ್ಲಿದೆ :

ಯಸ್ತ್ವಿಹ ವಾ ಅತಿಥೀನಭ್ಯಾಗತಾನ್ ವಾ ಗೃಹಪತಿರಸಕೃದಾಹಿತಮನ್ಯುರ್ದಿಧಕ್ಷುರಿವ ಪಾಪಚಕ್ಷುಷಾ ನಿರೀಕ್ಷತೇ ತಸ್ಯ ಚಾಪಿ ನಿರಯೇ ಪಾಪದೃಷ್ಟೇರಕ್ಷಿಣೀ ವಜ್ರತುಂಡಾ ಗೃಧ್ರಾಃ ಕಂಕಬಲಾದಯಃ ಪ್ರಸಹ್ಯೋರುಬಲಾದುತ್ಪಾಟಯಂತಿ । -(೫/೨೬/೩೮)

೨. ಉತ್ತಮಸ್ಯಾಪಿ ಮರಣಸ್ಯ ನೀಚೋಽಪಿ ಗೃಹಮಾಗತಃ ।
ಪೂಜನೀಯೋ ಯಥಾ ಯೋಗ್ಯಂ ಸರ್ವದೇವಮಯೋಽತಿಥಿಃ ॥ -ಹಿತೋಪದೇಶ
ಅಭ್ಯಾಗತಂ ಪರಿಶ್ರಾಂತಂ ಸವಿಘ್ನಂ ಯೋಽಭಿವೀಕ್ಷತೇ ।
ತತ್‌ಕ್ಷಣಾದೇವ ನಶ್ಯಂತಿ ತಸ್ಯ ಧರ್ಮಯಶಃಶ್ರಿಯಃ ॥ -ಬ್ರಹ್ಮಪುರಾಣ(೧೬೩/೨೧)
ಅತಿಥಿಃ ಕಿಲ ಪೂಜಾರ್ಹಃ ಪ್ರಾಕೃತೋಽಪಿ ವಿಜಾನತಾ । -ವಾಲ್ಮೀಕಿರಾಮಾಯಣ(೫/೧/೧೧೨)
ಅತಿಥಿದೇವೋ ಭವ । -ತೈತ್ತಿರೀಯೋಪನಿಷತ್

ಗೌರವದಿಂದ ಕಾಣದಿದ್ದಲ್ಲಿ ಕಾಲಸೂತ್ರ ಎಂಬ ನರಕದಲ್ಲಿ ಮೇಲೆ ಕೆಳಗೆ ಸೂರ್ಯ ಅಗ್ನಿಗಳಿಂದ ತಪ್ತವಾದಂತಹ ಹತ್ತುಸಹಸ್ರಪರಿಧಿಯ ತಾಮ್ರದ ಹಂಚಿನಲ್ಲಿ ಹುರಿಯುವರು. ಜೊತೆಗೆ ಹಸಿವು ಬಾಯಾರಿಕೆಗಳಿಂದ ಪೀಡಿತನಾಗಿ ಅವನು ಪಶುಗಳ ಮೈಮೇಲೆ ರೋಮಗಳಿರುವಷ್ಟು ಕಾಲ ಹಿಂಸಿಸಲ್ಪಡುವನು ಎಂಬ ವಿಶೇಷ ಎಚ್ಚರಿಕೆಯನ್ನು ಶ್ರೀಮದ್ಭಾಗವತಪುರಾಣ ನೀಡಿದೆ[1]. ಇದು ಉಪನಿಷತ್ತಿನ **ಮಾತೃದೇವೋ ಭವ, ಪಿತೃದೇವೋ ಭವ, ಆಚಾರ್ಯದೇವೋ ಭವ** ಎಂಬ ಅಪೂರ್ವಸಂದೇಶದ ಮಹತ್ತ್ವವನ್ನು ತಿಳಿಸುವ ಶ್ರೀಮದ್ಭಾಗವತದ ಸಂದೇಶವಾಗಿದೆ.

ಒಟ್ಟಾಗಿ ದಾಂಪತ್ಯ ಎಂಬುದು ಕೇವಲ ಭೌತಿಕ ಸುಖದ ಗುರಿಯನ್ನು ಹೊಂದದೆ, ಬಾಳಿನ ಸರ್ವತೋಮುಖವಾದ ಪೂರ್ಣತೆಗೆ ನೆರವಾಗುವ ಶ್ರೇಷ್ಠ ಧಾರ್ಮಿಕ ಸಂಸ್ಕಾರ ಎಂಬ ಎಚ್ಚರ ಮೂಡುವುದು ತುಂಬಾ ಅಗತ್ಯ.

ನಿತ್ಯ ಜೀವನದ ಮಟ್ಟಿಗೆ ಹೇಳುವುದಾದರೆ ಸೂರ್ಯೋದಯದ ಮುನ್ನ ಏಳುವುದು, ಶೌಚ, ಸ್ನಾನಾದಿಗಳನ್ನು ಪೂರೈಸಿ, ಭಗವಚ್ಚಿಂತನೆಯತ್ತ ಗಮನ ಹರಿಸುವುದು ಅತ್ಯಂತ ಮುಖ್ಯ. ಗಂಡನಿಗಿಂತ ಮುಂಚಿತವಾಗಿ ಎದ್ದು ಅವನ ಸಂಧ್ಯಾಪೂಜಾದಿ ಕಾರ್ಯಗಳಿಗೆ ಅಣಿಮಾಡಿಕೊಡುವುದು ಗೃಹಿಣಿಯ ಕರ್ತವ್ಯ. ಸಂಕ್ಷಿಪ್ತ ದೇವಪೂಜೆಯನ್ನಾದರೂ ಮಾಡಿ, ತೀರ್ಥವನ್ನು ಸಿದ್ಧಪಡಿಸಿಕೊಳ್ಳುವುದು ಮಾಡಿದ ಅಡುಗೆಯನ್ನು ಕೃಷ್ಣಾರ್ಪಣ ಎಂಬುದಾಗಿ ದೇವರಿಗೆ ಸಮರ್ಪಿಸಿ, ಸಂಕ್ಷಿಪ್ತವಾಗಿಯಾದರೂ [2]ವೈಶ್ವದೇವ ಬಲಿಹರಣ ಬ್ರಹ್ಮಯಜ್ಞಗಳನ್ನು ಪೂರೈಸಿ ಪ್ರಸಾದ ಎಂಬ ಭಾವನೆಯಿಂದ ಭೋಜನ ಮಾಡುವುದು ಅಗತ್ಯ. ಮನೆಯಲ್ಲಿ ಸಿದ್ಧಪಡಿಸಿದ ಆಹಾರವನ್ನೇ ತೆಗೆದುಕೊಳ್ಳುವುದು ಮುಖ್ಯ. ಹೋಟೆಲ್ ಮೊದಲಾದವುಗಳ ಆಹಾರವನ್ನು ಯಾವ ಕಾರಣದಿಂದಲೂ

---

೧. ಯಸ್ತ್ವಿಹ ಪಿತೃಮಾತೃಬ್ರಹ್ಮಧ್ರುಕ್ ಸ ಕಾಲಸೂತ್ರಸಂಜ್ಞಕೇ ನರಕೇಽಯುತಯೋಜನಪರಿಮಂಡಲೇ ತಾಮ್ರಮಯೇ ಖಲೇ ಉಪರ್ಯಧಸ್ತಾದಗ್ನ್ಯರ್ಕಾಭ್ಯಾಂ ತಪ್ಯಮಾನೇಽಭಿನಿವೇಶಿತ ಕ್ಷುತ್ಪಿಪಾಸಾಭ್ಯಾಂ ಚ ದಹ್ಯಮಾನಾಂತರ್ಬಹಿಶ್ಶರೀರ ಆಸ್ತೇ ಶೇತೇ ತಿಷ್ಠತಿ ಪರಿಧಾವತಿ ಯಾಚತಿ ಚ ಯಾವಂತಿ ಪಶುರೋಮಾಣಿ ತಾವದ್ವರ್ಷಸಹಸ್ರಾಣಿ। -(೫/೨೬/೧೬)

೨. ವೈಶ್ವದೇವಾದಿಗಳನ್ನು ಮಾಡದೆ ಭೋಜನ ಮಾಡುವವರಿಗೆ ಕ್ರಿಮಿರೂಪವನ್ನು ಹೊಂದಿ ಕ್ರಿಮಿಗಳಿಂದ ತಿನ್ನಲ್ಪಡುವ, ಕ್ರಿಮಿಗಳನ್ನೇ ತಿಂದು ಬದುಕುವಂತಹ ಕ್ರಿಮಿಭೋಜನ ಎಂಬ ನರಕವು ಉಂಟಾಗುವುದು ಎಂಬ ಮಾತು ಶ್ರೀಮದ್ಭಾಗವತಮಹಾಪುರಾಣದಲ್ಲಿದೆ:
ಯಸ್ತ್ವಿಹ ವಾಽಸಂವಿಭಜ್ಯಾಶ್ನಾತಿ ಯತ್ಕಿಂಚನೋಪನತಮನಿರ್ವೃತಯಜ್ಞೋಪಾಯಮಸಂಸ್ಕೃತಂ ಸ ಪರತ್ರ ಕ್ರಿಮಿಭೋಜನೇ ನರಕಾಧಮೇ ನಿಪತತಿ । ತತ್ರ ಸಹಸ್ರಯೋಜನೇ ಕ್ರಿಮಿಕುಂಡೇ ಕ್ರಿಮಿಭೂತಃ ಸ್ವಯಂ ಕ್ರಿಮಿಭಿರೇವ ಭಕ್ಷ್ಯಮಾಣಃ ಕ್ರಿಮಿಭೋಜನೋ ಯಾವತ್ತದಪ್ರತ್ತಾಹೃತ-ನಿರ್ವೇಶಮಾತ್ಮಾನಂ ಯಾತಯತೇ। -(೫/೨೬/೨೦)

ಸ್ವೀಕರಿಸಬಾರದು. ಅನಿವಾರ್ಯ ಎನಿಸಿದಲ್ಲಿ ಮನೆಯಲ್ಲೇ ಸಿದ್ಧಪಡಿಸಿದ ಆಹಾರ ಪದಾರ್ಥಗಳನ್ನೇ ಒಯ್ದು ತಿನ್ನುವುದು ಆರೋಗ್ಯ ಹಾಗೂ ಧರ್ಮದ ದೃಷ್ಟಿಯಿಂದ ಮುಖ್ಯ. ಬೀದಿಯಲ್ಲಿ ಮಾರುವ ಪದಾರ್ಥಗಳನ್ನು ತಿನ್ನುವುದು, ಕರಿದ ತಿಂಡಿ, ಸಿಹಿತಿಂಡಿಗಳನ್ನು ಕೊಂಡು ತಿನ್ನುವುದು ಆರೋಗ್ಯದ ಜೊತೆಗೆ ಧರ್ಮವನ್ನು ಹಾಳು-ಮಾಡುವವು. ಮನೆಯಲ್ಲಿನ ಆಹಾರವನ್ನು ಮಾತ್ರ ಸ್ವೀಕರಿಸುವುದು ಆರೋಗ್ಯದೊಂದಿಗೆ ಮನೆಯವರೊಟ್ಟಿಗೆ ಬಾಂಧವ್ಯವನ್ನು ಹೆಚ್ಚಿಸಿಕೊಳ್ಳುವ ಸಾಧನವಾಗಿಯೂ ಸಹ ಮುಖ್ಯವೆನ್ನಿಸುವುದು. ಇಂದಿನ ಹೆಚ್ಚಿನ ಅನರ್ಥಗಳಿಗೆ ಸಿಕ್ಕಲ್ಲಿ ತಿನ್ನುವ ಪ್ರವೃತ್ತಿ ಒಂದು ಪ್ರಧಾನ ಕಾರಣವೆನ್ನಿಸಿದೆ. ಹೊರಗಿನ ವಾತಾವರಣದಲ್ಲಿ ಅದು ಜೀವನದ ಅವಿಭಾಜ್ಯ ಅಂಗ ಎನ್ನುವಂತೆ ರೂಪುಗೊಂಡಿದೆ. ಇದಕ್ಕೆ ಅವಕಾಶ ನೀಡದಂತಹ ಮನೋಬಲವನ್ನು ಬೆಳೆಸಿಕೊಂಡು, ಧರ್ಮ ಹಾಗೂ ಆರೋಗ್ಯಗಳ ರಕ್ಷಣೆಯ ನಿಶ್ಚಿತವಾದ ಗುರಿಯೊಂದಿಗೆ ಬದುಕಿದಲ್ಲಿ ವೈಯಕ್ತಿಕವಾಗಿ ಕೌಟುಂಬಿಕವಾಗಿ ಮಾತ್ರವಲ್ಲದೆ ಸಾಮಾಜಿಕವಾಗಿಯೂ ಸಹ ಅಪಾರವಾದ ಕೊಡುಗೆಯನ್ನು ನೀಡಲು ಸಾಧ್ಯ.

ಒಟ್ಟಾಗಿ ದಾಂಪತ್ಯವೆಂಬುವುದು ಮೂಲತಃ ಹೃದಯಗಳ ಬೆಸುಗೆ. ಭಗವದ್ಪ್ರೀತಿಗಾಗಿ ಇತರ ಕ್ಷುಲ್ಲಕವಿಷಯಗಳನ್ನು ಕಡೆಗಣಿಸಿ ಕೇವಲ ಸಮಾಜ, ಕುಟುಂಬ ಹಾಗೂ ಸಂಸ್ಕೃತಿಗಳ ರಕ್ಷಣೆಗೆ ತಮ್ಮನ್ನು ತೊಡಗಿಸಿಕೊಳ್ಳುವ ವಿಶಿಷ್ಟಸಂಸ್ಕಾರ ಈ ವಿವಾಹಸಂಸ್ಕಾರವಾಗಿದೆ. ರಾಮಾಯಣ ಮಹಾಭಾರತಗಳಲ್ಲಿ ಬರುವ ಸೀತಾ-ರಾಮ ಕಲ್ಯಾಣ, ಶ್ರೀಕೃಷ್ಣ-ರುಕ್ಮಿಣೀ ಕಲ್ಯಾಣ, ಸತ್ಯಭಾಮಾ-ಕೃಷ್ಣಕಲ್ಯಾಣ, ಶ್ರೀನಿವಾಸ-ಪದ್ಮಾವತೀ ಕಲ್ಯಾಣ, ಭೀಮ-ದ್ರೌಪದಿಯರ ಕಲ್ಯಾಣ, ಶಿವ-ಪಾರ್ವತಿಯರ ಕಲ್ಯಾಣಗಳ ಅಂತರಾರ್ಥವನ್ನು ಗ್ರಹಿಸಿ ಆದರ ಆದರ್ಶದಲ್ಲಿ ತಮ್ಮನ್ನು ತೊಡಗಿಸಿಕೊಂಡು ಜೀವನದಲ್ಲಿ ಯಥೋಚಿತವಾದ ಪೂರ್ಣತೆಯನ್ನು ಕಂಡು ಮೋಕ್ಷಸಾಧನೆಯ ಗುರಿಯನ್ನು ಸಾಧಿಸುವುದರಲ್ಲಿ ವಿವೇಕವಿದೆ, ಯಶಸ್ಸಿದೆ, ಸಂತೃಪ್ತಿ ಇದೆ ಎಂದು ತಿಳಿಯಭೇಕು.

★★★★★

॥ ಶ್ರೀಕೃಷ್ಣಾರ್ಪಣಮಸ್ತು ॥

ಸಮರ್ಪಿತಂ ಮಯಾ ಭವೇತ್ ಸುಮಧ್ವಸುತ್ತವಾಣಿನಾ।
ರಮಾರಮೇಶಪಾದಯೋಃ ಪ್ರಭಂಜನಾಭಿಧಾಯುಜಾ ॥

******

# ಪರಿಶಿಷ್ಟ - ೧

## ೧. ಮಂಗಲಾಷ್ಟಕಮ್

ಲಕ್ಷ್ಮೀರ್ಯಸ್ಯ ಪರಿಗ್ರಹಃ ಕಮಲಭೂಃ ಸೂನುರ್ಗರುತ್ಮಾನ್ ರಥಃ
ಪೌತ್ರಶ್ಚಂದ್ರವಿಭೂಷಣಃ ಸುರಗುರುಃ ಶೇಷಶ್ಚ ಶಯ್ಯಾ ಪುನಃ।
ಬ್ರಹ್ಮಾಂಡಂ ವರಮಂದಿರಂ ಸುರಗಣಾ ಯಸ್ಯ ಪ್ರಭೋಃ ಸೇವಕಾಃ
ಸ ತ್ರೈಲೋಕ್ಯಕುಟುಂಬಪಾಲನಪರಃ ಕುರ್ಯಾದ್ಧರಿರ್ಮಂಗಲಮ್ ॥೧॥

ಬ್ರಹ್ಮಾ ವಾಯುಗಿರೀಶಶೇಷಗರುಡಾ ದೇವೇಂದ್ರಕಾಮೌ ಗುರು-
ಶ್ಚಂದ್ರಾರ್ಕೌ ವರುಣಾನಲೌ ಮನುಯಮೌ ವಿತ್ತೇಶವಿಘ್ನೇಶ್ವರೌ।
ನಾಸತ್ಯೌ ನಿರ್ಋತಿರ್ಮರುದ್ಗಣಯುತಾಃ ಪರ್ಜನ್ಯಮಿತ್ರಾದಯಃ
ಸಸ್ತ್ರೀಕಾಃ ಸುರಪುಂಗವಾಃ ಪ್ರತಿದಿನಂ ಕುರ್ವಂತು ನೋ ಮಂಗಲಮ್ ॥೨॥

ವಿಶ್ವಾಮಿತ್ರಪರಾಶರೌರ್ವಭೃಗವೋಽಗಸ್ತ್ಯಃ ಪುಲಸ್ತ್ಯಃ ಕ್ರತುಃ
ಶ್ರೀಮಾನತ್ರಿಮರೀಚಿಕೌತ್ಸಪುಲಹಾಃ ಶಕ್ತಿರ್ವಸಿಷ್ಠೋಽಂಗಿರಾಃ।
ಮಾಂಡವ್ಯೋ ಜಮದಗ್ನಿಗೌತಮಭರದ್ವಾಜಾದಯಸ್ತಾಪಸಾಃ
ಶ್ರೀವಿಷ್ಣೋಃ ಪದಪದ್ಮಚಿಂತನರತಾಃ ಕುರ್ವಂತು ನೋ ಮಂಗಲಮ್ ॥೩॥

ಮಾಂಧಾತಾ ನಹುಷೋಽಂಬರೀಷಸಗರೌ ರಾಜಾ ಪೃಥುರ್ಹೈಹಯಃ
ಶ್ರೀಮಾನ್ ಧರ್ಮಸುತೋ ನಲೋ ದಶರಥೋ ರಾಮೋ ಯಯಾತಿರ್ಯದುಃ।
ಇಕ್ಷ್ವಾಕುಶ್ಚ ವಿಭೀಷಣಶ್ಚ ಭರತಶ್ಚೋತ್ತಾನಪಾದೋ ಧ್ರುವ-
ಶ್ಚೇತ್ಯಾದ್ಯಾ ಭುವಿ ಭೂಭುಜಶ್ಚ ಸತತಂ ಕುರ್ವಂತು ನೋ ಮಂಗಲಮ್ ॥೪॥

ಶ್ರೀಮೇರುರ್ಹಿಮವಾಂಶ್ಚ ಮಂದರಗಿರಿಃ ಕೈಲಾಸಶೈಲಸ್ತಥಾ
ಮಾಹೇಂದ್ರೋ ಮಲಯಶ್ಚ ವಿಂಧ್ಯನಿಷಧೌ ಸಿಂಹಸ್ತಥಾ ರೈವತಃ।
ಸಹ್ಯಾದ್ರಿರ್ವರಗಂಧಮಾದನಗಿರಿರ್ಮೈನಾಕಗೋಮಂತಕೌ
ಇತ್ಯಾದ್ಯಾ ಭುವಿ ಭೂಧರಾಃ ಪ್ರತಿದಿನಂ ಕುರ್ವಂತು ನೋ ಮಂಗಲಮ್ ॥೫॥

ಗಂಗಾ ಸಿಂಧುಸರಸ್ವತೀ ಚ ಯಮುನಾ ಗೋದಾವರೀ ನರ್ಮದಾ
ಕೃಷ್ಣಾ ಭೀಮರಥೀ ಚ ಫಲ್ಗುಸರಯೂ ಶ್ರೀಗಂಡಕೀ ಗೋಮತೀ।
ಕಾವೇರೀ ಕಪಿಲಾ ವರಾಹತನಯಾ ನೇತ್ರಾವತೀತ್ಯಾದಯೋ
ನದ್ಯಃ ಶ್ರೀಹರಿಪಾದಪಂಕಜಭವಾಃ ಕುರ್ವಂತು ನೋ ಮಂಗಲಮ್ ॥೬॥

ವೇದಾಶ್ಚೋಪನಿಷದ್ಗಣಾಶ್ಚ ವಿವಿಧಾಃ ಸಾಂಗಾಃ ಪುರಾಣಾನ್ವಿತಾ
ವೇದಾಂತಾ ಅಪಿ ಮಂತ್ರತಂತ್ರಸಹಿತಾಸ್ತರ್ಕಾಃ ಸ್ಮೃತೀನಾಂ ಗಣಾಃ।

ಕಾವ್ಯಾಲಂಕೃತಿನೀತಿನಾಟಕಯುತಾಃ ಶಬ್ದಾಶ್ಚ ನಾನಾವಿಧಾಃ
ಶ್ರೀವಿಷ್ಣೋರ್ಗುಣರಾಶಿಕೀರ್ತನಪರಾಃ ಕುರ್ವಂತು ನೋ ಮಂಗಲಮ್ ॥೭॥

ಆದಿತ್ಯಾದಿನವಗ್ರಹಾಃ ಶುಭಕರಾ ಮೇಷಾದಯೋ ರಾಶಯೋ
ನಕ್ಷತ್ರಾಣಿ ಸಯೋಗಕಾಶ್ಚ ತಿಥಯಸ್ತದ್ದೇವತಾಸ್ತದ್ಗಣಾಃ ।
ಮಾಸಾಬ್ದಾ ಋತವಸ್ತಥೈವ ದಿವಸಾಃ ಸಂಧ್ಯಾಸ್ತಥಾ ರಾತ್ರಯಃ
ಸರ್ವೇ ಸ್ಥಾವರಜಂಗಮಾಃ ಪ್ರತಿದಿನಂ ಕುರ್ವಂತು ನೋ ಮಂಗಲಮ್ ॥೮॥

ಇತ್ಯೇತದ್ವರಮಂಗಲಾಷ್ಟಕಮಿದಂ ಶ್ರೀರಾಜರಾಜೇಶ್ವರೈ-
ರಾಖ್ಯಾತಂ ಜಗತಾಮಭೀಷ್ಟಫಲದಂ ಸರ್ವಾಶುಭಧ್ವಂಸನಮ್ ।
ಮಾಂಗಲ್ಯಾದಿಶುಭಕ್ರಿಯಾಸು ಸತತಂ ಸಂಧ್ಯಾಸು ವಾ ಯಃ ಪಠೇ-
ದ್ಧರ್ಮಾರ್ಥಾದಿಸಮಸ್ತವಾಂಛಿತಫಲಂ ಪ್ರಾಪ್ನೋತ್ಯಸೌ ಮಾನವಃ ॥೯॥

॥ ಇತಿ ಶ್ರೀರಾಜರಾಜೇಶ್ವರಶ್ರೀಚರಣವಿರಚಿತಂ ಮಂಗಲಾಷ್ಟಕಮ್ ॥

ತದೇವ ಲಗ್ನಂ ಸುದಿನಂ ತದೇವ ತಾರಾಬಲಂ ಚಂದ್ರಬಲಂ ತದೇವ ।
ವಿದ್ಯಾಬಲಂ ದೈವಬಲಂ ತದೇವ ಲಕ್ಷ್ಮೀಪತೇ ತೇಽಂಘ್ರಿಯುಗಂ ಸ್ಮರಾಮಿ ॥
ಮಂಗಲಂ ಭಗವಾನ್ ವಿಷ್ಣುರ್ಮಂಗಲಂ ಮಧುಸೂದನಃ ।
ಮಂಗಲಂ ದೇವಕೀಪುತ್ರೋ ಮಂಗಲಂ ಗರುಡಧ್ವಜಃ ॥

*****

## ೨. ಶ್ರೀರಾಮಮಂಗಲಾಷ್ಟಕಮ್

ಲಕ್ಷ್ಮೀಶೋ ಭುವನತ್ರಯೇ ನಿವಸತೋ ದೇವಾನ್ ಮನುಷ್ಯೋರಗಾನ್
ಸಂಸ್ಥಾತುಂ ಕರುಣಾನಿಧಿಃ ಕರುಣಯಾ ಮಾರ್ತಾಂಡವಂಶೇಽಮಲೇ ।
ಕೌಸಲ್ಯಾನಿಜಗರ್ಭಸಂಭವಬೃತೇ ಜನ್ಮನ್ಯಸಾಧಾರಣೇ
ಜಾತೇ ಶ್ರೀರಘುನಾಯಕಸ್ಯ ಜನನಂ ದೇಯಾದಿದಂ ಮಂಗಲಮ್ ॥೧॥

ವೈದೇಹೀವದನಾಭಿಲಾಷಣಯುತಂ ಕಾಮಃ ಸಕಾಮಃ ಕೃತಃ
ವಿಖ್ಯಾತಂ ಭುವನತ್ರಯೇ ಹರಧನುರ್ಭಗ್ನೀಕೃತಂ ಲೀಲಯಾ ।
ವಿಶ್ವಾಮಿತ್ರಪರಾಶರಾದಿಮುನಿಭಿಃ ಸತ್ಸನ್ನಿಧಾನಾಂಚಿತಂ
ಸೀತಾರಾಘವಯೋರ್ವಿವಾಹಸಮಯೇ ದೇಯಾದಿದಂ ಮಂಗಲಮ್ ॥೨॥

ಉತ್ಫುಲ್ಲಾಮಲನೀಲವಾರಿಜದಲಶ್ಯಾಮೋನ್ನತಂ ಕೋಮಲಂ
ಪಾರ್ವತ್ಯಾ ಚ ಮಹೇಶ್ವರೇಣ ಶಿರಸಾ ಶ್ಲಾಘೀಕೃತಂ ಸರ್ವದಾ ।
ಶಾಪಾಪ್ತ್ಯಾ ವರಗೌತಮಸ್ಯ ವನಿತಾ ಶೈಲಾ ಸುಶೀಲಾ ಕೃತಾ
ದಂಪತ್ಯೋರಿಹ ವಾಮಭಾಗವನಿತಂ ದೇಯಾದಿದಂ ಮಂಗಲಮ್ ॥೩॥

ಶ್ರೀರಾಮಂ ಜನಕಾತ್ಮಜಾಂ ಸ್ಮಿತಮುಖೀಂ ಪ್ರತ್ಯಙ್ಮುಖಂ ಪ್ರಾಙ್ಮುಖೀಂ
ದೋರ್ಭ್ಯಾಮಂಜಲಿಮುಂಚಿತೈಶ್ಚ ವನಿತಾಮಾಪೂರ್ಯ ಮುಕ್ತಾಫಲೈಃ।
ನಾನಾರತ್ನವಿರಾಜಮಾನಕಲಶೈರಾನಾಯಿತೈಃ ಸಾಗರಾತ್
ಸೀತಾರಾಘಯೋರ್ವಿವಾಹಸಮಯೇ ದೇಯಾದಿದಂ ಮಂಗಲಮ್ ॥೪॥

ಕಲ್ಯಾಣಂ ಕಮನೀಯಕೋಮಲಕರೈರಾದ್ರಾಕ್ಷತಾರೋಪಣಂ
ಕನ್ಯಾದಾನಪುರಃಸರಂ ಸುರಗುರೋರ್ವಿಪ್ರಾಶಿಷಾ ಸಂಭೃತಮ್।
ಬಾಹ್ವೋಃ ಕಂಕಣಬಂಧನಂ ದಶಗುಣಂ ಮಾಂಗಲ್ಯಸೂತ್ರಾನ್ವಿತಂ
ಸೀತಾರಾಘಯೋರ್ವಿವಾಹಸಮಯೇ ದೇಯಾದಿದಂ ಮಂಗಲಮ್ ॥೫॥

ಶ್ರೀರಾಮಃ ಸಹ ಸೀತಯಾ ಹುತವಹೇ ವೈವಾಹಿಕೇ ಸಂಭ್ರಮೇ
ಹುತ್ವಾಽಽಜ್ಯಾಹುತಿಭಿಃ ಶುಭೈರ್ದ್ವಿಜಮುಖೋದ್ಗೀತೈಃ ಸುಮಂತ್ರೈರಪಿ।
ಲಾಜಾಖ್ಯೇನ ಸುಹೋಮಕೇನ ವಿಧಿವತ್ ಕೃತ್ವಾ ಚ ವೈವಾಹಿಕಂ
ಸೀತಾರಾಘಯೋರ್ವಿವಾಹಸಮಯೇ ದೇಯಾದಿದಂ ಮಂಗಲಮ್ ॥೬॥

ವಸ್ತ್ರಾಬ್ರಂಧನಮೋಕ್ಷಕೇ ಕೃತವತೀಂ ಸೀತಾಂ ಗೃಹೀತ್ವಾಽಽದರಾತ್
ಪೂರ್ಣೈಃ ಕುಂಭಗಣೈಃ ಪ್ರಸೇಕವಿಧಿನಾ ಹ್ಯೌಪಾಸನಾನಂತರಮ್।
ವಿಪ್ರಾಶೀರ್ವಚನೈಶ್ಚ ಪುಣ್ಯಫಲದೈಶ್ಚಾರುಂಧತೀದರ್ಶಕಃ
ಸೀತಾರಾಘವಯೋರ್ವಿವಾಹಸಮಯೇ ದೇಯಾದಿದಂ ಮಂಗಲಮ್ ॥೭॥

ಸೀತಾದಾಶರಥೀ ಪ್ರಣಮ್ಯ ಜನಕಂ ಸಲ್ಲಜ್ಜಯಾಽಽಲೋಕಿತಾ-
ವನ್ಯೋನ್ಯಂ ರಥಮಾಸ್ಥಿತೌ ಪುರಜನೈರಾಲೋಕಿತೌ ಕೌತುಕಾತ್।
ಸ್ವಾಯೋಧ್ಯಾನಗರೀಂ ಪ್ರವಿಶ್ಯ ಮಹತೀಂ ಸಿಂಹಾಸನಾಧಿಷ್ಠಿತೌ
ತೌ ಭದ್ರಾವಿಹ ದಂಪತೀ ಪ್ರದಿಶತಾಂ ಭಕ್ತೇಷ್ಟದಂ ಮಂಗಲಮ್ ॥೮॥

ಇತ್ಯೇತದ್ವರಮಂಗಲಾಷ್ಟಕಮಿದಂ ವಾಲ್ಮೀಕಿನೋದೀರಿತಂ
ಪಾಪೌಘಪ್ರಶಮಾಯ ಪುಣ್ಯಫಲದಂ ಬ್ರಹ್ಮಾದಿಭಿರ್ದುರ್ಲಭಮ್।
ಯಃ ಪ್ರಾತಃ ಶೃಣುಯಾತ್ ಪಠೇದ್ರಘುಪತೇಃ ಸ್ನಾನಾತ್ ಫಲಂ ಪ್ರಾಪ್ನುಯಾತ್
ಗಂಗಾಸಾಗರಸಂಗಮೇ ತ್ವನುದಿನಂ ದೇಯಾದಿದಂ ಮಂಗಲಮ್ ॥೯॥

ತದೇವಲಗ್ನಂ ಸುದಿನಂ ತದೇವ ತಾರಾಬಲಂ ಚಂದ್ರಬಲಂ ತದೇವ।
ವಿದ್ಯಾಬಲಂ ದೈವಬಲಂ ತದೇವ ಲಕ್ಷ್ಮೀಪತೇ ತೇಽಂಘ್ರಿಯುಗಂ ಸ್ಮರಾಮಿ ॥೧೦॥

ಶ್ರೀರಾಮಪತ್ನೀ ಜನಕಸ್ಯ ಪುತ್ರೀ ಸೀತಾಂಗನಾ ಸುಂದರಕೋಮಲಾಂಗೀ।
ಪೀತಾಂಬರಾ ರತ್ನವಿಭೂಷಿತಾಂಗೀ ವಧೂವರಾಭ್ಯಾಂ ವರದಾಽಸ್ತು ನಿತ್ಯಮ್ ॥೧೧॥

ಜಾನಕ್ಯಾಃ ಕಮಲಾಮಲಾಂಜಲಿಪುಟೇ ಯಾ ಪದ್ಮರಾಗಾಯಿತಾ
ನ್ಯಸ್ತಾ ರಾಘವಮಸ್ತಕೇ ಚ ವಿಲಸತ್ಕುಂದಪ್ರಸೂನಾಯಿತಾಃ।

ಪ್ರಸ್ತಾಃ ಶ್ಯಾಮಲಕಾಯಕಾಂತಿಕಲಿತಾ ಯಾ ಇಂದ್ರನೀಲಾಂಕಿತಾಃ
ಮುಕ್ತಾಸ್ತಾಃ ಶುಭದಾ ಭವಂತು ಭವತಾಂ ಶ್ರೀರಾಮವೈವಾಹಿಕಾಃ ॥೧೨॥

॥ ಇತಿ ಶ್ರೀವಾಲ್ಮೀಕಿವಿರಚಿತಂ ಶ್ರೀರಾಮಮಂಗಲಾಷ್ಟಕಮ್ ॥

*****

## ೩. ಶ್ರೀಕೃಷ್ಣಮಂಗಲಾಷ್ಟಕಮ್

ಶ್ರೀನಾರೀವದನಾಂಬುಜಸ್ಯ ತರಣಿಃ ಶ್ರೀವತ್ಸಧಾರೀ ಹರಿಃ
ಶ್ರೀವೈಕುಂಠನಿವಾಸಲೋಲುಪಮತಿಃ ಶ್ರೀಕೌಸ್ತುಭಾಲಂಕೃತಃ ।
ಶ್ರೀಮದ್ಬ್ರಹ್ಮಪಿನಾಕಿಪೂಜಿತಪದಃ ಶ್ರೀಶಂಖಚಕ್ರಾಂಕಿತಃ
ಶ್ರೀವ್ಯಾಸಾರ್ಯಮನೋಽಂಬುಜಸ್ಥಿರರತಿಃ ಕುರ್ಯಾತ್ ಸದಾ ಮಂಗಲಮ್ ॥೧॥

ಕಸ್ತೂರೀಯುತಗಂಧಲೇಪಿತತನುಃ ಕುಂದಾಬ್ಜಮಾಲಾಧರಃ
ಕೇಯೂರಾದಿಸಮಸ್ತಭೂಷಣಯುತಃ ಕಂಜಾದಿಚಿಹ್ನಾಂಕಿತಃ ।
ಮೀನಾಂಕಾದ್ಭುತಕೋಟಿಸುಂದರತನುರ್ಮಾಯಾತಿಗೋ ಮಾಧವಃ
ಶ್ರೀವ್ಯಾಸಾರ್ಯಮನೋಽಂಬುಜಸ್ಥಿರರತಿಃ ಕುರ್ಯಾತ್ ಸದಾ ಮಂಗಲಮ್ ॥೨॥

ದೇವಾನಾಮಧಿಪಃ ಪಿನಾಕಿಸುಸಖೋ ದೇವಾರಿದರ್ಪಾಪಹಃ
ಕೌಂಡಿನ್ಯಾದಿತಪಸ್ವಿಸಂಘವಿನುತಃ ಕೌಂತೇಯಸಂರಕ್ಷಕಃ ।
ವೇದಾದ್ಯರ್ಥಪದಕ್ರಮಾದಿಸಮಿತೋ ವಿಶ್ವಾಧಿನಾಥೋ ಹರಿಃ
ಶ್ರೀವ್ಯಾಸಾರ್ಯಮನೋಽಂಬುಜಸ್ಥಿರರತಿಃ ಕುರ್ಯಾತ್ ಸದಾ ಮಂಗಲಮ್ ॥೩॥

ಪೃಥ್ವೀಭಾರನಿವಾರಣೇ ಸುನಿರತಃ ಪೃಥ್ವೀಪತಿಃ ಪಾರ್ಥಿವೈ-
ರ್ಮಾಂಧಾತೃಪ್ರಮುಖೈಃ ಸಮರ್ಚಿತಪದೋ ಮೀನಾಂಕತಾತೋ ಗುರುಃ ।
ನಕ್ಷತ್ರಾಧಿಪಚಂಡಭಾನುನಯನೋ ನಾಗೇಂದ್ರಶಾಯೀ ಹರಿಃ
ಶ್ರೀವ್ಯಾಸಾರ್ಯಮನೋಽಂಬುಜಸ್ಥಿರರತಿಃ ಕುರ್ಯಾತ್ ಸದಾ ಮಂಗಲಮ್ ॥೪॥

ಸರ್ವಜ್ಞಃ ಸನಕಾದಿಭಿಃ ಪರಿವೃತಃ ಸರ್ವೇಷು ಕೃತ್ಯೇಷ್ವಪಿ
ಧ್ಯೇಯೋ ಧಾಮನಿವಾಸಬಿಂಬವಸತಿಃ ಸರ್ವಜ್ಞಚೂಡಾಮಣಿಃ ।
ಸತ್ಯಜ್ಞಾನಶುಭಸ್ವರೂಪಸುಖದಃ ಸರ್ವೇಷ್ಟದಾತಾ ಹರಿಃ
ಶ್ರೀವ್ಯಾಸಾರ್ಯಮನೋಽಂಬುಜಸ್ಥಿರರತಿಃ ಕುರ್ಯಾತ್ ಸದಾ ಮಂಗಲಮ್ ॥೫॥

ಗೋವಿಂದೋ ಗರುಡಧ್ವಜೋ ಗುರುತಮೋ ಗಾಂಗೇಯಸಂರಕ್ಷಕೋ
ಗಾಂಗೇಯಾಂಬರಚುಂಬಿತೋ ಗಗನಸದ್ಗಂಗಾಗುರುರ್ಗೋಪತಿಃ ।
ಗಂಧರ್ವಾದಿಸುಗೀತಹೃಷ್ಟಹೃದಯೋ ಗೋಪಾಲಬಾಲಾನ್ವಿತಃ
ಶ್ರೀವ್ಯಾಸಾರ್ಯಮನೋಽಂಬುಜಸ್ಥಿರರತಿಃ ಕುರ್ಯಾತ್ ಸದಾ ಮಂಗಲಮ್ ॥೬॥

ಯಜ್ಞೇಶೋ ಯದುನಂದನೋ ಯದುಪತಿರ್ಯಜ್ಞೇಶ್ವರೋ ಯಜ್ಞಭು-
ಗ್ಯಜ್ಞಜ್ಞೇಶತನೂಜಭಾವಭರಿತೋ ಯಜ್ಞಾಭಿಧೇಯೋ ಹರಿಃ ।
ಯಜ್ಞೋದ್ಭಾಸವಿಭೂತಯಜ್ಞಫಲದೋ ಯಜ್ಞಪ್ರಿಯಃ ಶ್ರೀಕರಃ
ಶ್ರೀವ್ಯಾಸಾರ್ಯಮನೋಽಂಬುಜಸ್ಥಿರರತಿಃ ಕುರ್ಯಾತ್ ಸದಾ ಮಂಗಲಮ್ ॥೭॥

ಪೂರ್ಣಪ್ರಜ್ಞಮತಸ್ಥಿತಾರ್ಯಸುಖದಃ ಪೂರ್ಣೇಂದುಬಿಂಬಸ್ಥಿತಃ
ಪುಣ್ಯಾನೇಕಫಲಪ್ರದಾನಚತುರಃ ಶ್ರೀಪುಂಡರೀಕಪ್ರಿಯಃ ।
ವಿಜ್ಞಾನಾದ್ಯಮಲಾಕೃತಿರ್ವಿಜಯತೇ ಶ್ರೀವಿಟ್ಠಲಃ ಶ್ರೀಕರಃ
ಶ್ರೀವ್ಯಾಸಾರ್ಯಮನೋಽಂಬುಜಸ್ಥಿರರತಿಃ ಕುರ್ಯಾತ್ ಸದಾ ಮಂಗಲಮ್ ॥೮॥

॥ ಇತಿ ಶ್ರೀವ್ಯಾಸರಾಜಶ್ರೀಚರಣಕೃತಂ ಶ್ರೀಕೃಷ್ಣಮಂಗಲಾಷ್ಟಕಮ್ ॥

*****

## ೪. ಶ್ರೀವೇಂಕಟೇಶಮಂಗಲಾಷ್ಟಕಮ್ - ೧

ಶ್ರೀಕ್ಷೋಣ್ಯೌ ರಮಣೀಯುಗಂ ಸುರಮಣೀಪುತ್ರೋಽಪಿ ವಾಣೀಪತಿಃ
ಪೌತ್ರಶ್ಚಂದ್ರಶಿರೋಮಣಿಃ ಫಣಿಪತಿಃ ಶಯ್ಯಾ ಸುರಾಃ ಸೇವಕಾಃ ।
ತಾರ್ಕ್ಷ್ಯೋ ಯಸ್ಯ ರಥೋ ಮಹಚ್ಚ ಭವನಂ ಬ್ರಹ್ಮಾಂಡಮಾದ್ಯಃ ಪುಮಾನ್
ಶ್ರೀಮದ್ವೇಂಕಟಭೂಧರೇಂದ್ರರಮಣಃ ಕುರ್ಯಾದ್ಧರಿರ್ಮಂಗಲಮ್ ॥೧॥

ಯತ್ತೇಜೋ ರವಿಕೋಟಿಕೋಟಿಕಿರಣಾನ್ ಧಿಕ್ಕೃತ್ಯ ಜೇಜೀಯತೇ
ಯಸ್ಯ ಶ್ರೀವದನಾಂಬುಜಸ್ಯ ಸುಷಮಾ ರಾಕೇಂದುಕೋಟೀರಪಿ ।
ಸೌಂದರ್ಯಂ ಚ ಮನೋಭವಾನಪಿ ಬಹೂನ್ ಕಾಂತಿಶ್ಚ ಕಾದಂಬಿನೀಂ
ಶ್ರೀಮದ್ವೇಂಕಟಭೂಧರೇಂದ್ರರಮಣಃ ಕುರ್ಯಾದ್ಧರಿರ್ಮಂಗಲಮ್ ॥೨॥

ನಾನಾರತ್ನಕಿರೀಟಕುಂಡಲಮುಖೈರ್ಭೂಷಾಗಣೈರ್ಭೂಷಿತಃ
ಶ್ರೀಮತ್ಕೌಸ್ತುಭರತ್ನಭವ್ಯಹೃದಯಃ ಶ್ರೀವತ್ಸಲಾಂಛನಃ ।
ವಿದ್ಯುದ್ವರ್ಣಸುವರ್ಣವಸ್ತ್ರರುಚಿರೋ ಯಃ ಶಂಖಚಕ್ರಾದಿಭಿಃ
ಶ್ರೀಮದ್ವೇಂಕಟಭೂಧರೇಂದ್ರರಮಣಃ ಕುರ್ಯಾದ್ಧರಿರ್ಮಂಗಲಮ್ ॥೩॥

ಯತ್ಫಾಲೇ ಮೃಗನಾಭಿಚಾರುತಿಲಕೋ ನೇತ್ರೇಽಬ್ಜಪತ್ರಾಯಿತೇ
ಕಸ್ತೂರೀಘನಸಾರಕೇಸರಮಿಲಚ್ಛ್ರೀಗಂಧಸಾರೋ ದ್ರವೈಃ ।
ಗಂಧೈರ್ಲಿಪ್ತತನುಃ ಸುಗಂಧಸುಮನೋಮಾಲಾಧರೋ ಯಃ ಪ್ರಭುಃ
ಶ್ರೀಮದ್ವೇಂಕಟಭೂಧರೇಂದ್ರರಮಣಃ ಕುರ್ಯಾದ್ಧರಿರ್ಮಂಗಲಮ್ ॥೪॥

ಏತದ್ದಿವ್ಯಪದಂ ಮಮಾಸ್ತಿ ಭುವಿ ತತ್ಸಂಪಶ್ಯತೇತ್ಯಾದರಾ-
ದ್ಭಕ್ತೇಭ್ಯಃ ಸ್ವಕರೇಣ ದರ್ಶಯತಿ ಯದ್ದೃಷ್ಟ್ಯಾಽತಿಸೌಖ್ಯಂ ಗತಃ ।

ಏತದ್ಭಕ್ತಿಮತೋ ಮಹಾನಪಿ ಭವಾಂಭೋಧಿರ್ನದೀತಿ ಸ್ಫುಟನ್
ಶ್ರೀಮದ್ವೇಂಕಟಭೂಧರೇಂದ್ರರಮಣಃ ಕುರ್ಯಾದ್ಧರಿರ್ಮಂಗಲಮ್ ॥೫॥

ಯಃ ಸ್ವಾಮೀ ಸರಸಸ್ತಟೇ ವಿಹರತೋ ಶ್ರೀಸ್ವಾಮಿನಾಮ್ನಃ ಸದಾ
ಸೌವರ್ಣಾಲಯಮಂದಿರೋ ವಿಧಿಮುಖೈರ್ಬರ್ಹಿರ್ಮುಖೈಃ ಸೇವಿತಃ ।
ಯಃ ಶತ್ರೂನ್ ಹನಯನ್ ನಿಜಾನವತಿ ಚ ಶ್ರೀಭೂವರಾಹಾತ್ಮಕಃ
ಶ್ರೀಮದ್ವೇಂಕಟಭೂಧರೇಂದ್ರರಮಣಃ ಕುರ್ಯಾದ್ಧರಿರ್ಮಂಗಲಮ್ ॥೬॥

ಯೋ ಬ್ರಹ್ಮಾದಿಸುರಾನ್ ಮುನೀಂಶ್ಚ ಮನುಜಾನ್ ಬ್ರಹ್ಮೋತ್ಸವಾಯಾಗತಾನ್
ದೃಷ್ಟ್ವಾ ಹೃಷ್ಟಮನಾ ಬಭೂವ ಬಹುಶಸ್ತೈರರ್ಚಿತಃ ಸಂಸ್ತುತಃ ।
ತೇಭ್ಯೋ ಯಃ ಪ್ರದದಾದ್ವರಾನ್ ಬಹುವಿಧಾನ್ ಲಕ್ಷ್ಮೀನಿವಾಸೋ ವಿಭುಃ
ಶ್ರೀಮದ್ವೇಂಕಟಭೂಧರೇಂದ್ರರಮಣಃ ಕುರ್ಯಾದ್ಧರಿರ್ಮಂಗಲಮ್ ॥೭॥

ಯೋ ದೇವೋ ಭುವಿ ವರ್ತತೇ ಕಲಿಯುಗೇ ವೈಕುಂಠಲೋಕಸ್ಥಿತೋ
ಭಕ್ತಾನಾಂ ಪರಿಪಾಲನಾಯ ಸತತಂ ಕಾರುಣ್ಯವಾರಾಂನಿಧಿಃ ।
ಶ್ರೀಶೇಷಾಖ್ಯಮಹೀಧ್ರಮಸ್ತಕಮಣಿರ್ಭಕ್ತೈಕಚಿಂತಾಮಣಿಃ
ಶ್ರೀಮದ್ವೇಂಕಟಭೂಧರೇಂದ್ರರಮಣಃ ಕುರ್ಯಾದ್ಧರಿರ್ಮಂಗಲಮ್ ॥೮॥

ಶೇಷಾದ್ರಿಪ್ರಭುಮಂಗಲಾಷ್ಟಕಮಿದಂ ತುಷ್ಟ್ಯೈನ ಯಸ್ಯೇಶಿತುಃ
ಪ್ರೀತ್ಯರ್ಥಂ ರಚಿತಂ ರಮೇಶಚರಣದ್ವಂದ್ವೈಕನಿಷ್ಠಾವತಾ ।
ವೈವಾಹ್ಯಾದಿಶುಭಕ್ರಿಯಾಸು ಪಠಿತಂ ಯೈಃ ಸಾಧು ತೇಷಾಮಪಿ
ಶ್ರೀಮದ್ವೇಂಕಟಭೂಧರೇಂದ್ರರಮಣಃ ಕುರ್ಯಾದ್ಧರಿರ್ಮಂಗಲಮ್ ॥೯॥

॥ ಇತಿ ಶ್ರೀವಾದಿರಾಜತೀರ್ಥಶ್ರೀಚರಣಕೃತಂ ಶ್ರೀವೆಂಕಟೇಶಮಂಗಲಾಷ್ಟಕಮ್ - ೧ ॥

*****

## ೫.ಶ್ರೀವೇಂಕಟೇಶಮಂಗಲಾಷ್ಟಕಮ್ - ೨

ಜಂಬೂದ್ವೀಪಗಶೇಷಶೈಲಭುವನಃ ಶ್ರೀಜಾನಿರಾದ್ಯಾತ್ಮಜಃ
ತಾರ್ಕ್ಷ್ಯಾಹೀಶಮುಖಾಸನಸ್ತ್ರಿಭುವನಸ್ಥಾಶೇಷಲೋಕಪ್ರಿಯಃ ।
ಶ್ರೀಮತ್ಸ್ವಾಮಿಸರಃಸುವರ್ಣಮುಖರೀಸಂವೇಷ್ಟಿತಃ ಸರ್ವದಾ
ಶ್ರೀಮದ್ವೇಂಕಟಭೂಪತಿರ್ಮಮ ಸುಖಂ ದದ್ಯಾತ್ ಸದಾ ಮಂಗಲಮ್ ॥ ೧ ॥

ಸಂತಪ್ತಾಮಲಜಾತರೂಪರಚಿತಾಗಾರೇ ನಿವಿಷ್ಟಃ ಸದಾ
ಸ್ವರ್ಗದ್ವಾರಕವಾಟತೋರಣಯುತಃ ಪ್ರಾಕಾರಸಪ್ತಾನ್ವಿತಃ ।
ಭಾಸ್ವತ್ಕಾಂಚನತುಂಗಚಾರುಗರುಡಸ್ತಂಭೇ ಪತತ್ಪ್ರಾಣಿನಾಂ
ಸ್ವಪ್ನೇ ವಕ್ತಿ ಹಿತಾಹಿತಂ ಸುಕರುಣೋ ದದ್ಯಾತ್ ಸದಾ ಮಂಗಲಮ್ ॥ ೨ ॥

ಅತ್ಯುಚ್ಚಾದ್ರಿವಿಚಿತ್ರಗೋಪುರಗಣೈಃ ಪೂರ್ಣೈಃ ಸುವರ್ಣಾಚಲೈ-
ರ್ವಿಸ್ತೀರ್ಣಾಮಲಮಂಟಪಾಯುತಯುತೈರ್ನಾನಾವನೈರ್ನಿರ್ಭಯೈಃ।
ಪಂಚಾಸ್ಯೇಭವರಾಹಖಡ್ಗಮೃಗಶಾರ್ದೂಲಾದಿಭಿಃ ಶ್ರೀಪತಿಃ
ನಿತ್ಯಂ ವೇದಪರಾಯಣಃ ಸುಕೃತಿನಾಂ ದದ್ಯಾತ್ ಸದಾ ಮಂಗಲಮ್ ॥೩॥

ಭೇರೀಮಂಗಲತುರ್ಯಗೋಮುಖಮೃದಂಗಾದಿಸ್ವನೈಃ ಶೋಭಿತೇ
ತಂತ್ರೀವೇಣುಸುಘೋಷಶೃಂಗಕಲಹೈಃ ಶಬ್ದೈಶ್ಚ ದಿವ್ಯೈರ್ನಿಜೈಃ।
ಗಂಧರ್ವಾಪ್ಸರಕಿನ್ನರೋರಗನೃಭಿರ್ನೃತ್ಯದ್ಭಿರಾಸೇವ್ಯತೇ
ನಾನಾವಾಹನಗಃ ಸಮಸ್ತಫಲದೋ ದದ್ಯಾತ್ ಸದಾ ಮಂಗಲಮ್ ॥೪॥

ಯಃ ಶ್ರೀಭಾರ್ಗವವಾಸರೇ ನಿಯಮತಃ ಕಸ್ತೂರಿಕಾರೇಣುಭಿಃ
ಶ್ರೀಮತ್ಕುಂಕುಮಕೇಸರಾಮಲಯುತಃ ಕರ್ಪೂರಮುಖ್ಯೈರ್ಜಲೈಃ।
ಸ್ನಾತಃ ಪುಣ್ಯಸುಕಂಚುಕೇನ ವಿಲಸತ್ಕಾಂಚೀಕಿರೀಟಾದಿಭಿಃ
ನಾನಾಭೂಷಣಪೂಗಶೋಭಿತತನುರ್ದದ್ಯಾತ್ ಸದಾ ಮಂಗಲಮ್ ॥೫॥

ತೀರ್ಥಂ ಪಾಂಡವನಾಮಕಂ ಶುಭಕರಂ ತ್ವಾಕಾಶಗಂಗಾ ಪರಾ
ಇತ್ಯಾದೀನಿ ಸುಪುಣ್ಯರಾಶಿಜನಕಾನ್ಯಾಯೋಜನೈಃ ಸರ್ವದಾ।
ತೀರ್ಥಂ ತುಂಬುರುನಾಮಕಂ ತ್ವಘಹರಂ ಧಾರಾ ಕುಮಾರಾಭಿಧಾ
ನಿತ್ಯಾನಂದನಿಧಿರ್ಮಹೀಧರವರೋ ದದ್ಯಾತ್ ಸದಾ ಮಂಗಲಮ್ ॥೬॥

ಆರ್ತಾನಾಮತಿದುಸ್ತರಾಮಯಗಣೈರ್ಜನ್ಮಾಂತರಾಘೈರಪಿ
ಸಂಕಲ್ಪಾತ್ ಪರಿಶೋಧ್ಯ ರಕ್ಷತಿ ನಿಜಸ್ಥಾನಂ ಸದಾ ಗಚ್ಛತಾಮ್।
ಮಾರ್ಗೇ ನಿರ್ಭಯತಃ ಸ್ವನಾಮ ಗೃಣತೋ ಗೀತಾದಿಭಿಃ ಸರ್ವದಾ
ನಿತ್ಯಂ ಶಾಸ್ತ್ರಪರಾಯಣೈಃ ಸುಕೃತಿನಾಂ ದದ್ಯಾತ್ ಸದಾ ಮಂಗಲಮ್ ॥೭॥

ನಿತ್ಯಂ ಬ್ರಾಹ್ಮಣಪುಣ್ಯವರ್ಯವನಿತಾಪೂಜಾಸಮಾರಾಧನೈ-
ರನ್ನೈಃ ಪಾಯಸಭಕ್ಷ್ಯಭೋಜ್ಯಸುಘೃತಕ್ಷೀರಾದಿಭಿಃ ಸರ್ವದಾ।
ನಿತ್ಯಂ ದಾನತಪಃಪುರಾಣಪಠನೈರಾರಾಧಿತೇ ವೇಂಕಟ-
ಕ್ಷೇತ್ರೇ ನಂದಸುಪೂರ್ಣಚಿತ್ರಮಹಿಮಾ ದದ್ಯಾತ್ ಸದಾ ಮಂಗಲಮ್ ॥೮॥

ಇತ್ಯೇತದ್ವರಮಂಗಲಾಷ್ಟಕಮಿದಂ ಶ್ರೀವಾದಿರಾಜೇಶ್ವರೈ-
ರಾಖ್ಯಾತಂ ಜಗತಾಮಭೀಷ್ಟಫಲದಂ ಸರ್ವಾಶುಭಧ್ವಂಸನಮ್।
ಮಾಂಗಲ್ಯಂ ಸಕಲಾರ್ಥದಂ ಶುಭಕರಂ ವೈವಾಹಿಕಾದಿಸ್ಥಲೇ
ತೇಷಾಂ ಮಂಗಲಶಂಸತಾಂ ಸುಮನಸಾಂ ದದ್ಯಾತ್ ಸದಾ ಮಂಗಲಮ್ ॥೯॥

॥ ಇತಿ ಶ್ರೀವಾದಿರಾಜತೀರ್ಥಶ್ರೀಚರಣಕೃತಂ ಶ್ರೀವೇಂಕಟೇಶಮಂಗಲಾಷ್ಟಕಮ್ - ೨ ॥

★★★★★

# ೬. ಶ್ರೀಗೋಪಾಲಮಂಗಲಾಷ್ಟಕಮ್

ಶ್ರೀಪದ್ಮಾಸನಶೇಷಶಂಭುಪತಗಾಧೀಶಾಮರೇಶಾದಿಭಿ-
ರ್ದೇವೈರ್ಭೂಮಿಭರಾಪಹಾರಕೃತಯೇ ಸಂಪ್ರಾರ್ಥಿತೋ ಭೂತಲೇ ।
ಜಾತೋ ಯೋ ವಿಮಲೋಽಮಲೇ ಯದುಕುಲೇ ಸ್ವಾರಾಧಕಾನಾಂ ಮುದೇ
ಸ ಶ್ರೀಗೋಪವಪುಸ್ತನೋತು ಕಮಲಾಕಾಂತೋಽಭಿತೋ ಮಂಗಲಮ್ ॥೧॥

ಯೇನಾಕಾರಿ ನಿಶಾಚರೀತನುಹರೀ ನಾರೀವ ಯಾ ಸುಂದರೀ
ಸ್ತನ್ಯಂ ಸ್ವಂ ವಿಷದೂಷಿತಂ ಚ ಕಿತವಾಽದಾತ್ ಸಾ ಹತಾ ಪೂತನಾ ।
ಡಿಂಭೇನೋಪಹತಂ ಸಹಾಸುರಮನಃ ಪದ್ಭ್ಯಾಂ ಮೃದುಭ್ಯಾಂ ವಿಭುಃ
ಸ ಶ್ರೀಗೋಪವಪುಸ್ತನೋತು ಕಮಲಾಕಾಂತೋಽಭಿತೋ ಮಂಗಲಮ್ ॥೨॥

ಚಕ್ರೇ ಚಕ್ರಸಮೀರಣಸ್ಥದಿತಿಜಂ ವಿಕ್ರಮ್ಯ ವಕ್ರಂ ಹತಂ
ಚಕ್ರೀ ಚಕ್ರಮುಖಾಮರೇಡ್ಯಚರಣೋ ಯಃ ಕಂಸಭೃತ್ಯಂ ಶಿಶುಃ ।
ಮಾತ್ರೇಽದರ್ಶಯದಾನನೇ ಸುವಿಶದೇ ಸಪ್ತದ್ವಿಲೋಕಾನ್ ಸ್ವಕೇ
ಸ ಶ್ರೀಗೋಪವಪುಸ್ತನೋತು ಕಮಲಾಕಾಂತೋಽಭಿತೋ ಮಂಗಲಮ್ ॥೩॥

ಬಾಲ್ಯಂ ಯೋಽನುಸರನ್ನಲಂ ವಿಮಲಧೀರ್ವಿಷ್ಣುರ್ವಿಮುಷ್ಣನ್ ರಹೋ
ಗೇಹೇಭ್ಯೋ ನವನೀತಮುನ್ನತಸುಖಃ ಶ್ರೀಬಲ್ಲವೀನಾಂ ಪ್ರಭುಃ ।
ಏವಂ ಚಾರು ಚಕಾರ ಮಾರರುಚಿರೋ ಲೀಲಾಂ ನಿಜಾನಾಂ ಮುದೇ
ಸ ಶ್ರೀಗೋಪವಪುಸ್ತನೋತು ಕಮಲಾಕಾಂತೋಽಭಿತೋ ಮಂಗಲಮ್ ॥೪॥

ಯೋಽಬದ್ಧತ್ವಮನಂತತಾಂ ಪ್ರಕಟಯನ್ ನೈಸರ್ಗಿಕೀಂ ಸದ್ಗುಣೋ
ನಾನಾದಾಮಸಮೂಹಬಂಧವಿಷಯೋ ನಾಭೂನ್ನಿಜಾನಾಂ ವಿಭುಃ ।
ಯಂ ಚೈಕೇನ ಬಬಂಧ ಸಾಧುಕರುಣಂ ಮಾತಾ ನು ದಾಮ್ನಾ ಸುತಂ
ಸ ಶ್ರೀಗೋಪವಪುಸ್ತನೋತು ಕಮಲಾಕಾಂತೋಽಭಿತೋ ಮಂಗಲಮ್ ॥೫॥

ಆಕರ್ಷನ್ ನಿಜಸಂಪದಾಸ್ಪದಪದಾ ತೂಲೂಖಲಂ ಲೀಲಯಾ
ಪ್ರೋನ್ಮೂಲ್ಯಾರ್ಜುನಭೂರುಹೌ ಧನಪತೇರುನ್ಮುಚ್ಯ ಶಾಪಾತ್ ಸುತೌ ।
ತಾಭ್ಯಾಂ ಗೋಪವರೈಶ್ಚ ವಿಸ್ಮಿತತಮೈಃ ಸಂವೀಕ್ಷಿತೋಽಭಿಷ್ಟುತಃ
ಸ ಶ್ರೀಗೋಪವಪುಸ್ತನೋತು ಕಮಲಾಕಾಂತೋಽಭಿತೋ ಮಂಗಲಮ್ ॥೬॥

ಯೋ ವತ್ಸಪ್ರಭೃತೀನ್ ಖಲಾನತಿಬಲಾನ್ ಕಂಸಾನುಗಾನ್ ಲೀಲಯಾ
ಸನ್ನಾನಾವಿದಧೇ ವಿಷಾದಪತಿತಾನುನ್ಮೂಲಿತಾಂಶ್ಚಾಕರೋತ್ ।
ಗೋಗೋಪಾಲಗಣಾನ್ ವಿಷೋದಪತಿತಾನಾಜೀವಯತ್ ಸ್ವಾನ್ ದೃಶಾ
ಸ ಶ್ರೀಗೋಪವಪುಸ್ತನೋತು ಕಮಲಾಕಾಂತೋಽಭಿತೋ ಮಂಗಲಮ್ ॥೭॥

ಕಾಲಿಂದೀಹ್ರದಗೋರುಪನ್ನಗಶಿರೋಲಾಸ್ಯಂ ಶುಭಾಸ್ಯೋಽಕರೋದ್
ಯೋಽಕ್ರೂರಾಭಿಮತೋ ಜಗಾಮ ಮಥುರಾಂ ತತ್ರಾಪಿ ಕಂಸಾನುಗಾನ್ ।
ಜಘ್ನೇ ಕಂಸಮಪೀಶ್ವರೋ ವಿಧಿಮುಖೈರ್ಮಾಲ್ಯಾಭಿವರ್ಷೈಃ ಸ್ತುತಃ
ಸ ಶ್ರೀಗೋಪವಪುಸ್ತನೋತು ಕಮಲಾಕಾಂತೋಽಭಿತೋ ಮಂಗಲಮ್ ॥೮॥

ಗೋಪಾಲಾಷ್ಟಕಮೇತದಿಷ್ಟಫಲದಂ ಶ್ರೀವಿಷ್ಣುತುಷ್ಟಿಪ್ರದಂ
ನಾನೋತ್ಸಾಹದಿನೇಷು ಸಾಧು ಪಠತಾಂ ದುಷ್ಟಗ್ರಹೋನ್ಮೂಲನಮ್ ।
ಧೀಶುದ್ಧ್ಯೈ ನನು ಮುದ್ಗಲಾಖ್ಯವಿದುಷಾ ಸನ್ನಿರ್ಮಿತಂ ಮದ್ಗುರು-
ಸ್ವಾಂತಾಂಭೋಜನಿವಾಸಿನೋ ಯದುಪತೇರ್ಭೂಯಾದಲಂ ಪ್ರೀತಯೇ ॥೯॥

॥ ಇತಿ ಶ್ರೀಮುದ್ಗಲಾಚಾರ್ಯಕೃತಂ ಶ್ರೀಗೋಪಾಲಮಂಗಲಾಷ್ಟಕಮ್ ॥

*****

## ೭.ಶ್ರೀಯಂತ್ರೋದ್ಧಾರಕಮಂಗಲಾಷ್ಟಕಮ್

ಯಂತ್ರೋದ್ಧಾರಕನಾಮಕೋ ರಘುಪತೇರಾಜ್ಞಾಂ ಗೃಹೀತ್ವಾರ್ಣವಂ
ತೀರ್ತ್ವಾಽಶೋಕವನೇ ಸ್ಥಿತಾಂ ಸ್ವಜನನೀಂ ಸೀತಾಂ ನಿಶಾಮ್ಯಾಶುಗಃ ।
ಕೃತ್ವಾ ಸಂವಿದಮಂಗುಲೀಯಕಮಿದಂ ದತ್ವಾ ಶಿರೋಭೂಷಣಂ
ಸಂಗೃಹ್ಯಾರ್ಣವಮುತ್ಪಪಾತ ಹನುಮಾನ್ ಕುರ್ಯಾತ್ ಸದಾ ಮಂಗಲಮ್ ॥೧॥

ಪ್ರಾಪ್ತಸ್ತಂ ಸದುದಾರಕೀರ್ತಿರನಿಲಃ ಶ್ರೀರಾಮಪಾದಾಂಬುಜಂ
ನತ್ವಾ ಕೀಶಪತಿರ್ಜಗಾದ ಪುರತಃ ಸಂಸ್ಥಾಪ್ಯ ಚೂಡಾಮಣಿಮ್ ।
ವಿಜ್ಞಾಪ್ಯಾರ್ಣವಲಂಘನಾದಿಶುಭಕೃನ್ನಾನಾವಿಧಂ ಭೂತಿದಂ
ಯಂತ್ರೋದ್ಧಾರಕನಾಮಮಾರುತಿರಯಂ ಕುರ್ಯಾತ್ ಸದಾ ಮಂಗಲಮ್ ॥೨॥

ಧರ್ಮಾಧರ್ಮವಿಚಕ್ಷಣಃ ಸುರತರುರ್ಭಕ್ತೇಷ್ಟಸಂದೋಹನೇ
ದುಷ್ಟಾರಾತಿಕರೀಂದ್ರಕುಂಭದಲನೇ ಪಂಚಾನನಃ ಪಾಂಡುಜಃ ।
ದ್ರೌಪದ್ಯೈ ಪ್ರದದೌ ಕುಬೇರವನಜಂ ಸೌಗಂಧಿಪುಷ್ಪಂ ಮುದಾ
ಯಂತ್ರೋದ್ಧಾರಕನಾಮಮಾರುತಿರಯಂ ಕುರ್ಯಾತ್ ಸದಾ ಮಂಗಲಮ್ ॥೩॥

ಯಃ ಕಿರ್ಮೀರಹಿಡಿಂಬಕೀಚಕಬಕಾನ್ ಪ್ರಖ್ಯಾತರಕ್ಷೋಜನಾನ್
ಸಂಹೃತ್ಯ ಪ್ರಯಯೌ ಸುಯೋಧನಮಹನ್ ದುಃಶಾಸನಾದೀನ್ ರಣೇ ।
ಭಿತ್ವಾ ತದ್ಧೃದಯಂ ಸ ಘೋರಗದಯಾ ಸನ್ಮಂಗಲಂ ದತ್ತವಾನ್
ಯಂತ್ರೋದ್ಧಾರಕನಾಮಮಾರುತಿರಯಂ ಕುರ್ಯಾತ್ ಸದಾ ಮಂಗಲಮ್ ॥೪॥

ಯೋ ಭೂಮೌ ಮಹದಾಜ್ಞಯಾ ನಿಜಪತೇರ್ಜಾತೋ ಜಗಜ್ಜೀವನೇ
ವೇದವ್ಯಾಸಪದಾಂಬುಜೈಕನಿರತಃ ಶ್ರೀಮಧ್ಯಗೇಹಾಲಯೇ ।

ಸಂಪ್ರಾಪ್ತೇ ಸಮಯೇ ತ್ವಭೂತ್ ಸ ಗುರುಃ ಕರ್ಮಂದಿಚೂಡಾಮಣಿ-
ರ್ಯಂತ್ರೋದ್ಧಾರಕನಾಮಮಾರುತಿರಯಂ ಕುರ್ಯಾತ್ ಸದಾ ಮಂಗಲಮ್ ॥೫॥

ಮಿಥ್ಯಾವಾದಕುಭಾಷ್ಯಖಂಡನಪಟುರ್ಮಧ್ವಾಭಿಧೋ ಮಾರುತಿಃ
ಸದ್ಭಾಷ್ಯಾಮೃತಮಾದರಾನ್ಮುನಿಗಣೈಃ ಪೇಪೀಯಮಾನಂ ಮುದಾ ।
ಸೃಷ್ಟ್ವಾ ಯಃ ಸತತಂ ಸುರೋತ್ತಮಗಣಾನ್ ಸಂಪಾತ್ಯಯಂ ಸರ್ವದಾ
ಯಂತ್ರೋದ್ಧಾರಕನಾಮಮಾರುತಿರಯಂ ಕುರ್ಯಾತ್ ಸದಾ ಮಂಗಲಮ್ ॥೬॥

ಪಾಕಾರ್ಕಾರ್ಕಸಮಾನಸಾಂದ್ರಪರಮಾಸಾಕೀರ್ಕಕಾಕಾರಿಭಿ-
ರ್ವಿದ್ಯಾಸಾರ್ಕಜವಾನರೇರಿತರುಣಾ ಪೀತಾರ್ಕಚಕ್ರಃ ಪುರಾ ।
ಕಂಕಾರ್ಕಾನುಚರಾರ್ಕತಪ್ತಜರಯಾ ತಪ್ತಾಂಕಜಾತಾನ್ವಿತೋ
ಯಂತ್ರೋದ್ಧಾರಕನಾಮಮಾರುತಿರಯಂ ಕುರ್ಯಾತ್ ಸದಾ ಮಂಗಲಮ್ ॥೭॥

ಶ್ರೀಮದ್ವ್ಯಾಸಮುನೀಂದ್ರವಂದ್ಯಚರಣಃ ಶ್ರೇಷ್ಠಾರ್ಥಸಂಪೂರಣಃ
ಸರ್ವಾಘೌಘನಿವಾರಣಃ ಪ್ರವಿಲಸನ್ಮುದ್ರಾದಿಸಂಭೂಷಣಃ ।
ಸುಗ್ರೀವಾದಿಕಪೀಂದ್ರಮುಖ್ಯಶರಣಃ ಕಲ್ಯಾಣಪೂರ್ಣಃ ಸದಾ
ಯಂತ್ರೋದ್ಧಾರಕನಾಮಮಾರುತಿರಯಂ ಕುರ್ಯಾತ್ ಸದಾ ಮಂಗಲಮ್ ॥೮॥

ಯಂತ್ರೋದ್ಧಾರಕಮಂಗಲಾಷ್ಟಕಮಿದಂ ಸರ್ವೇಷ್ಟಸಂದಾಯಕಂ
ದುಸ್ತಾಪತ್ರಯವಾರಕಂ ದ್ವಿಜಗಣೈಃ ಸಂಗೃಹ್ಯಮಾಣಂ ಮುದಾ ।
ಭಕ್ತಾಗ್ರೇಸರಭೀಮಸೇನರಚಿತಂ ಭಕ್ತ್ಯಾ ಸದಾ ಯಃ ಪಠೇ-
ಚ್ಛ್ರೀಮದ್ವಾಯುಸುತಪ್ರಸಾದಮತುಲಂ ಪ್ರಾಪ್ನೋತ್ಯಸೌ ಮಾನವಃ ॥೯॥

॥ ಇತಿ ಶ್ರೀಭೀಮಸೇನವಿರಚಿತಂ ಶ್ರೀಯಂತ್ರೋದ್ಧಾರಕಮಂಗಲಾಷ್ಟಕಮ್ ॥

*****

## ೮. ತಾರತಮ್ಯಮಂಗಲಾಷ್ಟಕಮ್ - ೧

ಶ್ರೀಲಕ್ಷ್ಮೀಪತಿಭಾರತೀಪತಿಪದಸ್ವಾರಾಧನಾಸಾದಿತ-
ಸ್ವಾನಂದಾರ್ಥಿತಮಾಸ್ಪೃಣೌಷಧಿಲತಾ ಗುಲ್ಮಾ ದ್ರುಮಾಃ ಪಕ್ಷಿಣಃ ।
ಪಾಥೋಽಂತಃಪರಿಚಾರಿಣೋ ಮೃಗಪಶುಶ್ವಾಶ್ವಾ ಗಜಾಶ್ಚಾಂತ್ಯಜಾಃ
ಶೂದ್ರಾ ವೈಶ್ಯಜನಾ ಯುಗೋತ್ತರಗುಣಾಃ ಕುರ್ವಂತು ಮೇ ಮಂಗಲಮ್ ॥೧॥

ಕ್ಷತ್ರೋ ಮರ್ತ್ಯವರಾತ್ಮದಿವ್ಯವನಿತಾಸ್ತಾಸಾಂ ಸುನಾಥಾಶ್ಚ ತೇ
ಚಾತುರ್ವಿಧ್ಯಯುಜೋ ಗೃಹೇ ಗುಣಗಣಾಪೂರ್ಣೇ ವನೇಚಾರಿಣಃ ।
ಪಾರಿವ್ರಾಜ್ಯಯುಜೋಽಖಿಲಕ್ಷಿತಿಪತಿಸ್ವರ್ಣಾಂಗನಾಸ್ತದ್ರತಾಃ
ಪುಂಗಂಧರ್ವಕಲತ್ರತದ್ರತಿಯುತಾಃ ಕುರ್ವಂತು ಮೇ ಮಂಗಲಮ್ ॥೨॥

ಗಂಧರ್ವಾ ದಿತಿಜಾತಗೇಯವನಿತಾಸ್ತದ್ಭೋಗಭಾಗ್ಯೋನ್ನತಾಃ
ಸ್ವೈರಸ್ವಚ್ಛಕಲತ್ರತದ್ರತಿಯುತಾಃ ಋಷ್ಯಂಗನಾಃ ಕೂಪಕಾಃ ।

ವಾಪ್ಯೋಽಥೋ ಖುಷಯಸ್ತಟಾಕಸರಿತೋ ದೇವಪ್ರಖಾತೋಲ್ಲಸ-
ನ್ಮಾನ್ಯಾಜಾನಜದೇವತಾರಮಣದಾಃ ಕುರ್ವಂತು ಮೇ ಮಂಗಲಮ್ ॥೩॥

ಸ್ವಾಮ್ಯಾದ್ಯನ್ಯಸುಪುಷ್ಕರಾಕರಗಣಾಃ ಗೋಪ್ಯಃ ಪಿನಾಕ್ಯಾದಿಜಾಃ
ಪೂಜ್ಯಾಜಾನಜದೇವತಾಃ ಸುಕುಮುದಾಧಾರಾ ನೃಸಿಂಹೋದ್ಭವಾಃ।
ಸಿಂಧುರ್ಮಾನ್ಯನದೀವರಾಸುಸರಯೂ ಮಾನ್ಯಾ ಕವೇರಾತ್ಮಜಾ
ಕಾಲಿಂದೀ ತ್ರಿಸುಪುಷ್ಕರಾಕರಕೃಣಾಃ ಕುರ್ವಂತು ಮೇ ಮಂಗಲಮ್ ॥೪॥

ನಂದಾನೀ ವರದೇವಕೀ ಹರಿಪಿತಾ ಕರ್ಮಾತ್ಮಕಃ ಪುಷ್ಕರಃ
ಹಾರಾದಿಃ ಶನಿಸೌಮ್ಯದಿವ್ಯವನಿತಾಃ ನಾಸತ್ಯಭಾರ್ಯೋಷಸಃ।
ಗೋದಾ ಚಂದ್ರಸುತೋಽಗ್ನಿದಿವ್ಯವನಿತಾ ಕೂರ್ಮಾದಯಃ ಶ್ರೀಹರೇಃ
ಪಾದೋತ್ಥಾ ಕೃತಿಜಾಃ ಸುರಾಃ ಪ್ರತಿದಿನಂ ಕುರ್ವಂತು ಮೇ ಮಂಗಲಮ್ ॥೫॥

ಉಕ್ತಾನ್ಯೇ ನವಕೋಟಿದೇವನಿಚಯಾಃ ಕರ್ಮೋತ್ಥದೇವಾ ಮರು-
ದ್ಯುಕ್ತಾ ದಶಕಾಷ್ಠದೇವಶತಗಾಃ ಸರ್ವತ್ರಸೇನಾದಿಕಾಃ।
ಮಿತ್ರಾದ್ಯಾಶ್ಚತುರೋ ನವಾಖಿಲಸುಹೃನ್ಮುಖ್ಯಾಃ ಪ್ರಮೋದಾಕರ-
ಶ್ಚೈಕರ್ಷಿಸ್ತ್ರಿಭೃಗುಪ್ರಸೂತ್ಯನಲಕಾಃ ಕುರ್ವಂತು ಮೇ ಮಂಗಲಮ್ ॥೬॥

ಶ್ರೀಮನ್ನಾರದ ಅಪ್ಪತಿರ್ಹಿ ವರುಣಃ ಸ್ವಾಯಂಭುವಾನೀ ರವಿಃ
ಸೋಮೋ ಧರ್ಮ ಇಮೇ ಚತುಃಸುರವರಾಃ ಪ್ರಾದ್ಯೋವಹಂತಾಭಿಧಃ।
ಶಚ್ಯಾದ್ಯಾ ಷಡಹಂಕೃದಿಂದ್ರಮದನೌ ದ್ವೌ ವಾರುಣೀ ಪಾರ್ವತೀ
ಸೌಪರ್ಣೀ ತ್ರಿತಯಂ ಮಮ ಪ್ರತಿದಿನಂ ಕುರ್ವಂತು ಮೇ ಮಂಗಲಮ್ ॥೭॥

ಶ್ರೀಕೃಷ್ಣಾಂಗಸಮುತ್ಸುಕಂ ಸುಮಹಿಷೀಷಟ್ಕಂ ಮೃಡಾದಿತ್ರಿಕಂ
ವಾಣೀ ಶ್ರೀಭರತಸ್ಯ ಭವ್ಯಮಹಿಷೀ ಬ್ರಹ್ಮಾನಿಲೌ ಶ್ರೀರ್ಹರಿಃ।
ಏವಂ ಸ್ತಂಬಪುರಸ್ಸರಾತ್ ಹರಿಪರಾತ್ ಸತ್ತಾರತಮ್ಯಾತ್ ಕ್ರಮಾತ್
ಪ್ರೀತಃ ಶ್ರೀಭರತಾರ್ಚಿತಃ ಪ್ರತಿದಿನಂ ಕುರ್ವಂತು ಮೇ ಮಂಗಲಮ್ ॥೮॥

॥ ಇತಿ ಶ್ರೀಮತ್ಕೂಪತಟಾಕೋಪಪದರಾಜಾಚಾರ್ಯಕೃತ್ಯನುಸಾರೇಣ ಸಾತ್ತ್ವಿಕಮದ್ರಾಮಾ-
ಚಾರ್ಯವರ್ಯಕೃತಂ ತಾರತಮ್ಯಮಂಗಲಾಷ್ಟಕಮ್ ॥

*****

## ೯. ತಾರತಮ್ಯಮಂಗಲಾಷ್ಟಕಮ್ - ೨

ಶ್ರೀಮಾನ್ ವಿಷ್ಣುರನಂತಸದ್ಗುಣಗಣೈಃ ಶ್ರೇಷ್ಠಃ ಸ್ವತಂತ್ರಃ ಸದಾ
ಶ್ರೀದೇವೀ ಹ್ಯಧಮಾ ತತೋಽಮಿತಗುಣೈರ್ಬ್ರಹ್ಮಾ ಮರುಚ್ಚೇತ್ಯುಭೌ।
ತಸ್ಯಾಃ ಕೋಟಿಗುಣಾಧಮೌ ಶತಗುಣೈರ್ಭಾರ್ಯೇ ತಯೋಶ್ಚಾಧಮೇ
ಶ್ರೀಶೇಷಾಸ್ತ ಇಮೇ ಸುರಾಃ ಪ್ರತಿದಿನಂ ಕುರ್ವಂತು ಮೇ ಮಂಗಲಮ್ ॥೧॥

ತಾಭ್ಯಾಂ ವೀಶಫಣೀಶಭೂತಗಣಪಾ ಹೀನಾಃ ಶತಾಂಶಾತ್ ತತೋ
ವಿಷ್ಣೋಃ ಷಟ್‌ಸ್ತ್ರಿಯ ಊನತಾಮುಪಗತಾಃ ಪಂಚಾಶತಸ್ತತ್ತ್ರಿಯಃ ।
ತಾಭ್ಯಸ್ತು ಶತ(?)ಗುಣಾಧಮಾಃ ಸ್ವಪತಿತೋ ಹೀನಾ ದಶಾಂಶಾಚ್ಚ ತಾಃ
ಶ್ರೀಶೇಷಾಸ್ತ ಇಮೇ ಸುರಾಃ ಪ್ರತಿದಿನಂ ಕುರ್ವಂತು ಮೇ ಮಂಗಲಮ್ ॥೨॥

ತಾಭ್ಯಃ ಶಕ್ರಮನೋಭವೌ ದಶಗುಣೈರ್ಹೀನಾವಹಂಕಾರಿಕ-
ಪ್ರಾಣಸ್ತದ್ದಶತೋಽವಮೋ ರತಿಮನೂ ದಕ್ಷಾನಿರುದ್ಧೌ ಗುರುಃ ।
ಇಂದ್ರಾಣೀ ಚ ತತೋಽಧಮಾ ದಶಗುಣೈಃ ಸರ್ವೇ ಮಿಥಸ್ತೇ ಸಮಾಃ
ಶ್ರೀಶೇಷಾಸ್ತ ಇಮೇ ಸುರಾಃ ಪ್ರತಿದಿನಂ ಕುರ್ವಂತು ಮೇ ಮಂಗಲಮ್ ॥೩॥

ಪಂಚೋನಃ ಪ್ರವಹಸ್ತತೋ ರವಿವಿಧೂ ಧರ್ಮಸ್ತಥಾ ಮಾನವೀ
ದ್ವಿನ್ಯೂನಾ ವರುಣಸ್ತತೋಽರ್ಧಸಹಿತಾತ್ ಪಾದಾದಧೋ ನಾರದಃ ।
ಸ್ವಲ್ಪೋನೋಽಥ ಭೃಗುಃ ಪ್ರಸೂತಿರನಲಃ ಪಾದಾದಧೋ ವಾರಿಪಾ-
ಚ್ಛ್ರೀಶೇಷಾಸ್ತ ಇಮೇ ಸುರಾಃ ಪ್ರತಿದಿನಂ ಕುರ್ವಂತು ಮೇ ಮಂಗಲಮ್ ॥೪॥

ತಾಭ್ಯೋ ಬ್ರಹ್ಮಸುತಾಸ್ತು ಕೌಶಿಕಮುನಿರ್ವೈವಸ್ವತಾಖ್ಯೋ ಮನುಃ
ಸ್ವಲ್ಪೋನಾಶ್ಚ ತತೋ ಗುರುಪ್ರವಹಯೋರ್ಭಾರ್ಯೇ ಚ ರಕ್ಷೋಧಿಪಃ ।
ಮಿತ್ರಃ ಕಿಂಚಿದಧೋಽಗ್ನಿತೋ ದ್ವಿಗುಣತೋ ಹೀನಾ ಮಿಥಸ್ತೇ ಸಮಾಃ
ಶ್ರೀಶೇಷಾಸ್ತ ಇಮೇ ಸುರಾಃ ಪ್ರತಿದಿನಂ ಕುರ್ವಂತು ಮೇ ಮಂಗಲಮ್ ॥೫॥

ವಿಷ್ವಕ್ಸೇನಗಣಾಧಿಪೌ ಧನಪತಿರ್ನಾಸತ್ಯದಸ್ರೌ ತಥಾ
ಸ್ವಲ್ಪೋನಾಃ ಕಥಿತಾ ವಸಿಷ್ಠವಿಬುಧಾಸ್ತೇಭ್ಯಃ ಶತಾಂತರ್ಗತಾಃ ।
ಏಭ್ಯಃ ಕಿಂಚಿದಧೋ ವಸಿಷ್ಠಮನವಶ್ಚೋತಥ್ಯಪೂರ್ವಾ ದ್ವಿಜಾಃ
ಶ್ರೀಶೇಷಾಸ್ತ ಇಮೇ ಸುರಾಃ ಪ್ರತಿದಿನಂ ಕುರ್ವಂತು ಮೇ ಮಂಗಲಮ್ ॥೬॥

ಯೇ ಚಾನ್ಯೇ ಸನಕಾದಯೋ ಗಯಮುಖಾಃ ರಾಜಾನ ಏತತ್ಸಮಾಃ
ಗಂಧರ್ವಾಶ್ಚನರೋ ಬಲಿಪ್ರಭೃತಯೋ ದೇವಾ ಜಯಂತಾದಯಃ ।
ಧೂಮಾದ್ಯಾದ್ಯಭಿಮಾನಿದೈವತಗಣಾ ಯೇಽನ್ಯೇ ಪ್ರಸಿದ್ಧಾ ಗಣಾಃ
ಶ್ರೀಶೇಷಾಸ್ತ ಇಮೇ ಸುರಾಃ ಪ್ರತಿದಿನಂ ಕುರ್ವಂತು ಮೇ ಮಂಗಲಮ್ ॥೭॥

ಏತೇಭ್ಯೋಽಬ್ಧಿರವೀಂದುಧರ್ಮದಯಿತಾಃ ಪರ್ಜನ್ಯಕರ್ಮೌ ವಿರಾ-
ಡೀಷನ್ನ್ಯೂನಗುಣಾಸ್ತಥಾ ದ್ವಿಗುಣತೋ ಮಿತ್ರಾದಿತಶ್ಚಾಧಮಾಃ ।
ಏಭ್ಯೋ ಜ್ಞಾತಪದಾಶ್ಚ ಕಿಂಚಿದಧಮಾ ಯೇ ತತ್ರ ಶಿಷ್ಟಾಃ ಸುರಾಃ
ಶ್ರೀಶೇಷಾಸ್ತ ಇಮೇ ಸುರಾಃ ಪ್ರತಿದಿನಂ ಕುರ್ವಂತು ಮೇ ಮಂಗಲಮ್ ॥೮॥

ಏತೇಭ್ಯೋ ಜಲಪಾಂಗನಾ ಸಮುದಿತಾ ನ್ಯೂನೇತಿ ಕಿಂಚಿಚ್ಚ ಸಾ
ಗಂಗಾಯಾ ದ್ವಿಗುಣಾಧಮಾ ತ ಉದಪಃ ಸೋಮಾತ್ಮಜಶ್ಚಾಧಮಃ ।

ತಸ್ಮಾತ್ಕಿಂಚಿದುಷಾಸ್ತ್ವಧೋ ದಶಗುಣೈಃ ಸ್ವಾಹಾಽತ ಊನಾ ತಥಾ
ಶ್ರೀಶೇಷ್ಟಾಸ್ತ ಇಮೇ ಸುರಾಃ ಪ್ರತಿದಿನಂ ಕುರ್ವಂತು ಮೇ ಮಂಗಲಮ್ ॥೯॥

॥ ಇತಿ ತಾರತಮ್ಯಮಂಗಲಾಷ್ಟಕಮ್ ॥

*****

# ೧೦. ಶ್ರೀತಾರತಮ್ಯಸ್ತುತಿಮಂಗಲಾಷ್ಟಕಮ್

ಶ್ರೀವಿಷ್ಣೋರವಮಾ ರಮಾಖಿಲಗುಣೈರ್ಬ್ರಹ್ಮಾನಿಲೌ ಕೋಟಿಶ-
ಸ್ತನ್ನ್ಯೂನೇ ಚ ತದಂಗನೇ ಶತಗುಣನ್ಯೂನೇ ತಯೋಶ್ಚಾಧಮಾಃ ।
ಶೇಷಾದ್ಯಾಶ್ಚ ಶತೇನ ಪಂಚಗುಣತೋ ನೀಚಾಃ ಸ್ತ್ರಿಯಃ ಷಟ್ ತತೋ
ಗೌರ್ಯಾದ್ಯಾ ದ್ವಿಗುಣಾಧಮಾಃ ಪ್ರತಿದಿನಂ ಕುರ್ವಂತು ಮೇ ಮಂಗಲಮ್ ॥೧॥

ಸೌಪರ್ಣ್ಯಾದಿದಶಾಧಮೋ ಸುರಪತಿಃ ಕಾಮಶ್ಚ ತಾಭ್ಯಾಂ ದಶ
ನ್ಯೂನಃ ಪ್ರಾಣ ಉತಾನಿರುದ್ಧಮುಖರಾಃ ಷಟ್ ಪ್ರಾಗ್ದಶ ನ್ಯೂನಕಾಃ ।
ಷಣ್ಣಾಂ ಪಂಚಗುಣಾಧಮಃ ಪ್ರವಹಿಕಸ್ತಸ್ಯಾಧಮಾ ಮಾನವೀ-
ಚಂದ್ರಾರ್ಕಾ ದ್ವಿಗುಣಾಧಮಾಃ ಪ್ರತಿದಿನಂ ಕುರ್ವಂತು ಮೇ ಮಂಗಲಮ್ ॥೨॥

ತೇಷಾಂ ಪಾದಪದಾರ್ಧತಶ್ಚ ವರುಣೋ ಹೀನಸ್ತತೋ ನಾರದೋ
ಹೀನಃ ಪಾದಗುಣಸ್ತತೋ ಭೃಗುಮುನಿರ್ದಕ್ಷಾಂಗನಾಗ್ನಿಸ್ತ್ರಿಯಃ ।
ನೀಚಾಃ ಸ್ವಲ್ಪಗುಣಾದುತೈತದವಮೌ ವೈವಸ್ವತೋ ಗಾಧಿಜಃ
ಸಪ್ತ ಬ್ರಹ್ಮಜತಾಪಸಾಃ ಪ್ರತಿದಿನಂ ಕುರ್ವಂತು ಮೇ ಮಂಗಲಮ್ ॥೩॥

ಪೂರ್ವೋಕ್ತಾನ್ನವಕಾದಪೀಷದವಮಾ ಗುರ್ವಂಗನಾ ಪ್ರಾವಹೀ
ಮಿತ್ರೋ ನಿರ್ಋತಿರಪ್ಯಥೋರ್ವರಿತಪಂಚಾಶೀತಿ ದೇವಾಶ್ಚ ಯೇ ।
ವಿಷ್ವಕ್ಸೇನಗಣೇಶವಿತ್ತಪತಯಸ್ತತ್ತುಲ್ಯದೇವಾಶ್ಚ ಯೇ
ಮಿತ್ರಾತ್ ಕಿಂಚಿದಣುತ್ವಗಾಃ ಪ್ರತಿದಿನಂ ಕುರ್ವಂತು ಮೇ ಮಂಗಲಮ್ ॥೪॥

ಮುಖ್ಯಪ್ರಾಣ ಉಮಾಪತಿಪ್ರಭೃತಯೋ ರುದ್ರಾಶ್ಚ ವಾಚಸ್ಪತಿಃ
ಧರ್ಮಶ್ಚಂದ್ರಹುತಾಶನಾವಿತಿ ಪಿತೃಷ್ವಗ್ರ್ಯಾ ಸ್ತ್ರಿಯಶ್ಚಾಶ್ವಿನೌ ।
ಆದಿತ್ಯಾ ವಸವೋ ಮರುದ್ಭೃಭುಗಣೋ ವಿಶ್ವೇ ಸುರಾ ರೋದಸೀ
ಏತಾ ವೈ ಶತದೇವತಾಃ ಪ್ರತಿದಿನಂ ಕುರ್ವಂತು ಮೇ ಮಂಗಲಮ್ ॥೫॥

ಮುಖ್ಯಪ್ರಾಣಗುರೂ ಪುರೈವ ಕಥಿತೌ ರುದ್ರೇಷು ಗೌರೀಪತಿಃ
ಪ್ರಾಣಶ್ಚ ಪ್ರವಹೋ ಮರುತ್ಸು ಪಿತೃಪಾ ಧರ್ಮೇಂದುವಹ್ನಿತ್ರಯಮ್ ।
ಷಟ್ ಸೂರ್ಯೇಷು ಚ ವಕ್ಷ್ಯಮಾಣಸಹಿತಾ ವಹ್ನಿರ್ವಸುಷ್ವೇಕಲಃ
ಪ್ರಾಗುಕ್ತಾಶ್ಚ ಚತುರ್ದಶ ಪ್ರತಿದಿನಂ ಕುರ್ವಂತು ಮೇ ಮಂಗಲಮ್ ॥೬॥

ವಹ್ನೇ ರೋದಿಜ ಉಕ್ತಶೇಷಮನವಶ್ಚೋಚಥ್ಯಮುಖ್ಯರ್ಷಯಃ
ಪೃಥ್ವಾದ್ಯಾ ಅಪಿ ಕರ್ಮಜಾ ಅಪಿ ಬಲಿರ್ಹ್ಯಷ್ಟೌ ಚ ಗಂಧರ್ವಪಾಃ ।

ಪಿತ್ರ್ಯಗ್ರ್ಯಾ ಅಪಿ ಸಪ್ತಶೇಷಶತಕಾದಲ್ಪಾಧಮಾಃ ಪಾವಕಾ-
ದ್ಗಂಗಾದ್ಯಾಶ್ಚ ಷಡಲ್ಪತಃ ಪ್ರತಿದಿನಂ ಕುರ್ವಂತು ಮೇ ಮಂಗಲಮ್ ॥೭॥

ಪರ್ಜನ್ಯಾದಣವಶ್ಚ ಕೇಚಿದಮರಾಸ್ತೇಭ್ಯೋಽಗ್ನಿಜಾಯಾಽಧಮಾ
ತಸ್ಯಾ ಅಪ್ಯವರೋ ಬುಧಸ್ತತ ಉಷಾ ನೀಚೋಷಸಃ ಸೂರ್ಯಜಃ।
ಪ್ರಹ್ಲಾದೋಽಪ್ಯಥ ಪುಷ್ಕರೋಽಪಿ ಚರಮಶ್ಚಾಜಾನಪಿತ್ರಾಹ್ವಯಾಃ
ಗಂಧರ್ವಾ ದ್ವಿವಿಧಾ ನೃಷು ವರಾಃ ಪ್ರತಿದಿನಂ ಕುರ್ವಂತು ಮೇ ಮಂಗಲಮ್ ॥೮॥

ಮರ್ತ್ಯಾಶ್ಚಾಪಿ ಸುತಾರತಮ್ಯಸಹಿತಾ ವರ್ಣಾಶ್ರಮಾಚಾರಗಾಃ
ತನ್ನೀಚಾ ಅಥ ವರ್ಣಬಾಹ್ಯಸುಜನಾಸ್ತೇಭ್ಯೋಽಧಮಾಃ ಪಂಚಮಾಃ।
ತನ್ನೀಚಾಃ ಪಶವೋಽಥ ಪಕ್ಷಿಣ ಅಥೋ ನೀಚಾಶ್ಚ ಕೀಟಾದಯಃ
ತನ್ನೀಚಾ ಗಿರಿವೃಕ್ಷಗುಲ್ಮಲತಿಕಾಃ ಕುರ್ವಂತು ಮೇ ಮಂಗಲಮ್ ॥೯॥

ಸಂಸಾರಭ್ರಮದ್ಧ್ಯತಸ್ತೃಣಗಣಾ ನೀಚಾ ಅಮೀ ಚ ಕ್ರಮಾತ್
ಸ್ವರ್ಭೂರ್ರೌರವಸಾಧನಪ್ರಚುರಕಾ ನೀಚಾಸ್ತಮೋಚೇತನಾಃ।
ಮಿಥ್ಯಾಜ್ಞಾನಜನಾಸ್ತತೋಽಪಿ ಚರಮಾ ದುಸ್ತತ್ವಮಾನಾಸ್ತತೋ
ಕಿರ್ಮೀರಾದ್ಯತ ವಿಪ್ರಚಿತ್ತಿರಧಮಸ್ತಸ್ಮಾದಲಕ್ಷ್ಮೀಃ ಕಲಿಃ ॥೧೦॥

ಇತ್ಥಂ ಶ್ರೀವಿಧಿಪೂರ್ವಕಾಖಿಲಜಗತ್ ಶ್ರೀತಾರತಮ್ಯಸ್ತುತಿಂ।
ಶ್ರೀಮದ್ವೇಂಕಟಪತ್ಯುದಾರವಿದುಷಾಂ ಶಿಷ್ಯೋಽವದದ್ಭಕ್ತಿತಃ।
ತಚ್ಛಾಲೋಽಪಿ ಚ ಕಟ್ಟಿಮುದ್ದುರಮಣೋ ಮದ್ವೇಶಸಂತುಷ್ಟಯೇ
ಯೇ ಶೃಣ್ವಂತಿ ಪಠಂತಿ ದಾಸ್ಯತಿ ಸುಖಂ ತೇಷಾಂ ಜಗತ್ಸ್ಥೋ ಹರಿಃ ॥೧೧॥

॥ ಇತಿ ಕಟ್ಟಿಮುದ್ದುರಮಣಕೃತ ಶ್ರೀತಾರತಮ್ಯಸ್ತುತಿಮಂಗಲಾಷ್ಟಕಮ್ ॥

*****

# ೧೧. ನವಗ್ರಹಮಂಗಲಾಶಂಸನಮ್

ಶ್ರೀಮಾನ್ ಕಶ್ಯಪಗೋತ್ರಜೋಽರುಣರುಚಿರ್ಯಃ ಸಿಂಹರಾಶೀಶ್ವರಃ
ಘಟತ್ರ್ಯಾಶಾಸ್ಥಸುಶೋಭನೋ ಗುರುಕುಜಾಂಜಾನಾಂ ಚ ಮಿತ್ರಂ ರವಿಃ।
ದೈತ್ಯೇಣ್ಮಂದರಿಪುಃ ಕಲಿಂಗಜನನಶ್ಚಾಗ್ನೀಶ್ವರೌ ದೇವತೇ
ಮಧ್ಯೇ ವರ್ತುಲಗೌಂದ್ರಿಕಾಸುವದನಃ ಕುರ್ಯಾತ್ಸದಾ ಮಂಗಲಮ್ ॥೧॥

ಜೀವಃ ಸಿಂಧುಪತಿರ್ವಿಧಿಃ ಸುರಪತಿರ್ದೇವೌ ಧನುರ್ಮೀನಯೋಃ
ಸ್ವಾಮೀ ತ್ವಾಂಗಿರಸಸ್ತಥೋತ್ತರಮುಖೋ ದೀರ್ಘೇ ಸ್ಥಿತಶ್ಚೋತ್ತರೇ।
ಸೂರ್ಯೇಂದುಕ್ಷಿತಿಜಪ್ರಿಯೋ ಬುಧಸಿತೌ ಶತ್ರೂ ಚ ಪೀತಪ್ರಭೋ
ಬಾಣದ್ವ್ಯದ್ವಿಭವಾಂಕಕೇ ಚ ಶುಭದಃ ಕುರ್ಯಾತ್ ಸದಾ ಮಂಗಲಮ್ ॥೨॥

-ಸಂಸ್ಕಾರಪದ್ಧತಿ

*****

## ಪರಿಶಿಷ್ಟ - ೨

# ಸೂರ್ಯಾವರ್ಗಾಃ

೪೭ ಸಾವಿತ್ರೀ ಸೂರ್ಯಾ ಋಷಿಕಾ । ೧-೫ ಸೋಮಃ, ೬-೧೬ ಸೂರ್ಯಾವಿವಾಹಃ, ೧೭ ದೇವಾಃ, ೧೮ ಸೋಮಾರ್ಕೌ, ೧೯ ಚಂದ್ರಮಾಃ, ೨೦-೨೮ ನೃಣಾಂ ವಿವಾಹಮಂತ್ರಾ ಆಶೀಃಪ್ರಾಯಾಃ, ೨೯-೩೦ ವಧೂವಾಸಃಸಂಸ್ಪರ್ಶನಿಂದಾ, ೩೧ ದಂಪತ್ಯೋರ್ಯಕ್ಷ್ಮನಾಶನಂ, ೩೨-೪೭ ಸೂರ್ಯಾ ಸಾವಿತ್ರೀ। ಅನುಷ್ಟುಪ್ ; ೧೪,೧೯-೨೧,೨೩-೨೪,೨೬,೩೬-೩೭,೪೪ ತ್ರಿಷ್ಟುಪ್ ; ೧೮,೨೭,೪೩ ಜಗತೀ ; ೩೪ ಉರೋಬೃಹತೀ ।

ಸತ್ಯೇನೋತ್ತಭಿತಾ ಭೂಮಿಃ ಸೂರ್ಯೇಣೋತ್ತಭಿತಾ ದ್ಯೌಃ ।
ಋತೇನಾದಿತ್ಯಾಸ್ತಿಷ್ಠಂತಿ ದಿವಿ ಸೋಮೋ ಅಧಿ ಶ್ರಿತಃ ॥೧॥

ಸೋಮೇನಾದಿತ್ಯಾ ಬಲಿನಃ ಸೋಮೇನ ಪೃಥಿವೀ ಮಹೀ ।
ಅಥೋ ನಕ್ಷತ್ರಾಣಾಮೇಷಾಮುಪಸ್ಥೇ ಸೋಮ ಆಹಿತಃ ॥೨॥

ಸೋಮಂ ಮನ್ಯತೇ ಪಪಿವಾನ್ ಯತ್ ಸಂಪಿಂಷಂತ್ಯೋಷಧಿಮ್ ।
ಸೋಮಂ ಯಂ ಬ್ರಹ್ಮಾಣೋ ವಿದುರ್ನ ತಸ್ಯಾಶ್ನಾತಿ ಕಶ್ಚನ ॥೩॥

ಆಚ್ಛದ್ವಿಧಾನೈರ್ಗುಪಿತೋ ಬಾರ್ಹತೈಃ ಸೋಮ ರಕ್ಷಿತಃ ।
ಗ್ರಾವ್ಣಾಮಿಚ್ಛೃಣ್ವನ್ ತಿಷ್ಠಸಿ ನ ತೇ ಅಶ್ನಾತಿ ಪಾರ್ಥಿವಃ ॥೪॥

ಯತ್ ತ್ವಾದೇವ ಪ್ರಪಿಬಂತಿ ತತ ಆ ಪ್ಯಾಯಸೇ ಪುನಃ ।
ವಾಯುಃ ಸೋಮಸ್ಯ ರಕ್ಷಿತಾ ಸಮಾನಾಂ ಮಾಸ ಆಕೃತಿಃ ॥೫॥

ರೈಭ್ಯಾಸೀದನುದೇಯೀ ನಾರಾಶಂಸೀ ನ್ಯೋಚನೀ ।
ಸೂರ್ಯಾಯಾಭದ್ರಮಿದ್ವಾಸೋ ಗಾಥಯೈತಿ ಪರಿಷ್ಕೃತಮ್ ॥೬॥

ಚಿತ್ತಿರಾ ಉಪಬರ್ಹಣಂ ಚಕ್ಷುರಾ ಅಭ್ಯಂಜನಮ್ ।
ದ್ಯೌರ್ಭೂಮಿಃ ಕೋಶ ಆಸೀದ್ ಯದಯಾತ್ ಸೂರ್ಯಾ ಪತಿಮ್ ॥೭॥

ಸ್ತೋಮಾ ಆಸನ್ ಪ್ರತಿಧಯಃ ಕುರೀರಂ ಛಂದ ಓಪಶಃ ।
ಸೂರ್ಯಾಯಾ ಅಶ್ವಿನಾ ವರಾಽಗ್ನಿರಾಸೀತ್ ಪುರೋಗವಃ ॥೮॥

ಸೋಮೋ ವಧೂಯುರಭವದಶ್ವಿನಾಸ್ತಾಮುಭಾ ವರಾ ।
ಸೂರ್ಯಾಂ ಯತ್ ಪತ್ಯೇ ಶಂಸಂತೀಂ ಮನಸಾ ಸವಿತಾದದಾತ್ ॥೯॥

ಮನೋ ಅಸ್ಯಾ ಅನ ಆಸೀದ್ ದ್ಯೌರಾಸೀದುತ ಛದಿಃ ।
ಶುಕ್ರಾವನಡ್ವಾಹಾವಾಸ್ತಾಂ ಯದಯಾತ್ ಸೂರ್ಯಾ ಗೃಹಮ್ ॥೧೦॥

ಋಕ್ಸಾಮಾಭ್ಯಾಮಭಿಹಿತೌ ಗಾವೌ ತೇ ಸಾಮನಾವಿತಃ ।
ಶ್ರೋತ್ರಂ ತೇ ಚಕ್ರೇ ಆಸ್ತಾಂ ದಿವಿ ಪಂಥಾಶ್ಚರಾಚರಃ ॥೧೧॥

ಶುಚೀ ತೇ ಚಕ್ರೇ ಯಾತ್ಯಾ ವ್ಯಾನೋ ಅಕ್ಷ ಆಹತಃ ।
ಅನೋ ಮನಸ್ಮಯಂ ಸೂರ್ಯಾಽಽರೋಹತ್ ಪ್ರಯತೀ ಪತಿಮ್ ॥೧೨॥

ಸೂರ್ಯಾಯಾ ವಹತುಃ ಪ್ರಾಗಾತ್ ಸವಿತಾ ಯಮವಾಸೃಜತ್ ।
ಅಘಾಸು ಹನ್ಯಂತೇ ಗಾವೋಽರ್ಜುನ್ಯೋಃ ಪರ್ಯುಹ್ಯತೇ ॥೧೩॥

ಯದಶ್ವಿನಾ ಪೃಚ್ಛಮಾನಾವಯಾತಂ ತ್ರಿಚಕ್ರೇಣ ವಹತುಂ ಸೂರ್ಯಾಯಾಃ ।
ವಿಶ್ವೇ ದೇವಾ ಅನು ತದ್ವಾಮಜಾನನ್ ಪುತ್ರಃ ಪಿತರಾವವೃಣೀತ ಪೂಷಾ ॥ ೧೪ ॥

ಯದಯಾತಂ ಶುಭಸ್ಪತೀ ವರೇಯಂ ಸೂರ್ಯಾಮುಪ ।
ಕ್ವೈಕಂ ಚಕ್ರಂ ವಾಮಾಸೀತ್ ಕ್ವ ದೇಷ್ಟ್ರಾಯ ತಸ್ಥಥುಃ ॥೧೫॥

ದ್ವೇ ತೇ ಚಕ್ರೇ ಸೂರ್ಯೇ ಬ್ರಹ್ಮಾಣ ಋತುಥಾ ವಿದುಃ ।
ಅಥೈಕಂ ಚಕ್ರಂ ಯದ್ಗುಹಾ ತದದ್ಧಾತಯ ಇದ್ವಿದುಃ ॥೧೬॥

ಸೂರ್ಯಾಯೈ ದೇವೇಭ್ಯೋ ಮಿತ್ರಾಯ ವರುಣಾಯ ಚ ।
ಯೇ ಭೂತಸ್ಯ ಪ್ರಚೇತಸ ಇದಂ ತೇಭ್ಯೋಽಕರಂ ನಮಃ ॥೧೭॥

ಪೂರ್ವಾಪರಂ ಚರತೋ ಮಾಯಯೈತೌ ಶಿಶೂ ಕ್ರೀಳಂತೌ ಪರಿ ಯಾತೋ ಅಧ್ವರಮ್ ।
ವಿಶ್ವಾನ್ಯನ್ಯೋ ಭುವನಾಭಿಚಷ್ಟ ಋತೂರನ್ಯೋ ವಿದಧಜ್ಜಾಯತೇ ಪುನಃ ॥೧೮॥

ನವೋನವೋ ಭವತಿ ಜಾಯಮಾನೋಽಹ್ನಾಂ ಕೇತುರುಷಸಾಮೇತ್ಯಗ್ರಮ್ ।
ಭಾಗಂ ದೇವೇಭ್ಯೋ ವಿ ದಧಾತ್ಯಾಯನ್ ಪ್ರ ಚಂದ್ರಮಾಸ್ತಿರತೇ ದೀರ್ಘಮಾಯುಃ ೧೯

ಸುಕಿಂಶುಕಂ ಶಲ್ಮಲಿಂ ವಿಶ್ವರೂಪಂ ಹಿರಣ್ಯವರ್ಣಂ ಸುವೃತಂ ಸುಚಕ್ರಮ್ ।
ಆ ರೋಹ ಸೂರ್ಯೇ ಅಮೃತಸ್ಯ ಲೋಕಂ ಸ್ಯೋನಂ ಪತ್ಯೇ ವಹತುಂ ಕೃಣುಷ್ವ ॥೨೦॥

ಉದೀರ್ಷ್ವಾತಃ ಪತಿವತೀ ಹ್ಯೇಷಾ ವಿಶ್ವಾವಸುಂ ನಮಸಾ ಗೀರ್ಭಿರೀಳೇ ।
ಅನ್ಯಾಮಿಚ್ಛ ಪಿತೃಷದಂ ವ್ಯಕ್ತಾಂ ಸ ತೇ ಭಾಗೋ ಜನುಷಾ ತಸ್ಯ ವಿದ್ಧಿ ॥೨೧॥

ಉದೀರ್ಷ್ವಾತೋ ವಿಶ್ವಾವಸೋ ನಮಸೇಳಾಮಹೇ ತ್ವಾ ।
ಅನ್ಯಾಮಿಚ್ಛ ಪ್ರಫರ್ವ್ಯಂ೧ ಸಂ ಜಾಯಾಂ ಪತ್ಯಾ ಸೃಜ ॥೨೨॥

ಅನೃಕ್ಷರಾ ಋಜವಃ ಸಂತು ಪಂಥಾ ಯೇಭಿಃ ಸಖಾಯೋ ಯಂತಿ ನೋ ವರೇಯಮ್ ।
ಸಮರ್ಯಮಾ ಸಂ ಭಗೋ ನೋ ನಿನೀಯಾತ್ ಸಂ ಜಾಸ್ಪತ್ಯಂ ಸುಯಮಮಸ್ತು ದೇವಾಃ॥

ಪ್ರ ತ್ವಾ ಮುಂಚಾಮಿ ವರುಣಸ್ಯ ಪಾಶಾದ್ ಯೇನ ತ್ವಾಬಧ್ನಾತ್ ಸವಿತಾ ಸುಶೇವಃ ।
ಋತಸ್ಯ ಯೋನೌ ಸುಕೃತಸ್ಯ ಲೋಕೇಽರಿಷ್ಟಾಂ ತ್ವಾ ಸಹ ಪತ್ಯಾ ದಧಾಮಿ ॥೨೪॥

ಪ್ರೇತೋ ಮುಂಚಾಮಿ ನಾಮುತಃ ಸುಬದ್ಧಾಮಮುತಸ್ಕರಮ್ ।
ಯಥೇಯಮಿಂದ್ರ ಮೀಢ್ವಃ ಸುಪುತ್ರಾ ಸುಭಗಾಸತಿ ॥೨೫॥

ಪೂಷಾ ತ್ವೇತೋ ನಯತು ಹಸ್ತಗೃಹ್ಯಾಽಶ್ವಿನಾ ತ್ವಾ ಪ್ರ ವಹತಾಂ ರಥೇನ ।
ಗೃಹಾನ್ ಗಚ್ಛ ಗೃಹಪತ್ನೀ ಯಥಾಸೋ ವಶಿನೀ ತ್ವಂ ವಿದಥಮಾ ವದಾಸಿ ॥೨೬॥

ಇಹ ಪ್ರಿಯಂ ಪ್ರಜಯಾ ತೇ ಸಮೃಧ್ಯತಾಮಸ್ಮಿನ್ ಗೃಹೇ ಗಾರ್ಹಪತ್ಯಾಯ ಜಾಗೃಹಿ ।
ಏನಾ ಪತ್ಯಾ ತನ್ವಂ೧ ಸಂ ಸೃಜಸ್ವಾಽಧಾ ಜಿವ್ರೀ ವಿದಥಮಾ ವದಾಥಃ ॥೨೭॥

ನೀಲಲೋಹಿತಂ ಭವತಿ ಕೃತ್ಯಾಸಕ್ತಿರ್ವ್ಯಜ್ಯತೇ ।
ಏಧಂತೇ ಅಸ್ಯಾ ಜ್ಞಾತಯಃ ಪತಿರ್ಬಂಧೇಷು ಬಧ್ಯತೇ ॥೨೮॥

ಪರಾ ದೇಹಿ ಶಾಮುಲ್ಯಂ ಬ್ರಹ್ಮಭ್ಯೋ ವಿ ಭಜಾ ವಸು ।
ಕೃತ್ಯೈಷಾ ಪದ್ವತೀ ಭೂತ್ವ್ಯಾ ಜಾಯಾ ವಿಶತೇ ಪತಿಮ್ ॥೨೯॥

ಅಶ್ರೀರಾ ತನೂರ್ಭವತಿ ರುಶತೀ ಪಾಪಯಾಮುಯಾ ।
ಪತಿರ್ಯದ್ವಧ್ವೋ೩ ವಾಸಸಾ ಸ್ವಮಂಗಮಭಿಧಿತ್ಸತೇ ॥೩೦॥

ಯೇ ವಧ್ವಶ್ಚಂದ್ರಂ ವಹತುಂ ಯಕ್ಷ್ಮಾ ಯಂತಿ ಜನಾದನು ।
ಪುನಸ್ತಾನ್ ಯಜ್ಞಿಯಾ ದೇವಾ ನಯಂತು ಯತ ಆಗತಾಃ ॥೩೧॥

ಮಾ ವಿದನ್ ಪರಿಪಂಥಿನೋ ಯ ಆಸೀದಂತಿ ದಂಪತೀ ।
ಸುಗೇಭಿರ್ದುರ್ಗಮತೀತಾಮಪ ದ್ರಾಂತ್ವರಾತಯಃ ॥೩೨॥

ಸುಮಂಗಲೀರಿಯಂ ವಧೂರಿಮಾಂ ಸಮೇತ ಪಶ್ಯತ ।
ಸೌಭಾಗ್ಯಮಸ್ಯೈ ದತ್ವಾಯಾಽಥಾಸ್ತಂ ವಿ ಪರೇತನ ॥೩೩॥

ತೃಷ್ಟಮೇತತ್ಕಟುಕಮೇತದಪಾಷ್ಠವದ್ವಿಷವನ್ನೈತದತ್ತವೇ ।
ಸೂರ್ಯಾಂ ಯೋ ಬ್ರಹ್ಮಾ ವಿದ್ಯಾತ್ ಸ ಇದ್ವಾಧೂಯಮರ್ಹತಿ ॥೩೪॥

ಆಶಸನಂ ವಿಶಸನಮಥೋ ಅಧಿವಿಕರ್ತನಮ್ ।
ಸೂರ್ಯಾಯಾಃ ಪಶ್ಯ ರೂಪಾಣಿ ತಾನಿ ಬ್ರಹ್ಮಾ ತು ಶುಂಧತಿ ॥೩೫॥

ಗೃಭ್ಣಾಮಿ ತೇ ಸೌಭಗತ್ವಾಯ ಹಸ್ತಂ ಮಯಾ ಪತ್ಯಾ ಜರದಷ್ಟಿರ್ಯಥಾಸಃ ।
ಭಗೋ ಅರ್ಯಮಾ ಸವಿತಾ ಪುರಂಧಿರ್ಮಹ್ಯಂ ತ್ವಾದುರ್ಗಾರ್ಹಪತ್ಯಾಯ ದೇವಾಃ ॥

ತಾಂ ಪೂಷಂಛಿವತಮಾಮೇರಯಸ್ವ ಯಸ್ಯಾಂ ಬೀಜಂ ಮನುಷ್ಯಾ೩ ವಪಂತಿ ।
ಯಾ ನ ಊರೂ ಉಶತೀ ವಿಶ್ರಯಾತೇ ಯಸ್ಯಾಮುಶಂತಃ ಪ್ರಹರಾಮ ಶೇಪಮ್ ॥೩೭॥

ತುಭ್ಯಮಗ್ರೇ ಪರ್ಯವಹನ್ತ್ಸೂರ್ಯಾಂ ವಹತುನಾ ಸಹ ।
ಪುನಃ ಪತಿಭ್ಯೋ ಜಾಯಾಂ ದಾ ಅಗ್ನೇ ಪ್ರಜಯಾ ಸಹ ॥೩೮॥

ಪುನಃ ಪತ್ನೀಮಗ್ನಿರದಾದಾಯುಷಾ ಸಹ ವರ್ಚಸಾ ।
ದೀರ್ಘಾಯುರಸ್ಯಾ ಯಃ ಪತಿರ್ಜೀವಾತಿ ಶರದಃ ಶತಮ್ ॥೩೯॥

ಸೋಮಃ ಪ್ರಥಮೋ ವಿವಿದೇ ಗಂಧರ್ವೋ ವಿವಿದ ಉತ್ತರಃ ।
ತೃತೀಯೋ ಅಗ್ನಿಷ್ಟೇ ಪತಿಸ್ತುರೀಯಸ್ತೇ ಮನುಷ್ಯಜಾಃ ॥೪೦॥
ಸೋಮೋ ದದದ್ಗಂಧರ್ವಾಯ ಗಂಧರ್ವೋ ದದದಗ್ನಯೇ ।
ರಯಿಂ ಚ ಪುತ್ರಾಂಶ್ಚಾದಾದಗ್ನಿರ್ಮಹ್ಯಮಥೋ ಇಮಾಮ್ ॥೪೧॥
ಇಹೈವ ಸ್ತಂ ಮಾ ವಿ ಯೌಷ್ಟಂ ವಿಶ್ವಮಾಯುರ್ವ್ಯಶ್ನುತಮ್ ।
ಕ್ರೀಳಂತೌ ಪುತ್ರೈರ್ನಪ್ತೃಭಿರ್ಮೋದಮಾನೌ ಸ್ವೇ ಗೃಹೇ ॥೪೨॥
ಆ ನಃ ಪ್ರಜಾಂ ಜನಯತು ಪ್ರಜಾಪತಿರಾಜರಸಾಯ ಸಮನಕ್ತ್ವರ್ಯಮಾ ।
ಅದುರ್ಮಂಗಲೀಃ ಪತಿಲೋಕಮಾ ವಿಶ ಶಂ ನೋ ಭವ ದ್ವಿಪದೇ ಶಂ ಚತುಷ್ಪದೇ ॥೪೩॥
ಅಘೋರಚಕ್ಷುರಪತಿಘ್ನ್ಯೇಧಿ ಶಿವಾ ಪಶುಭ್ಯಃ ಸುಮನಾಃ ಸುವರ್ಚಾಃ ।
ವೀರಸೂರ್ದೇವಕಾಮಾ ಸ್ಯೋನಾ ಶಂ ನೋ ಭವ ದ್ವಿಪದೇ ಶಂ ಚತುಷ್ಪದೇ ॥೪೪॥
ಇಮಾಂ ತ್ವಮಿಂದ್ರ ಮೀಢ್ವಃ ಸುಪುತ್ರಾಂ ಸುಭಗಾಂ ಕೃಣು ।
ದಶಾಸ್ಯಾಂ ಪುತ್ರಾನಾ ಧೇಹಿ ಪತಿಮೇಕಾದಶಂ ಕೃಧಿ ॥೪೫॥
ಸಮ್ರಾಜ್ಞೀ ಶ್ವಶುರೇ ಭವ ಸಮ್ರಾಜ್ಞೀ ಶ್ವಶ್ರ್ವಾಂ ಭವ ।
ನನಾಂದರಿ ಸಮ್ರಾಜ್ಞೀ ಭವ ಸಮ್ರಾಜ್ಞೀ ಅಧಿ ದೇವೃಷು ॥೪೬॥
ಸಮಂಜಂತು ವಿಶ್ವೇ ದೇವಾಃ ಸಮಾಪೋ ಹೃದಯಾನಿ ನೌ ।
ಸಂ ಮಾತರಿಶ್ವಾ ಸಂ ಧಾತಾ ಸಮು ದೇಷ್ಟ್ರೀ ದಧಾತು ನೌ ॥೪೭॥..................

ಅವಿಧವಾ ಭವ ವರ್ಷಾಣಿ ಶತಂ ಸಾಗ್ರಂ ತು ಸುವ್ರತಾ ।
ತೇಜಸ್ವೀ ಚ ಯಶಸ್ವೀ ಚ ಧರ್ಮಪತ್ನೀ ಪತಿವ್ರತಾ ॥೧॥
ಜನಯದ್ಬಹುಪುತ್ರಾಣಿ ಮಾ ಚ ದುಃಖಂ ಲಭೇತ್ ಕ್ವಚಿತ್ ।
ಭರ್ತಾ ತೇ ಸೋಮಪಾ ನಿತ್ಯಂ ಭವೇದ್ ಧರ್ಮಪರಾಯಣಃ ॥೨॥
ಅಷ್ಟಪುತ್ರಾ ಭವ ತ್ವಂ ಚ ಸುಭಗಾ ಚ ಪತಿವ್ರತಾ ।
ಭರ್ತುಶ್ಚೈವ ಪಿತುರ್ಭ್ರಾತುರ್ಹೃದಯಾನಂದಿನೀ ಸದಾ ॥೩॥
ಇಂದ್ರಸ್ಯ ತು ಯಥೇಂದ್ರಾಣೀ ಶ್ರೀಧರಸ್ಯ ಯಥಾ ಶ್ರಿಯಾ ।
ಶಂಕರಸ್ಯ ಯಥಾ ಗೌರೀ ತದ್ಭರ್ತುರಪಿ ಭರ್ತರಿ ॥೪॥
ಅತ್ರೇರ್ಯಥಾನುಸೂಯಾ ಸ್ಯಾದ್ ವಸಿಷ್ಠಸ್ಯಾಪ್ಯರುಂಧತೀ ।
ಕೌಶಿಕಸ್ಯ ಯಥಾ ಸತೀ ತಥಾ ತ್ವಮಪಿ ಭರ್ತರಿ ॥೫॥
ಧ್ರುವೈಧಿ ಪೋಷ್ಯಾ ಮಯಿ ಮಹ್ಯಂ ತ್ವಾದಾದ್ಬೃಹಸ್ಪತಿಃ ।
ಮಯಾ ಪತ್ಯಾ ಪ್ರಜಾವತೀ ಸಂ ಜೀವ ಶರದಃ ಶತಮ್ ॥೬॥

★★★★★

## ಪರಿಶಿಷ್ಟ - ೩

# ಹರಿದಾಸರ ಹಿತೋಪದೇಶ

ರಾಗ : ಸಾವೇರಿ ಝಂಪೆತಾಳ

ದಿನಗಳನು ಕಳೆವ ಜನರೇ ಸುಜನರೋ
ವನಜನಾಭನ ದಾಸಜನಸಮಾಗಮದಿಂದ ॥ ಪ ॥

ಅರುಣೋದಯದಲೆದ್ದು ಆಚಮನ ಕೃತ್ಯದಲಿ
ಪರಿಶುದ್ಧರಾಗಿ ಇಹಪರಗಳಿಂದ
ಎರಡುವಿಧ ಸುಖವೀವ ಗುರುಮಧ್ವಮುನಿವರರ
ಪರಮಮತ ಪಿಡಿದು ಹರಿಚರಿತಾಮೃತವ ಸವಿದು ॥೧॥

ಸ್ನಾನವನು ಮಾಡಿ ಸಂಕಲ್ಪಪೂರ್ವಕದಿ ಸಂ-
ಧ್ಯಾನ ಗಾಯತ್ರಿ ಗುರುಮಂತ್ರ ಜಪಿಸಿ
ಭಾನುಗರ್ಘ್ಯವನಿತ್ತು ಪರಮಾತ್ಮನಂಘ್ರಿಗಳ-
ಧ್ಯಾನವನು ಮಾಡಿ ಅಧ್ಯಯನ ಪಾಠಗಳಿಂದ ॥೨॥

ಶ್ರೀವಾಸುದೇವನನು ಅಡಿಗಡಿಗೆ ನೆನೆನೆನೆದು
ಪಾವಕಗೆ ಪ್ರಾತರಾಹುತಿಯನಿತ್ತು
ಭಾವಜ್ಞರಲಿ ಸಕಲ ಪೌರಾಣಗಳ ಕೇಳಿ
ಹೂವು ಶ್ರೀತುಳಸಿವನಗಳನು ಸೇವಿಸುತ ॥೩॥

ಸಾವಧಾನದಿ ತಂತ್ರಸಾರೋಕ್ತವಿಧಿಯಿಂದ
ದೇವಪೂಜೆಯ ಮಾಡಿ ದೇವೇಶಗೆ
ನೈವೇದ್ಯಗಳನಿತ್ತು ನಿತ್ಯತೃಪ್ತಗೆ ವೈಶ್ವ-
ದೇವ ಬಲಿಹರಣ ಅತಿಥಿಯ ಪೂಜೆ ಮಾಡುತ್ತ ॥೪॥

ಪರಮ ಹರುಷದಲಿ ದೇವಪ್ರಸಾದವನು
ವರಮಾತಾಪಿತರು ಸೋದರರು ಸಹಿತ
ಪರಮ ಸೌಖ್ಯದಿ ಪಂಕ್ತಿಪಾವನರ ಒಡಗೂಡಿ
ನರಹರೇ ಎನುತ ಭೋಜನ ಮಾಡಿ ಮುದದಿಂದ ॥ ೫॥

ಸಾಯಾಹ್ನಸಮಯ ಸಂಧ್ಯಾನ ಗಾಯತ್ರಿಜಪ
ಶ್ರೀಯರಸನಂಘ್ರಿಗಳ ಪೂಜೆಯನು ಮಾಡಿ
ವಾಯುಸಖಮುಖದಲಾಹುತಿಯಿತ್ತು ಲಕ್ಷ್ಮೀ-
ನಾರಾಯಣನ ಗಾಯನದಿ ಕೊಂಡಾಡುತ್ತ ಹಿಗ್ಗುತ್ತ ॥ ೬ ॥

ಈ ವಿಧದಿ ದಿನಗಳನು ಕಳೆದು ರಾತ್ರಿಯಲೊಂದು
ಝಾವದ ನಂತರ ಸುಖದಿ ಮಲಗಿ
ಝಾವಝಾವದೊಳೆದ್ದು ನೆರೆಹೊರೆಯು ಕೇಳ್ವಂತೆ
ಪಾವನಚರಿತ ಹಯವದನನ್ನ ಸ್ಮರಿಸುತ್ತ ॥೭॥

ರಾಗ: ಶಂಕರಾಭರಣ ತಾಳ: ಅಟ

ಬುದ್ಧಿಮಾತು ಹೇಳಿದರೆ ಕೇಳಬೇಕಮ್ಮ ಮನ-
ಶುದ್ದಿಯಿಂದ ಗಂಡನೊಡನೆ ಬಾಳಬೇಕಮ್ಮ ॥ ಪ ॥

ಅತ್ತೆಮಾವಗಂಜಿಕೊಂಡು ನಡೆಯಬೇಕಮ್ಮ ಮಗಳೆ
ಚಿತ್ತದೊಲ್ಲಭನಕ್ಕರೆಯನ್ನು ಪಡೆಯಬೇಕಮ್ಮ
ಹೊತ್ತುಹೊತ್ತಿಗೆ ಮನೆಯ ಕೆಲಸ ಮಾಡಬೇಕಮ್ಮ ಮಗಳೆ
ಹತ್ತು ಮಂದಿ ಒಪ್ಪುವ ಹಾಂಗೆ ನಡೆಯಬೇಕಮ್ಮ ॥೧॥

ಕೊಟ್ಟುಕೊಂಬುವ ನೆಂಟರೊಡನೆ ಕೋಪ ಬೇಡಮ್ಮ ಮಗಳೆ
ಅಟ್ಟುಉಂಬುವ ಕಾಲದಲ್ಲಿ ಆಟ ಬೇಡಮ್ಮ
ಹಟ್ಟಿಬಾಗಿಲಲ್ಲಿ ಬಂದು ನಿಲ್ಲಬೇಡಮ್ಮ ಮಗಳೆ
ಕಟ್ಟಿ ಆಳುವ ಗಂಡನೊಡನೆ ಸಿಟ್ಟು ಬ್ಯಾಡಮ್ಮ ॥೨॥

ನೆರೆಹೊರೆಯವರಿಗೆ ನ್ಯಾಯವನ್ನು ಹೇಳಬೇಡಮ್ಮ ಮಗಳೆ
ಗರುವ ಕೋಪ ಮತ್ಸರವನ್ನು ಮಾಡಬೇಡಮ್ಮ
ಪರರ ನಿಂದಿಪ ಹೆಂಗಳೊಡನೆ ಸೇರಬೇಡಮ್ಮ ಮಗಳೆ
ಗುರುಪುರಂದರವಿಠಲನ್ನ ಮರೆಯಬೇಡಮ್ಮ ॥೩॥

ರಾಗ: ನಾದನಾಮಕ್ರಿಯ ಅಟತಾಳ

ಸಾರಿದ ಡಂಗುರ ಯಮನು ಅಘ-
ನಾರಿಯರೆಳೆತಂದು ನರಕದೊಳಿಡಿರೆಂದು ಪ

ಹೊತ್ತಾರೆ ಎದ್ದು ಪತಿಗೆ ಎರಗದವಳ
ಮೃತ್ತಿಕೆ ಶೌಚ ಮಾಡದೆ ಇಪ್ಪಳ
ಬೆತ್ತಲೆ ಮೈತೊಳೆದತ್ತಿಗೆ ನಾದಿನಿ
ಅತ್ತೆ ಮಾವರ ಬೈವಳೆತ್ತಿ ತನ್ನಿರೊ ಎಂದು ॥೧॥

ತಿಲಕಾಯುಧ ಬಿಟ್ಟುಕುಂಕುಮವಿಡುವವಳ
ಬೆಳಗಾದ ಕಾಲಕ್ಕು ಮಲಗಿಪ್ಪಳ

ಮಲಿನವಸ್ತ್ರವನುಟ್ಟು ಪತಿಬಳಿ ಪೋಪಳ
ಕಲಹಕಾರಿಯ ಪಿಡಿದೆಳೆದು ತನ್ನಿರೊ ಎಂದು ॥ ೨ ॥

ಉತ್ತಮಗುರುಹಿರಿಯರನು ನಿಂದಿಸುವಳ
ಹೆತ್ತಮಕ್ಕಳ ಮಾರಿ ಬದುಕುವಳ
ಪ್ರತ್ಯೇಕ ಶಯ್ಯದಿ ಮಲಗಿಪ್ಪಳ ನೀಚ-
ವೃತ್ತಿಯಳ ಪಿಡಿದೆತ್ತಿ ತನ್ನಿರೊ ಎಂದು ॥೩॥

ಜಲಜಕ್ಕಿ ಸಾಳಿಕಂಬಳಿಬೋಳಿಬಕ್ಕಿಗೊಂ-
ದಲ ಮೊದಲಾದವು ದೈವವೆಂದು
ತಿಳಿದು ಪಿಶಾಚಿ ಎಂಜಲನುಂಡು ಹಿಗ್ಗುವ
ಲಲನೇರನಾಲಸ್ಯಗೊಳದೆ ತನ್ನಿರೊ ಎಂದು ॥೪॥

ಒಲಿಮೆಯೌಷಧಮಾಡಿ ಪತಿಯನೊಲಿಸುವಳ
ಮಲಮಕ್ಕಳೊಳು ಮತ್ಸರಿಸುತಿಪ್ಪಳ
ಕಳುವಿಲಿ ಕಾಂತನ ಧನವ ವಂಚಿಸುವಳ
ಗಳಕೆ ಪಾಶವ ಸುತ್ತಿ ಎಳೆದು ತನ್ನಿರೊ ಎಂದು ॥೫॥

ನಾಗೇಂದ್ರಶಯನನ ದಿನದಲ್ಲಿ ಉಪವಾಸ
ಜಾಗರಮಾಡದೆ ಮಲಗಿಪ್ಪಳ
ಭಾಗವತಾದಿಶಾಸ್ತ್ರವ ಕೇಳದೆ ಮತ್ತಳಾಗಿ ತಿ-
ರುಗುವಳ ಎಳೆದು ತನ್ನಿರೊ ಎಂದು ॥ ೬ ॥

ಉಣಲಿಲ್ಲ ಉಡಲಿಲ್ಲ ಇಡಲಿಲ್ಲ ತೊಡ-
ಲಿಲ್ಲ ಸುಡಲಿ ಗಂಡನ ಒಗೆತನ
ಪಡೆದವರನು ನುಡಿನುಡಿಗೆ ಬೈಯುವ ಇಂಥ-
ಕಡುಪಾಪಿಯ ಹೆಡೆಮುಡಿಕಟ್ಟಿತಾ ಎಂದು ॥ ೭ ॥

ಗಂಡ ನಿರ್ಧನಿಕನೆಂದವಮಾನಮಾಳ್ಪಳ
ಉಂಡ ಶೇಷಾನ್ನವನುಣಿಸುವಳ
ಕೊಂಡೆಮಾತುಗಳ್ಹೇಳಿ ಕಳವಳಗೊಳಿಪಳ
ಮಂಡೆಕೂದಲು ಹಿಡಿದೆಳೆದು ತನ್ನಿರೊ ಎಂದು ॥೮॥

ಸಾಲೆಡೆಯಲ್ಲಿ ಭೇದಮಾಡಿ ಬಡಿಸುವಳ
ನೀಲಾಂಬರವನುಟ್ಟು ಮಡಿಯೆಂಬಳ
ಬಾಲಕರನು ಬಡಿದಳಿಸುತಿಪ್ಪಳ ಹಿಂಗಾಲ
ತೊಳೆಯದವಳ ಎಳೆದು ತನ್ನಿರೊ ಎಂದು ॥ ೯ ॥

ಈ ವಿಧದಿ ದಿನಗಳನು ಕಳೆದು ರಾತ್ರಿಯಲೊಂದು
ಝಾವದ ನಂತರ ಸುಖದಿ ಮಲಗಿ
ಝಾವಝಾವದೊಳೆದ್ದು ನೆರೆಹೊರೆಯು ಕೇಳ್ವಂತೆ
ಪಾವನಚರಿತ ಹಯವದನನ್ನ ಸ್ಮರಿಸುತ್ತ ॥೭॥

ರಾಗ: ಶಂಕರಾಭರಣ ತಾಳ: ಅಟ

ಬುದ್ಧಿಮಾತು ಹೇಳಿದರೆ ಕೇಳಬೇಕಮ್ಮ ಮನ-
ಶುದ್ಧಿಯಿಂದ ಗಂಡನೊಡನೆ ಬಾಳಬೇಕಮ್ಮ ॥ ಪ ॥

ಅತ್ತೆಮಾವಗಂಜಿಕೊಂಡು ನಡೆಯಬೇಕಮ್ಮ ಮಗಳೆ
ಚಿತ್ತದೊಲ್ಲಭನಕ್ಕರೆಯನ್ನು ಪಡೆಯಬೇಕಮ್ಮ
ಹೊತ್ತುಹೊತ್ತಿಗೆ ಮನೆಯ ಕೆಲಸ ಮಾಡಬೇಕಮ್ಮ ಮಗಳೆ
ಹತ್ತು ಮಂದಿ ಒಪ್ಪುವ ಹಾಂಗೆ ನಡೆಯಬೇಕಮ್ಮ ॥೧॥

ಕೊಟ್ಟುಕೊಂಬುವ ನೆಂಟರೊಡನೆ ಕೋಪ ಬೇಡಮ್ಮ ಮಗಳೆ
ಅಟ್ಟುಉಂಬುವ ಕಾಲದಲ್ಲಿ ಆಟ ಬೇಡಮ್ಮ
ಹಟ್ಟಿಬಾಗಿಲಲ್ಲಿ ಬಂದು ನಿಲ್ಲಬೇಡಮ್ಮ ಮಗಳೆ
ಕಟ್ಟಿ ಆಳುವ ಗಂಡನೊಡನೆ ಸಿಟ್ಟು ಬ್ಯಾಡಮ್ಮ ॥೨॥

ನೆರೆಹೊರೆಯುವರಿಗೆ ನ್ಯಾಯವನ್ನು ಹೇಳಬೇಡಮ್ಮ ಮಗಳೆ
ಗರುವ ಕೋಪ ಮತ್ಸರವನ್ನು ಮಾಡಬೇಡಮ್ಮ
ಪರರ ನಿಂದಿಪ ಹೆಂಗಳೊಡನೆ ಸೇರಬೇಡಮ್ಮ ಮಗಳೆ
ಗುರುಪುರಂದರವಿಠಲನ್ನ ಮರೆಯಬೇಡಮ್ಮ ॥೩॥

ರಾಗ: ನಾದನಾಮಕ್ರಿಯ ಆಟತಾಳ

ಸಾರಿದ ಡಂಗುರ ಯಮನು ಅಘ-
ನಾರಿಯರೆಳೆತಂದು ನರಕದೊಳಿಡಿರೆಂದು ಪ

ಹೊತ್ತಾರೆ ಎದ್ದು ಪತಿಗೆ ಎರಗದವಳ
ಮೃತ್ತಿಕೆ ಶೌಚ ಮಾಡದೆ ಇಪ್ಪಳ
ಬೆತ್ತಲೆ ಮೈತೊಳೆದತ್ತಿಗೆ ನಾದಿನಿ
ಅತ್ತೆ ಮಾವರ ಬೈವಳೆತ್ತಿ ತನ್ನಿರೊ ಎಂದು ॥೧॥

ತಿಲಕಾಯುಧ ಬಿಟ್ಟು ಕುಂಕುಮವಿಡುವವಳ
ಬೆಳಗಾದ ಕಾಲಕ್ಕು ಮಲಗಿಪ್ಪಳ

ಮಲಿನವಸ್ತ್ರವನುಟ್ಟು ಪತಿಬಳಿ ಪ್ಪೋಪಳ
ಕಲಹಕಾರಿಯ ಪಿಡಿದೆಳೆದು ತನ್ನಿರೊ ಎಂದು ॥೨॥

ಉತ್ತಮಗುರುಹಿರಿಯರನು ನಿಂದಿಸುವಳ
ಹೆತ್ತಮಕ್ಕಳ ಮಾರಿ ಬದುಕುವಳ
ಪ್ರತ್ಯೇಕ ಶಯ್ಯದಿ ಮಲಗಿಪ್ಪಳ ನೀಚ-
ವೃತ್ತಿಯಳ ಪಿಡಿದೆತ್ತಿ ತನ್ನಿರೊ ಎಂದು ॥೩॥

ಜಲಜಕ್ಕಿ ಸಾಳಿಕಂಬಳಿಬೋಳಿಬಕ್ಕಿಗೊಂ-
ದಲ ಮೊದಲಾದವು ದೈವವೆಂದು
ತಿಳಿದು ಪಿಶಾಚಿ ಎಂಜಲನುಂಡು ಹಿಗ್ಗುವ
ಲಲನೇರನಾಲಸ್ಯಗೊಳದೆ ತನ್ನಿರೊ ಎಂದು ॥೪॥

ಒಲಿಮೆಯೌಷಧಮಾಡಿ ಪತಿಯನೊಲಿಸುವಳ
ಮಲಮಕ್ಕಳೊಳು ಮತ್ಸರಿಸುತಿಪ್ಪಳ
ಕಳುವಿಲಿ ಕಾಂತನ ಧನವ ವಂಚಿಸುವಳ
ಗಳಕೆ ಪಾಶವ ಸುತ್ತಿ ಎಳೆದು ತನ್ನಿರೊ ಎಂದು ॥೫॥

ನಾಗೇಂದ್ರಶಯನನ ದಿನದಲ್ಲಿ ಉಪವಾಸ
ಜಾಗರಮಾಡದೆ ಮಲಗಿಪ್ಪಳ
ಭಾಗವತಾದಿಶಾಸ್ತ್ರವ ಕೇಳದೆ ಮತ್ತಳಾಗಿ ತಿ-
ರುಗುವಳ ಎಳೆದು ತನ್ನಿರೊ ಎಂದು ॥೬॥

ಉಣಲಿಲ್ಲ ಉಡಲಿಲ್ಲ ಇಡಲಿಲ್ಲ ತೊಡ-
ಲಿಲ್ಲ ಸುಡಲಿ ಗಂಡನ ಒಗೆತನ
ಪಡೆದವರನು ನುಡಿನುಡಿಗೆ ಬೈಯುವ ಇಂಥ-
ಕಡುಪಾಪಿಯ ಹೆಡೆಮುಡಿಕಟ್ಟಿತಾ ಎಂದು ॥೭॥

ಗಂಡ ನಿರ್ಧನಿಕನೆಂದವಮಾನಮಾಳ್ಪಳ
ಉಂಡ ಶೇಷಾನ್ನವನುಣಿಸುವಳ
ಕೊಂಡೆಮಾತುಗಳ್ಹೇಳಿ ಕಳವಳಗೊಳಿಪಳ
ಮಂಡೆಕೂದಲು ಹಿಡಿದೆಳೆದು ತನ್ನಿರೊ ಎಂದು ॥೮॥

ಸಾಲೆಡೆಯಲ್ಲಿ ಭೇದಮಾಡಿ ಬಡಿಸುವಳ
ನೀಲಾಂಬರವನುಟ್ಟು ಮಡಿಯೆಂಬಳ
ಬಾಲಕರನು ಬಡಿದಳಿಸುತಿಪ್ಪಳ ಹಿಂಗಾಲ
ತೊಳೆಯದಳ ಎಳೆದು ತನ್ನಿರೊ ಎಂದು ॥೯॥

ಮೀಸಲು ಮಡಿಯೆನ್ನದೆ ಭುಂಜಿಸುವಳ ಸ-
ಕ್ಕೇಶಿಯೊಡನೆ ಗೆಳೆತನ ಮಾಳ್ಪಳ
ದಾಸೇರಿಂದಲಿ ಪಾಕಪಾತ್ರೆ ಮುಟ್ಟಿಸುವಳ
ಪಾಶಗಳನೆ ಹಾಕಿ ಎಳೆದು ತನ್ನಿರೊ ಎಂದು ॥೧೦॥

ಪತಿಗೆ ಬೇಕಾದವರೊಳು ಮತ್ಸರಿಸುವಳ
ಮೃತವತ್ಸಗೋವಿನ ಪಾಲುಂಬಳ
ಹುತವಹನನು ಪದತಳದಿ ನಂದಿಸುವಳ
ಮತಿಗೇಡಿಯ ಹಿಡಿದೆಳೆದು ತನ್ನಿರೊ ಎಂದು ॥೧೧॥

ಅತ್ತೆ ಮಾವರ ಕೂಡೆ ಮತ್ಸರಿಸುವಳ
ಸತ್ತವರ ನೆನೆದಳುತಿಪ್ಪಳ
ದತ್ತಾಪಹಾರವ ಮಾಡುತಿಪ್ಪಳ ಉ-
ನ್ಮತ್ತಳ ಪಿಡಿದೆಳೆದೆತ್ತಿ ತನ್ನಿರೊ ಎಂದು ॥೧೨॥

ಲಶುನವೃಂತಾಕಾದಿಗಳನು ಭಕ್ಷಿಸುವಳ
ಸೊಸೆಯರೊಡನೆ ಮತ್ಸರಿಸುತಿಹಳ
ಹಸಿದು ಬಂದವರಿಗೆ ಅಶನವಿಲ್ಲೆಂಬಳ
ಉಸಿರುಬಿಡದ ಹಾಗೆ ಎಳೆದು ತನ್ನಿರೊ ಎಂದು ॥೧೩॥

ತುಲಸಿಬೃಂದಾವನಕಭಿನಮಿಸದವಳ
ಜಲವ ಶೋಧಿಸದೆ ಪಾನವ ಮಾಳ್ಪಳ
ಫಲಧಾನ್ಯಾದಿಗಳ ನೋಡದೆ ಪಾಕಮಾಳ್ಪಳ
ಮಳೆಗಾಳಿನಿಂದಿಪಳೆಳೆದು ತನ್ನಿರೊ ಎಂದು ॥೧೪॥

ಅರಸಿನಕುಂಕುಮಪುಷ್ಪಾಂಜನವಸ್ತ್ರಾ-
ಭರಣಭೂಷಿತಳಾಗಿ ಪತಿಯೊಡನೆ
ಸರಸವಾಡುವ ಸುಖ ಹರಿಗೆ ಅರ್ಪಿತವೆಂಬ
ಗರತೇರೆಡೆಗೆ ಕರಮುಗಿದು ಬನ್ನಿರೊ ಎಂದು ॥೧೫॥

ಬಾಲಕರನು ತೊಟ್ಟಿಲೊಳಗಿಟ್ಟು ತೂಗುತ
ಪಾಲೆರೆವುತ ಹಾಡಿ ಪಾಡುತಲಿ
ಆಲಯದೊಳು ಕೆಲಸಗಳ ಮಾಡುತ ಲಕ್ಷ್ಮೀ-
ಲೋಲನ ಸ್ಮರಿಸುವರನು ಮುಟ್ಟದಿರಿ ಎಂದು ॥೧೬॥

ಅಗಣಿತಮಹಿಮ ಶ್ರೀಜಗನ್ನಾಥವಿಠಲನ
ಹಗಲಿರುಳು ಬಗೆಬಗೆಯಿಂದಲಿ

ಹೊಗಳುವ ದಾಸರ ಬಗೆಯವರೆನಿಸುವ
ಸುಗುಣೇರಿದ್ದೆಡೆಗೆ ಕೈಮುಗಿದು ಬನ್ನಿರೋ ಎಂದು ॥ ೧೭ ॥

ರಾಗ : ತಾಳ :

ಗಂಡಬಿಟ್ಟ ಗೈಯಾಳಿ ಕಾಣಣ್ಣ
ಅವಳ ಕಂಡರೆ ಕಡೆಗಾಗಿ ದಾರಿ ಪೋಗಣ್ಣ ಪ.

ಊರೊಳಗೆ ತಾನು ಪರದೇಶಿಯೆನ್ನುವಳು
ಸಾರುತ ತಿರುಗುವಳು ಮನೆಮನೆಯ ।
ಕೇರಿಕೇರಿಗುಂಟ ಕಲೆಯತ ತಿರುಗುವಳು
ನಾರಿಯಲ್ಲವೊ ಮುಕ್ಕಾ ಮಾರಿಕಾಣಣ್ಣ ॥೧॥

ಅತ್ತೆ ಮಾವನ ಕೂಡ ಅತಿ ಮತ್ಸರವ
ಮಾಡಿ ನೆತ್ತಿಗೆ ಮದ್ದನೆ ಊಡುವಳು ।
ಸತ್ಯರ ದೇವರ ಸತ್ಯ ನಿಜವಾದರೆ
ಬತ್ತಲೆ ಅಡ್ಡಂಬಲೂಡೇನೆಂಬುವಳು ॥೨॥

ಹಲವು ಜನರೊಳು ಕಿವಿಮಾತನಾಡುವಳು
ಹಲವು ಜನರೊಳು ಕಡಿದಾಡುವಳು ।
ಹಲವು ಜನರೊಳ ಕೂಗಿ ಬೊಬ್ಬೆಯನಿಡುವಳು
ತಳವಾರ ಚಾವಡಿಯಲಿ ಬರಲಿ ಹೆಣ್ಣು ॥೩॥

ಪರಪುರುಷರ ಕೂಡಿ ಸರಸವಾಡುತ ಹೋಗಿ
ನೆರೆದಿದ್ದ ಸಭೆಯಲಿ ಕರೆಯುವಳು ।
ಮರೆಸಿ ತನ್ನವಗುಣ ಗಾಡಿಯೆಂದು ಮೆರೆವಳು
ಕರಿರೂಪದವಳ ನೀ ಕೆಣಕದಿರಣ್ಣ ॥೪॥

ಏಸು ಗೃಹಗಳೆಂದು ಎಣಿಸಿ ನೋಡಿಬಂದು
ಬೇಸರದೆ ಜನಕೆ ಹೇಳುವಳು ।
ಲೇಸಾಗಿ ಪುರಂದರವಿಠಲನು ಹೇಳಿದ
ಹೇಸಿ ತೊತ್ತನು ನೀನು ಕೆಣಕದಿರಣ್ಣ ॥೫॥

ರಾಗ : ತಾಳ :

ಆಜ್ಞೆಯಿಂದಾಳಬೇಕಣ್ಣ – ಗಂಡ
ನಾಜ್ಞೆಯ ಮೀರಿ ನಡೆವ ಲಂಡಹೆಣ್ಣ ॥ಪ॥

ಅತ್ತೆ ಮಾವನಿಗಂಜದವಳ
ತನ್ನ ಉತ್ತಮ ಪುರುಷನ ಜರಿದು ಝುಂಕಿಪ।
ಭೃತ್ಯರ ಕಂಡು ಬಾಧಿಪಳ - ನಡು
ನೆತ್ತಿಯಿಂದಲೆ ಮೂಗ ಕೆತ್ತಬೇಕವಳ ॥೧॥

ಹಟ್ಟಿ - ಹಟ್ಟಿ ತಿರುಗುವಳ - ತನ್ನ ಗಟ್ಟಿತನದಿ
ಮಾಕು ಮಲುಕು ನುಡಿಯುವಳ।
ಬಿಟ್ಟಕುಚವ ತೋರಿಸುವಳ -
ಇನ್ನು ಹುಟ್ಟು ಹುಟ್ಟಲಿ ಬಾಯಿ ಕುಟ್ಟಬೇಕವಳ ॥೨॥

ಎಂದೂ ಈ ಪರಿಯಿರುವವಳ
ಇನ್ನು ಕೊಂದು ಮಾಡುವುದೇನು ಬಿಡಬೇಕವಳ।
ಒಂದಿಷ್ಟು ಗುಣವಿಲ್ಲದವಳ
ಪುರಂದರವಿಠಲರಾಯನಿಗಲ್ಲದವಳ ॥೩॥

ರಾಗ - ಕಾಂಬೋದಿ ತಾಳ- ಅಟ್ಟ

ಪತಿಭಕುತಿಯಿಲ್ಲದಿಹ ಸತಿಯ ಸಂಗ।
ವ್ರತಗೆಟ್ಟು ಸುಖಪಡೆಯಲಿಲ್ಲವೊ ರಂಗ ॥ ಪ ॥

ಗಂಡ ಬಂದರೆ ಎದ್ದು ನಿಲ್ಲದೆ
ಆ ಕ್ಷಣದಿ ಕಂಡಾಡಿ ಏಕವಚನಂಗಳನಾಗ।
ಅಂಡಲೆದು ಮಾರ್ಮಲೆದು ಕಾಡಿಬೇಡುವ
ಇಂಥ ಭಂಡುದೊತ್ತಿನ ಕೂಟ ಏಳುನಾಗರಕಾಟ ॥ ೧ ॥

ಒಂದು ತಂದರೆ ಮನೆಗೆ ಹತ್ತಾಗಿ ಭಾವಿಸದೆ -
ತಂದರೆ ಹತ್ತು ಮನೆಯೊಳಗೊಂದ ಮಾಡಿ।
ಇಂದಿಗೆ ಇಲ್ಲವೆಂದು ಮುಖವ ತಿರುಹುತಲಿ
ಮುದದಿಂದ ಹೋಹಳು ನಾರಿ ಬಹು ದೊಡ್ಡ ಮಾರಿ ॥ ೨ ॥

ಮಕ್ಕಳಿಗೆ ಇಡಲಿಲ್ಲ ಮರಿಗಳಿಗೆ ತುಡಲಿಲ್ಲ
ಇಕ್ಕುವಡೆ ಬೆಳ್ಳಿ ಬಂಗಾರವಿಲ್ಲ।
ಚಿಕ್ಕವಳು ನಾ ನಿನ್ನ ಕೈಪಿಡಿದು ಕೆಟ್ಟೆನೆಂಬ
ಮೂರ್ಖ ತೊತ್ತಿನ ಸಂಗ ಕುಲಕೆಲ್ಲ ಭಂಗ ॥೩॥

ತಾಯನು ಹೊರಡಿಸು ತಂದೆಯನು ತೆರಳಿಸು
ದಾಯಾದಿಯನು ಮನೆಯಲಿರಿಸಬೇಡ।

ಬಾಯಿನ್ನು ಮನೆ ಕಟ್ಟಿಬೇರಿರುವ ನಾವೆಂಬ
ಮಾಯಕಾತಿಯ ಸಂಗ ಅಭಿಮಾನ ಭಂಗ ॥೪॥

ಇಷ್ಟನೆಲ್ಲವ ಬಿಟ್ಟುಕೆಟ್ಟನೈ ನಾನಿಂದು
ಕಷ್ಟಸೆರೆಯೆನುವೆನೆ ಈ ಪರಿಯಲಿ।
ಸೃಷ್ಟಿಗಧಿಕನಾದ ದಿಟ್ಟ ಶ್ರೀಪುರಂದರ-
ವಿಟ್ಠಲ ಪಶ್ಚಿಮದ ರಂಗಧಾಮ ॥ ೫॥

ರಾಗ - ಪಂತುವರಾಳಿ ತಾಳ - ಅಟ

ಸತಿಗೆ ಸ್ವಾತಂತ್ರ್ಯವ ಕೊಡದಿರಿ ನೀವು
ಮತಿಗೆಟ್ಟು ಭ್ರಮೆಯ ಬಡದಿರಿ ॥ ಪ॥

ಪತಿಗೆ ಬಣ್ಣನೆ ಮಾತನಾಡ್ಯಾಳು ತಾನು
ಮತಿಯಿಲ್ಲದೆ ಮೆಚ್ಚನಾಡಳು।
ಅತಿ ಹರುಷದಲಿ ಬಂದು ಕೂಡ್ಯಾಳು ಕೂಡಿ
ಖತಿ ಕರೆಕರೆಯನು ಮಾಡ್ಯಾಳು ॥ ೧ ॥

ತಂದೆ ತಾಯ್ಗಳನೆಲ್ಲ ತೂರಿಸ್ಯಾಳು ನೀ
ಒಂದೆಡೆ ಬಾಯೆಂದು ಬರಿಸ್ಯಾಳು।
ನಿಂದಿಸಿ ಬೆಯ್ಯುತ ಬೆರಸ್ಯಾಳು ನಿನ್ನ
ನೊಂದು ಪಡಿ ಭತ್ತಕೆ ಬಾಯ ತೆರೆಸ್ಯಾಳು ॥ ೨ ॥

ತಂದದ್ದರೊಳಗರ್ಧ ಕದ್ದಾಳು ಕದ್ದು
ತಂದು ಸುಳ್ಳು ಹೇಳಿ ಮೆದ್ದಾಳು।
ಮುಂದಿದ್ದ ಕೂಸಿನ ಹೊದ್ದಳು ಹತ್ತು
ಮಂದಿಮುಂದೆ ಅಡ್ಡಬಿದ್ದಾಳು ॥ ೩ ॥

ಉಂಡ ಊಟವೆಲ್ಲ ನೆನೆಸ್ಯಾಳು ತನ್ನ
ಮಂಡೆ ಕೆದರಿಕೊಂಡು ಸೆಣಸ್ಯಾಳು।
ಭಂಡುಮಾಡಿ ಬಾಯ ತೆರಿಸ್ಯಾಳು ನಿನ್ನ
ಕೊಂಡ ಕೋತಿಯಂತೆ ಕುಣಿಸ್ಯಾಳು ॥ ೪ ॥

ಕರೆಕರೆ ಸಂಸಾರ ಸ್ಥಿರವಲ್ಲ ಈ
ದುರುಳ ಹೆಣ್ಣಿನ ಸಂಗ ಸುಖವಿಲ್ಲ।
ನೆರೆಹೊರೆಯವರು ನಗುವರೆಲ್ಲ
ನಮ್ಮ ಪುರಂದರವಿಠಲನು ತಾ ಬಲ್ಲ ॥ ೫ ॥

ರಾಗ - ಕಾಂಭೋಜಿ ಝಂಪೆತಾಳ

ತಂಗಿಗ್ಹೇಳಿದ ಕೃಷ್ಣ ಚಂದದಲಿ ಬುದ್ಧಿ ॥ ಪ ॥
ಅತ್ತೆಯ ಮನೆಯಲ್ಲಿ ಇರುವಂಥ ಸುದ್ದಿ ॥ ಅ.ಪ ॥

ಯಾರೇನು ಅಂದರೂ ಮೋರೆಯನು ತಿರುಹದಿರು
ಮೋರೆ ಮೇಲೆ ಕೈಯೆತ್ತಿ ಬಲ್ಲಳೆಂದೆಣಿಸಿ
ವಾರಿಗೇವರ ಕೂಡಿ ನೀರನ್ನು ತರುವಾಗ
ವಾರೆಗಣ್ಣಲಿ ನೋಟ ನೋಡದಿರು ಕಂಡ್ಯ ॥೧॥

ಪರರ ಒಡವೆಯ ಕಂಡು ದುರುಳ ಮಾತಾಡದಿರು
ನೆರೆಹೊರೆಯರಿಗೆ ನೀನು ತಲೆಬಾಗಿ ನಡೆಯೆ
ಪರರ ಮಾತುಗಳಿಂದ ದುರುಳಳೆಂದೆಣಿಸಬೇಡ
ನೆರೆಹೊರೆಯರ ಕಂಡು ನೀ ಬದುಕುಮಾಡಮ್ಮ ॥೨॥

ಬಂಗಾರದ ಪೇಟೆಯೊಳು ಅಂಗಡಿಗೆ ಹೋಗದಿರು
ಅಂಗನೇರಿಗೆ ಘ್ರಾನಭಂಗಾಗಿ ನಡೆಯೆ
ಅಂಗನೇರಿಗೆ ನಿನ್ನಂತರಂಗವ ಹೇಳದಿರು
ಬಂಗಾರವಸ್ತ್ರಗಳು ಮುಚ್ಚಿಕೊಳ್ಳಮ್ಮ ॥೩ ॥

ಹಾಕಿದ್ದು ನೀನುಂಡು ಬೇಕೆಂದು ಬೇಡದಿರು
ಸಾಕು ಸಾಕು ಎಂಬ ನಾಚಿಕೆಯ ಹಿಡಿಯೆ
ನಾಕುಮಂದಿಯರೊಡನೆ ಕೋಂಕೆ ಮಾತಾಡದಿರು
ಲೋಕದೊಳಿವಳೊಬ್ಬ ಮೂಕಿಯೆಂದೆನಿಸೆ ॥೪॥

ಇಷ್ಟರು ಅಂದರು ನಿಷ್ಠೂರವಾಡದಿರು
ಘಟ್ಟಿ ಮಾಡಮ್ಮ ನಿನ್ನ ಮನಸು
ಸೃಷ್ಟಿಯೊಳಗೆ ನಮ್ಮ ಪುರಂದರವಿಠಲನ್ನ
ಶ್ರೇಷ್ಠನಾದ ಕೃಷ್ಣನ್ನ ತಂಗಿಯೆಂದೆನಿಸೆ ॥೫॥

★★★★★

॥ ಶ್ರೀಕೃಷ್ಣಾರ್ಪಣಮಸ್ತು ॥

ಸಮರ್ಪಿತಂ ಮಯಾ ಭವೇತ್ ಸುಮಧ್ವನುತ್ತವಾಣಿನಾ ।
ರಮಾರಮೇಶಪಾದಯೋಃ ಪ್ರಭಂಜನಾಭಿಧಾಯುಜಾ ॥

******

# ನಮ್ಮ ಮುಂದಿನ ಪ್ರಕಾಶನಗಳು

## ಸಂಸ್ಕೃತ ಗ್ರಂಥಗಳು

೧. ಶ್ರೀಜಯಂತೀನಿರ್ಣಯ
(ಶ್ರೀರಾಮಚಂದ್ರತೀರ್ಥರು ಹಾಗೂ ಶ್ರೀ ಸತ್ಯಪರಾಯಣತೀರ್ಥರ ವ್ಯಾಖ್ಯಾನಗಳ ಸಮೇತ)

೨. ಬಿಲ್ವಮಂಗಲಃ ಸಾಧುಃ
(ಶ್ರೀವಿಜ್ಞಾನತೀರ್ಥರು ಹಾಗೂ ಶ್ರೀಸತ್ಯಪರಾಯಣತೀರ್ಥರ ವ್ಯಾಖ್ಯಾನಗಳ ಸಮೇತ)

೩. ತತ್ತ್ವಸಾರ ಸಮುದ್ಧೃತಿ (ಶ್ರೀತಾಮ್ರಪರ್ಣಿ ಆನಂದತೀರ್ಥಾಚಾರ್ಯರ ಕೃತಿ)

೪. ಶ್ರೀಮದ್ಭಾಗವತ (ಪರಿಷ್ಕೃತ ಪಾಠ, ಶ್ರೀಮದ್ಭಾಗವತತಾತ್ಪರ್ಯ ಸಮೇತ)

೫. ಋಙ್ಮಂತ್ರಸುಧಾ

೬. ಶ್ರೀವಾದಿರಾಜಸ್ವಾಮಿಗಳ ಪ್ರಮೇಯಮಾಲಿಕಾ

## ಕನ್ನಡ ಕೃತಿಗಳು

೧. ಮಧ್ವಭಾರತ - ಮಹಾಭಾರತತಾತ್ಪರ್ಯನಿರ್ಣಯದ ಕಥಾರೂಪ

೨. ಮಧ್ವಸಿದ್ಧಾಂತ - ಮಧ್ವಸಿದ್ಧಾಂತದ ಸ್ಥೂಲಪರಿಚಯ

೩. ಚಾತುರ್ಮಾಸ್ಯವ್ರತ

೪. ಉಪನಯನ

೫. ವಿವಾಹ

೬. ರುಗ್ಮಿಣೀಶವಿಜಯ - ಮೂಲ, ಅನುವಾದ, ವಿವರಣೆಗಳ ಸಮೇತ

೭. ಶ್ರೀಮದ್ಭಾಗವತ (ಮೂಲಶ್ಲೋಕಗಳು, ಅನುವಾದ, ವಿವರಣೆಗಳ ಸಮೇತ-೧೦ ಸಂಪುಟಗಳಲ್ಲಿ)

೮. ಋಗ್ಭಾಷ್ಯ (ಮೂಲ, ವೇದಮಂತ್ರಗಳು, ಭಾಷ್ಯ, ಅನುವಾದ, ವಿವರಣೆಗಳ ಸಮೇತ)

೯. ದ್ವಾದಶಸ್ತೋತ್ರ (ಅನುವಾದ, ವಿವರಣೆಗಳ ಸಮೇತ)

೧೦. ಸ್ತೋತ್ರಮಾಲಿಕಾ - ಭಾಗ ೯, ೧೦, ೧೧ (ವೈಷ್ಣವಗುರುಸ್ತೋತ್ರಮಾಲಿಕೆಗಳು)

೧೧. ಸ್ತೋತ್ರಮಾಲಿಕಾ - ಭಾಗ ೧೨ (ಪೌರಾಣಿಕಸ್ತೋತ್ರಮಾಲಿಕಾ)

೧೨. ಪಿತೃಯಜ್ಞ

೧೩. ಗೋವಿನ ಮಹಿಮೆ

೧೪. ಶ್ರೀಮನ್ಮಧ್ವಾಚಾರ್ಯರ ಅಪ್ರಸಿದ್ಧ ಶ್ರುತಿಗಳು
(ಪ್ರೊ. ರೋಖಿ ಮೆಸ್ಕಿಟಾ ಮಾಡಿರುವ ಆಕ್ಷೇಪಗಳಿಗೆ ಉತ್ತರ - ಆಂಗ್ಲ ಹಾಗೂ ಕನ್ನಡ ಭಾಷೆಗಳಲ್ಲಿ)

೧೫. ವೈಷ್ಣವಮುನಿವೃಂದಚರಿತೆ - ಸಕಲವೈಷ್ಣವ ಮಹಾಪುರುಷರ ಪರಿಚಯ

೧೬. ದ್ವೈತವೇದಾಂತಗ್ರಂಥಸೂಚೀ

